|| ಶ್ರೀಃ ||

ಆಸ್ತಿಕಪಂಚಾಂಗನಿರೂಪಣಪೂರ್ವಕ

# ದೃಕ್ಪಂಚಾಂಗಖಂಡನಂ.

[illegible]

ವೇದಾಂತಾಲಂ[illegible], ಮಹಾ[illegible] ಬಿರುದಾಂಕಿತ
ಬ್ರಹ್ಮಶ್ರೀ ವೇ|| [illegible] ಶಂಭು ಗ[illegible] ಭಟ್ಟರು
ಕಿನ್ನಾರು ಶ್ರೀ[illegible]

ಸಹಲೇಖಕರು:—
ಕೈ. ವಾ. ಬ್ರಹ್ಮಶ್ರೀ ವೇ|| ಸೂರಿ ಕೃಷ್ಣ ಭಟ್ಟರು.

ಪರಿಷ್ಕರ್ತರು:—
[illegible]ರಂ. ದೈವಜ್ಞಭೂಷಣ, ವಿದ್ಯಾವಾರಿಧಿ ಇತ್ಯಾದಿ
ಬಿರುದಾಂಕಿತರಾದ
[illegible]ದ್ಧಾಂತಿ ಮೊಗೇರಿ ಭಾಸ್ಕರ ಅಡಿಗಳು.

ಪ್ರಕಾಶಕರು:—
[illegible]ಲಂಕಾರೇತ್ಯಾದಿ ಬಿರುದಾಂಕಿತರಾದ
[illegible]ತವೇದಾಂತವಿದ್ವಾನ್
[illegible]ರ್ಕ ಸೂರಿ ರಾಮಚಂದ್ರ ಶಾಸ್ತ್ರಿಗಳು.

ಶ್ರೀ ಶಾ. ಗತಶಕೆ ೧೮೬೬ ತಾರಣ ಸಂ||

([illegible] ಪುಸ್ತಕದ ಎಲ್ಲ ಹಕ್ಕುಗಳು ಕಾದಿಡಲ್ಪಟ್ಟವೆ.)

[illegible]ಥದ ಬೆಲೆ:— ಸಿದ್ಧಾಂತಪಂಚಾಂಗವನ್ನನುಸರಿಸಿ
ಧರ್ಮಕರ್ಮಗಳನ್ನಾಚರಿಸುವದು.

ಈ ಗ್ರಂಥವು ದೊರೆಯುವ ಸ್ಥಳ.

ಶ್ರೀ|| ವೇ|| ಗಣಪತಿ ಕುಪ್ಪಯ್ಯ ಹೆಗಡೆ.
ಶ್ರೀರಾಮಚಂದ್ರಸಂಸ್ಕೃತಪಾಠಶಾಲಾಧ್ಯಾಪಕ.
ಪೋಸ್ಟ—ಹೆಗಡೆ. ತಾಲೂಕ—ಕುಮಟಾ. (ಉತ್ತರ ಕನ್ನಡ)

ಲೇಖಕರ ವಿಳಾಸ:—
ಬ್ರಹ್ಮಶ್ರೀ. ವೇ|| ಶಂಭು ಗೋಪಾಲಕೃಷ್ಣ ಭಟ್ಟರು. ಕಡತೋಕಾ
ಶ್ರೀಜಗದ್ಗುರುವಿದ್ಯಾರಣ್ಯಸಂಸ್ಕೃತಪಾಠಶಾಲಾಧ್ಯಾಪಕರು.
ಪೋಸ್ಟ—ಕಡತೋಕಾ. ತಾಲೂಕ—ಹೊನ್ನಾವರ. (ಉತ್ತರ ಕನ್ನಡ)

ಪರಿಷ್ಕರ್ತರ ವಿಳಾಸ:—
ಬ್ರಹ್ಮಶ್ರೀ ವೇ|| ಸಿದ್ಧಾಂತಿ ಮೊಗೇರಿ ಭಾಸ್ಕರ ಅಡಿಗಳು.
ಪೋಸ್ಟ— ಉಪ್ಪುಂದ. ತಾಲೂಕ—ಕುಂದಾಪುರ. (ದಕ್ಷಿಣ ಕನ್ನಡ)

ಪ್ರಕಾಶಕರ ವಿಳಾಸ:—
[illegible] ವೇ|| ರಾಮಚಂದ್ರ ಶಾಸ್ತ್ರಿ, ಸೂರಿ. ಅದ್ವೈತವೇದಾಂತವಿದ್ವಾನ್
[illegible] ಹೊನ್ನಾವರ. (ಉತ್ತರ ಕನ್ನಡ)

[illegible] ವಿಚಾರಿಸತಕ್ಕದ್ದಿದ್ದರೆ ಈ ಮೇಲೆ
[illegible] ದರೂ ವಿಚಾರಿಸಬಹುದು.



[illegible] by
[illegible] Masur, at the
[illegible] Works, Ltd., KUMTA.

ಈ ಗ್ರಂಥವು ದೊರೆಯುವ ಸ್ಥಳ.

ಶ್ರೀ॥ ವೇ॥ ಗಣಪತಿ ಕುಪ್ಪಯ್ಯ ಹೆಗಡೆ.
ಶ್ರೀರಾಮಚಂದ್ರಸಂಸ್ಕೃತಪಾಠಶಾಲಾಧ್ಯಾಪಕ.
ಪೋಸ್ಟ—ಹೆಗಡೆ. ತಾಲೂಕ—ಕುಮಟಾ. (ಉತ್ತರ ಕನ್ನಡ)

ಲೇಖಕರ ವಿಳಾಸ:—
ಬ್ರಹ್ಮಶ್ರೀ. ವೇ॥ ಶಂಭು ಗೋಪಾಲಕೃಷ್ಣ ಭಟ್ಟರು. ಕಡತೋಕಾ
ಶ್ರೀಜಗದ್ಗುರುವಿದ್ಯಾರಣ್ಯಸಂಸ್ಕೃತಪಾಠಶಾಲಾಧ್ಯಾಪಕರು.
ಪೋಸ್ಟ—ಕಡತೋಕಾ. ತಾಲೂಕ—ಹೊನ್ನಾವರ. (ಉತ್ತರ ಕನ್ನಡ)

ಪರಿಷ್ಕರ್ತರ ವಿಳಾಸ:—
ಬ್ರಹ್ಮಶ್ರೀ ವೇ॥ ಸಿದ್ಧಾಂತಿ ಮೊಗೇರಿ ಭಾಸ್ಕರ ಅಡಿಗಳು.
ಪೋಸ್ಟ— ಉಪ್ಪುಂದ. ತಾಲೂಕ—ಕುಂದಾಪುರ. (ದಕ್ಷಿಣ ಕನ್ನಡ)

ಪ್ರಕಾಶಕರ ವಿಳಾಸ:—
...ಶ್ರೀ ವೇ॥ ರಾಮಚಂದ್ರ ಶಾಸ್ತ್ರಿ ಸೂರಿ. ಅದ್ವೈತವೇದಾಂತವಿದ್ವಾನ್
...ಹೊನ್ನಾವರ. (ಉತ್ತರ ಕನ್ನಡ)

...ವಿಚಾರಿಸತಕ್ಕದ್ದಿದ್ದರೆ ಈ ಮೇಲೆ
...ದರೂ ವಿಚಾರಿಸಬಹುದು.



...y
...Masur, at the
...Works, Ltd., KUMTA.

ಕೈ. ವಾ. ಬ್ರಹ್ಮಶ್ರೀ ಕೆಕ್ಕಾರು ಶಿವಭಟ್ಟರು





ಖ್ಯಾತೋಽಯಂ ಶಿವಭಟ್ಟ ಇತ್ಯಭಿಧಯಾ ಕೆಕ್ಕಾರುಸಂಜ್ಞೇಽಭವತ್ ।
ಗ್ರಾಮೇ ಸ್ಥಾಪಿತದೇವಭಾಷಿತಕಲಾಶಾಲಸ್ತ್ವನೇಕಸ್ಥಲೇ ॥
ಸತ್ಕೀರ್ತಿಶ್ಚ ಮಹಾನ್ ಸುಶಿಷ್ಯಗಣವಾನ್ ನಾನಾಗಮಾಂಜ್ಞಾತವಾನ್ ।
ಸದ್ವೃತ್ತಃ ಕವಿತಾಪಟುರ್ಬಹುಕೃತಿಃ ಶಾಂತೋ ರತೋ ಬ್ರಹ್ಮಣಿ ॥

ಈ ಸಮಗ್ರಗ್ರಂಥವು ಕೈ. ವಾ. ಶ್ರೀ ಶಿವಭಟ್ಟರ ದಿವ್ಯಚರಣಗಳಲ್ಲಿ
ಭಕ್ತಿಪೂರ್ವಕವಾಗಿ ಸಮರ್ಪಿಸಲ್ಪಟ್ಟಿದೆ.

## ॥ सत्यमेव जयति नानृतम् ॥

## ದೃಗ್ವಾದಿಗಳಿಗೆ ಆಹ್ವಾನ.

ಈಗಿನ ನಿಮ್ಮ ನವೀನದೃಕ್ಪಂಚಾಂಗವೇ ಶಾಸ್ತ್ರಸಿದ್ಧವಾದುದೆಂದು ವಾದಿಸುವ ಮುಂಚೆ ಈ ಕೆಳಗೆ ಕಾಣಿಸಿರುವ ೧೨ ( ಸೂರ್ಯಸಂಖ್ಯಾತ ) ಪ್ರಶ್ನೆಗಳಿಗೆ ನೀವು ಸಪ್ರಮಾಣವಾಗಿ ಉತ್ತರಕೊಡಬೇಕು.

—ಪ್ರಶ್ನೆಗಳು—

೧. ವೈದಿಕಧರ್ಮೀಯರ ಪಂಚಾಂಗಗಣಿತಕ್ಕೆ ಶಾಸ್ತ್ರೋಕ್ತ ಕರ್ಮಕಾಲವನ್ನು ನಿರ್ಣಯಿಸುವುದೇ ಮುಖ್ಯಪ್ರಯೋಜನವಲ್ಲವೇ ? ಅಲ್ಲವಾದರೆ ಮತ್ತೇನು ?

೨. ಪಂಚಾಂಗಗಣಿತಕ್ಕೆ ಕರ್ಮಕಾಲನಿರ್ಣಯವೇ ಮುಖ್ಯಪ್ರಯೋಜನವಾಗಿರುವಲ್ಲಿ ಶಾಸ್ತ್ರೀಯನಿಯಮವನ್ನೇನೂ ಗಣಿಸದೆ, ತಿಥ್ಯಾದಿಗಳ (ವೃದ್ಧಿ-ಕ್ಷಯ) ಗಣಿತದಲ್ಲಿ ಆಕರ್ಷಣಾದಿ ವಸ್ತುಸ್ವಭಾವವೇ ನಿಯಾಮಕವೆಂದು ತಿಳಿದು, ಅವಕ್ಕನುಸಾರವಾಗಿ ಪಂಚಾಂಗಗಣಿತಕ್ರಮವನ್ನು ಆಗಾಗ ಪರಿವರ್ತಿಸುತ್ತಿದ್ದರೆ ವೃದ್ಧಿ-ಕ್ಷಯಗಳಲ್ಲಿ ನಿಷ್ಕೃಷ್ಟವಾದ ಪರಿಮಿತಿಯೇನೂ ಇಲ್ಲದೆ ಹೋಗುವುದರಿಂದ ಅಂತಹ ನಿರವಧಿಕ ವೃದ್ಧಿ-ಕ್ಷಯಗಳನ್ನು ಹೊಂದುವ ತಿಥ್ಯಾದಿಗಳ ವ್ಯಾಪ್ತಿಯನ್ನು ಧರ್ಮಶಾಸ್ತ್ರದಂತೆ ನಿರ್ಣಯಿಸಲ್ಪಡತಕ್ಕ ಸಕಲ ಕರ್ಮಕಾಲಗಳಲ್ಲಿಯೂ ಹೊಂದಿಸಲಿಕ್ಕೆ ಸಾಧ್ಯವಿದೆಯೇ ?

೩. ಧರ್ಮಶಾಸ್ತ್ರದಂತೆ ವಿಹಿತವಾದ ಕರ್ಮಕಾಲವೇ ಸಿಗದಿರುವಾಗ ಶಾಸ್ತ್ರಾನುಸಾರವಾಗಿ ಕರ್ಮಗಳನ್ನು ಆಚರಿಸಲಿಕ್ಕೆ ಅವಕಾಶವೆಲ್ಲಿ ?

೪. ನಿಮ್ಮ ದೃಕ್ಪಂಚಾಂಗದ ಅಷ್ಟವೃದ್ಧಿ,ದಶಕ್ಷಯಲಕ್ಷಣದ ತಿಥ್ಯಾದಿಗಳಿಂದ ಆಬ್ದಿಕಶ್ರಾದ್ಧಾದಿ ಅನೇಕಕರ್ಮಗಳ ಕಾಲನಿರ್ಣಯವಾಗುವುದಿಲ್ಲವೆಂದು ಈ ಗ್ರಂಥದಲ್ಲಿ ಸಿದ್ಧಪಡಿಸಿರುತ್ತೇವೆ. ಅದು ಸರಿಯಲ್ಲವೆಂತಾಗಲೀ, ಅಷ್ಟವೃದ್ಧಿ, ದಶಕ್ಷಯಲಕ್ಷಣದ ದೃಕ್ತಿಥಿಯೇ ಧರ್ಮಾಚರಣೆಗೆ ಯೋಗ್ಯವಾದ್ದೆಂದು ಸ್ಪಷ್ಟವಾಗಿ ಹೇಳಿರುವ ಧರ್ಮಶಾಸ್ತ್ರದ ಒಂದು ವಚನವನ್ನಾದರೂ ತೋರಿಸಲಿಕ್ಕಾಗಲೀ ನಿಮಗೆ ಶಕ್ಯವಿದೆಯೇ ?

೫. ಶಾಸ್ತ್ರತಃ ಕಾಲಸ್ವರೂಪವಾಗಿರುವ ತಿಥ್ಯಾದಿಗಳು ಗ್ರಹಣಾದಿಗಳಂತೆ ದೃಗ್ಗೋಚರವಾಗತಕ್ಕವುಗಳಲ್ಲವೆಂದು ನಾವು ಈ ಗ್ರಂಥದಲ್ಲಿ ಸಿದ್ಧಪಡಿಸಿರುತ್ತೇವೆ. ಅದಕ್ಕೆ ನಿಮ್ಮ ಉತ್ತರವೇನು ?

೬. ಸ್ವಭಾವತಃ ಪ್ರತ್ಯಕ್ಷವಲ್ಲದ ತಿಥ್ಯಾದಿಗಳು ನಿಮ್ಮ ದೃಕ್ಪಂಚಾಂಗ ಗಣಿತದಂತೆಯೂ ಸಹ ಭೂಮಧ್ಯ(ಭೂಗರ್ಭದ ಕೇಂದ್ರ)ದಲ್ಲಾಗಲಿ, ಭೂಪೃಷ್ಠದಲ್ಲಾಗಲಿ ಎಲ್ಲಿಯೂ ಪ್ರತ್ಯಕ್ಷವಾಗತಕ್ಕವುಗಳಲ್ಲವೆಂದು ನಾವು ಸಿದ್ಧಪಡಿಸಿ

ರುತ್ತೀವೆ. ಈ ಬಗ್ಗೆ ನಿಮ್ಮ ಹೇಳಿಕೆಯೇನು ?

೭. ದೃಕ್ಸಿದ್ಧ ಸಂಸ್ಕಾರಗಳಿಂದ ಸಿದ್ಧವಾದ ದೃಕ್ಪಂಚಾಂಗದ ತಿಥಿಯನ್ನನುಸರಿಸಿ ಶ್ರಾದ್ಧಾದಿಗಳನ್ನು ಆಚರಿಸುವವರು ಪಿತೃಗಳ ಶಾಪಕ್ಕೆ ಗುರಿಯಾಗಿ, ಪುಣ್ಯಕ್ಷಯದಿಂದ ದುರ್ಗತಿಹೊಂದುತ್ತಾರೆಂದು ಸ್ಪಷ್ಟವಾಗಿ ಹೇಳಿರುವ ಪ್ರಮಾಣಿಕವಚನವನ್ನು ಮುಂದೆ ಕಾಣಿಸಿದ್ದೇವೆ. ತದ್ವಿರುದ್ಧವಾಗಿ ಸಿದ್ಧಾಂತಗಣಿತಸಿದ್ಧವಾದ ತಿಥಿಯಲ್ಲಿ ಕರ್ಮಾಚರಣೆಮಾಡುವವರು ದೋಷಿಗಳಾಗುವರೆಂದು ಸ್ಪಷ್ಟವಾಗಿ ಹೇಳಿರುವ ಪ್ರಮಾಣೋಕ್ತಿಯನ್ನು ತೋರಿಸಲಿಕ್ಕೆ ನಿಮಗೆ ಶಕ್ಯವಿದೆಯೇ ?

೮. "ಉತ್ತರಾಯಣ" ವೆಂಬ ಶಬ್ದವು ನಿರಯನಮಕರಾದಿಯಾದ ೬ ಸೌರಮಾಸಗಳೆಂಬ ಅರ್ಥವುಳ್ಳ ಯೋಗರೂಢಶಬ್ದವೆಂದು ಸಪ್ರಮಾಣವಾಗಿ ಸಿದ್ಧಪಡಿಸಿರುತ್ತೇವೆ. ಅದು ಸರಿಯಲ್ಲವೆಂತಾಗಲಿ, ನೀವು ಕಲ್ಪಿಸಿಕೊಂಡಿರುವ ಸಾಯನ ಅಯನವೆಂಬ ಅರ್ಥದಲ್ಲಿಯೂ ಉತ್ತರಾಯಣವೆಂದೇ ರೂಪಸಿದ್ಧಿಯಾಗುವುದೆಂತಾಗಲಿ ಶಾಸ್ತ್ರತಃ ಸಿದ್ಧಪಡಿಸಲಿಕ್ಕೆ ನಿಮಗೆ ಶಕ್ಯವಿದೆಯೇ ?

೯. ಶಾಸ್ತ್ರತಃ ನಿರಯನ ಕರ್ಕಟ,ಮಕರಸಂಕ್ರಾಂತಿಗಳಿಂದಲೇ ದಕ್ಷಿಣೋತ್ತರಾಯಣಾರಂಭವು ಪರಿಗ್ರಾಹ್ಯವಾಗಿರುವುದೆಂದು ಸಪ್ರಮಾಣವಾಗಿ ಮಹಾಭಾರತದ ಭೀಷ್ಮನಿರ್ಯಾಣಕಾಲದ ಉದಾಹರಣ ಸಹ ಕೊಟ್ಟು ಸಿದ್ಧಪಡಿಸಿದ್ದೇವೆ. ಆ ಬಗ್ಗೆ ನಿಮ್ಮ ಉತ್ತರವೇನು ?

೧೦. ಇತ್ತೀಚೆಗೆ ಭಾಸ್ಕರೀಯ ಬೀಜೋಪನಯವೆಂಬ ಹೆಸರಿನಿಂದ ಮುದ್ರಿತವಾಗಿರುವ ಗ್ರಂಥವು ಸುಪ್ರಸಿದ್ಧ ಭಾಸ್ಕರಾಚಾರ್ಯರಿಂದಲೇ ರಚಿತವಾದ್ದೆಂದು ನಂಬಲಿಕ್ಕೆ ಶಕ್ಯವಿಲ್ಲವೆಂದು ಸಕಾರಣವಾಗಿ ತೋರಿಸಿದ್ದೇವೆ. ಅದು ಈಗ ಇರುವಂತೆಯೇ ಸಾಕಲ್ಯವಾಗಿ ಭಾಸ್ಕರೀಯಕೃತಿಯೇ ಸರಿ; ಎಂದು ಸಿದ್ಧಪಡಿಸಲಿಕ್ಕೆ ಶಕ್ಯವಿದೆಯೇ ?

೧೧. ನಿಮ್ಮ ನವೀನದೃಕ್ಪಂಚಾಂಗದ ಹೊರತು ಅನಾದಿಕಾಲದಿಂದ ಈವರೆಗಿನ ಯಾವುದೊಂದು ಪಂಚಾಂಗದಲ್ಲಾದರೂ ಬಾಣವೃದ್ಧಿ,ರಸಕ್ಷಯಲಕ್ಷಣವಿಲ್ಲದ ತಿಥಿಯಾಗಲಿ, ಸಾಯನದಕ್ಷಿಣೋತ್ತರಾಯಣಗಳಾಗಲಿ ಇದ್ದಿತ್ತೆಂದು ತೋರಿಸಲಿಕ್ಕೆ ಶಕ್ಯವಿದೆಯೇ ?

೧೨. ದೃಕ್ತಿಥಿಯಿಂದ ಸಾವಿರಾರು ಕರ್ಮಗಳಿಗೆ ಕಾಲನಿರ್ಣಯವಾಗದೆ. ಬಾಧೆಯುಂಟಾಗುವುದೆಂದು ಉದಾಹರಣಸಹಿತವಾಗಿ ದೃಗ್ಗಣಿತಪ್ರಭೆಯಲ್ಲಿಯೂ, ಮತ್ತು ಕಾಲಮಾಧವದಲ್ಲಿ ಆರು ಮುಹೂರ್ತಗಳ ತಿಥಿಕ್ಷಯವು ಹೇಗೂ ಸಂಭವಿಸುವುದಿಲ್ಲವೆಂದೂ, ಮೇಷಾದಿಸಂಕ್ರಾಂತಿಗಳೂ, ಸಾಯನದಿನಗಳೂ ಬೇರೆಬೇರೆಯಾಗಿರುವುವೆಂದೂ, ಶ್ರೌತ, ಸ್ಮಾರ್ತಕರ್ಮಗಳಲ್ಲಿ ದಕ್ಷಿಣೋತ್ತರಾಯಣಗಳನ್ನು ಕರ್ಕಟ,ಮಕರಸಂಕ್ರಾಂತಿಗಳಿಂದಲೇ ಪರಿಗಣಿಸತಕ್ಕದ್ದೆಂದೂ ಸ್ಪಷ್ಟವಾಗಿ ನಿರ್ಣಯಿಸಲ್ಪಟ್ಟಿರುವುದರಿಂದ ನಿಮ್ಮ ದೃಕ್ಪಂಚಾಂಗ

ದ ವಿಶಿಷ್ಟವಿಷಯಗಳು ಸಮೂಲವಾಗಿ ಖಂಡಿಸಲ್ಪಟ್ಟಿದ್ದು ಅದರಂತೆ ಈ ಗ್ರಂಥದಲ್ಲಿಯೂ ಸಹ ನಾವು ಸಿದ್ಧಾಂತಪಡಿಸಿರುವಲ್ಲಿ ಮೇಲಿನ ಗ್ರಂಥಗಳನ್ನು ರಚಿಸಿದವರಾದ ಚತುರ್ವೇದಭಾಷ್ಯಾಚಾರ್ಯ, ಶ್ರೀಮಜ್ಜಗದ್ಗುರುವಿದ್ಯಾರಣ್ಯಸ್ವಾಮಿಗಳವರು ಸಹ ಅವಿದ್ಯಾವಂತರೆಂದೂ, ಅವರ ನಿರ್ಣಯವು ಸರಿಯಾದ್ದಲ್ಲವೆಂದೂ ವಾದಿಸಲಿಕ್ಕಾದರೂ ನಿಮಗೆ ಸಾಧ್ಯವಿದೆಯೇ ?

ಪ್ರಕೃತ ಇವಿಷ್ಟು ವಿಷಯಗಳಿಗೆ ಸಮರ್ಪಕವಾಗಿ ಉತ್ತರ ಕೊಡಿರಿ !

ನಿಮ್ಮ ಉತ್ತರವೇನೆಂಬುದನ್ನು ನಿರೀಕ್ಷಿಸಿಕೊಂಡಿರುತ್ತೇವೆ.

---

## ವಿಷಯಾನುಕ್ರಮಣಿಕೆಯು.

# ಪ್ರಸ್ತಾವನೆ.

ಅಚಿಂತ್ಯಾಯಾವ್ಯಕ್ತರೂಪಾಯ ನಿರ್ಗುಣಾಯ ಗುಣಾತ್ಮನೇ ।
ಸಮಸ್ತಜಗದಾಧಾರಮೂರ್ತಯೇ ಬ್ರಹ್ಮಣೇ ನಮಃ ॥

ಲೋಕದಲ್ಲಿ ಧರ್ಮಾಚರಣೆಯೇ ಸಕಲ ಶ್ರೇಯಸ್ಸಿಗೂ ಕಾರಣವಾದುದೆಂದು ಬೇರೆ ಹೇಳಬೇಕಾಗಿಲ್ಲ. ಇಷ್ಟೇ ಅಲ್ಲ; 'ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ' ಎಂಬ ವೇದವಾಕ್ಯದಂತೆ ಈ ಜಗತ್ತೆಲ್ಲವೂ ಧರ್ಮದಲ್ಲಿಯೇ ನೆಲೆಗೊಂಡಿರುವುದರಿಂದ ಧರ್ಮವೆಂಬುದು ಜಗತ್ತಿನ ಎಲ್ಲ ವಿಷಯಗಳಿಗಿಂತಲೂ ಹೆಚ್ಚಿನದೆಂದು ತಿಳಿಯಬೇಕಾಗಿದೆ. ಆದರೆ ಈ ಧರ್ಮದ ಸ್ವರೂಪವು ಪ್ರತ್ಯಕ್ಷದಿಂದ ನೋಡಿ ತಿಳಿಯಲಿಕ್ಕೆ ಶಕ್ಯವಿಲ್ಲದ್ದಾದ್ದರಿಂದ ಅಪೌರುಷೇಯವೂ, ನಿತ್ಯವೂ ಆಗಿರುವ ವೇದಗಳು, ಮತ್ತು ತದನುಸಾರವಾಗಿ ವೇದದರ್ಶಿಗಳಾದ ಮಹರ್ಷಿಗಳಿಂದ ರಚಿಸಲ್ಪಟ್ಟಿರುವ ಸ್ಮೃತಿ, ಪುರಾಣ, ಸಿದ್ಧಾಂತ, ಆಗಮಾದಿ ಶಾಸ್ತ್ರಗಳು ಅದನ್ನು ವಿಸ್ತಾರವಾಗಿ ನಿರೂಪಿಸಿರುತ್ತವೆ. ಇವುಗಳನ್ನಾದರೂ ಸಾಕಲ್ಯವಾಗಿ ತಿಳಿದುಕೊಳ್ಳುವುದು ಬಹುದುಃಸಾಧ್ಯವಾಗಿರುವುದರಿಂದ ಹೇಮಾದ್ರಿ, ಮಾಧವಾದಿ ಸರ್ವಜ್ಞಕಲ್ಪರಾದ ವಿಶಿಷ್ಟರು ಅವುಗಳ ಸಾರವನ್ನೆಲ್ಲಸಂಗ್ರಹಿಸಿ ಧರ್ಮನಿಬಂಧಗಳನ್ನು ರಚಿಸಿರುವರು. ಇವುಗಳಿಗೇ ಧರ್ಮಶಾಸ್ತ್ರವೆನ್ನುವುದೂ ರೂಢಿಯಾಗಿದೆ. ಇವುಗಳಲ್ಲಿ ಹೇಳಿರುವ ವಿಷಯಗಳೆಲ್ಲ ಮುಖ್ಯವಾಗಿ ವಿಧಿ, (ಮಾಡಬೇಕಾದ್ದು) ನಿಷೇಧ (ಮಾಡಬಾರದ್ದು) ಎಂದು ಎರಡು ವಿಧವಾಗಿದ್ದು ಇವುಗಳಿಗೆ ಧರ್ಮ–ಅಧರ್ಮ, ಪುಣ್ಯ–ಪಾಪ ಮುಂತಾದ ಹೆಸರುಗಳೂ ರೂಢಿಯಲ್ಲಿವೆ. ಮತ್ತು ಇವೆಲ್ಲವೂ ಕ್ರಿಯಾತ್ಮಕವಾಗಿರುವುದರಿಂದ ಕರ್ಮಗಳೆಂದೂ ಪ್ರಸಿದ್ಧವಾಗಿರುವವಲ್ಲದೆ ಆಯಾ ಕರ್ಮಗಳು ಇಂತಿಂತಹ ಕಾಲದಲ್ಲಿಯೇ ಆಚರಿಸಲ್ಪಡತಕ್ಕವುಗಳೆಂದು ಕಾಲನಿರ್ದೇಶಪೂರ್ವಕವಾಗಿಯೇ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟಿವೆ. ಇದಲ್ಲದೆ ಅವುಗಳಿಗೆ ವಿಹಿತವಾಗಿರುವ ಕಾಲಗಳು ಸಹ ತಿಥಿ, ವಾರ, ನಕ್ಷತ್ರ, ಸಂಕ್ರಾಂತ್ಯಾದಿ ಹಲವು ಪ್ರಕಾರಗಳಾಗಿಯೂ ನಾನಾತರದ ಭೇದೋಪಭೇದವುಳ್ಳವುಗಳಾಗಿಯೂ ಇರುವುದರಿಂದ ಅವುಗಳನ್ನೆಲ್ಲ ಕರ್ಮಾಚರಣೆಗೆ ಯೋಗ್ಯವಾಗುವಂತೆ ನಿರ್ಣಯಿಸಿಕೊಳ್ಳತಕ್ಕ ಕ್ರಮವನ್ನೂ, ಮತ್ತು ಅವನ್ನು ಸಾಧಿಸತಕ್ಕ ರೀತಿಯನ್ನೂ ಸಹ ಶಾಸ್ತ್ರಕರ್ತರಾದ ಮಹರ್ಷಿಗಳೇ ಪ್ರತ್ಯೇಕವಾಗಿ ನಿರೂಪಿಸಿರುವರು. ಇದನ್ನೇ ಜ್ಯೋತಿಷಶಾಸ್ತ್ರ (ಸಿದ್ಧಾಂತ) ವೆನ್ನುವುದಾಗಿದೆ. ಇದರಲ್ಲಿ ಹೇಳಿರುವ ಕ್ರಮದಂತೆ ಕರ್ಮಕಾಲ ನಿರ್ಣಯಕ್ಕೆ ಯೋಗ್ಯವಾದ ತಿಥ್ಯಾದಿಗಳನ್ನು ಸಾಧಿಸಿ ಸಿದ್ಧಪಡಿಸಿರುವುದಕ್ಕೆ ರೂಢಿಯಲ್ಲಿ 'ಪಂಚಾಂಗ'ವೆಂದು ಹೆಸರು ಬಂದಿದೆ. ಇಂತಹ ಕರ್ಮಕಾಲನಿರ್ಣಯಕ್ಕಾಗಿರುವ ಪಂಚಾಂಗವನ್ನು ಸಿದ್ಧಾಂತ (ಗಣಿತ) ಶಾಸ್ತ್ರಾಭಿಜ್ಞರು ಆಯಾ ದೇಶಕ್ಕನುಸಾರವಾಗಿ ಗುಣಿಸಿ ಸಿದ್ಧಪಡಿಸುತ್ತಿರುವುದು ಮೊದಲಿನಿಂದ

ಲೂ ಪ್ರಚಾರದಲ್ಲಿದೆ. ನಮ್ಮ ದೇಶದಲ್ಲಿಯೂ ಆಯಾ ಪ್ರಾಂತದ ಗಣಿತಜ್ಞರು ಹಿಂದಿನಿಂದಲೂ ಪಂಚಾಂಗವನ್ನು ತಯಾರಿಸುತ್ತಿದ್ದು ಆದರಂತೆ ನಮ್ಮ ಉತ್ತರಕನ್ನಡಜಿಲ್ಲೆಯಲ್ಲಿಯೂ ತಯಾರಿಸುತ್ತಿದ್ದರು. ಈ ಮೊದಲು ಕೈ.ವಾ.ಶ್ರೀ ವೇ. ನವಿಲಗೋಣ ಕಟ್ಟಿ ಗಣಪಭಟ್ಟರೇ ಮೊದಲಾದವರೂ, ನಮ್ಮ ತೀ.ಸ್ವ. ಪರಮಪೂಜ್ಯಪಿತೃವ್ಯರಾದ ಕೈ.ವಾ.ಶ್ರೀ.ವೇ. **ಸೂರಿ ಕೃಷ್ಣ ಭಟ್ಟ**ರವರೂ ಕೆಲವು ವರ್ಷ ಪಂಚಾಂಗವನ್ನು ಗುಣಿಸಿ ಪ್ರಕಟಿಸಿದ್ದರು. ಇವೆಲ್ಲ ಸೂರ್ಯಸಿದ್ಧಾಂತಾನುಸಾರಿ ಪಂಚಾಂಗಗಳೇ ಆಗಿದ್ದವು. ಕೆಲವು ಸಮಯಗಳಿಂದ ಶ್ರೀ. ವೇ. **ರಾಮಾ ತಿಮ್ಮಣ್ಣ ಪಂಡಿತ** ಬಗ್ಗೋಣ ಇವರು ಪಂಚಾಂಗವನ್ನು ಸಿದ್ಧಪಡಿಸುತ್ತಿದ್ದು ಆದರಲ್ಲಿ ಅದು ದೃಗ್ಗಣಿತದ ಪ್ರಕಾರ ಸಿದ್ಧಪಡಿಸಿದ್ದಂತ ಕಾಣಿಸುತ್ತಿದ್ದರೂ ತಿಥ್ಯಾದಿಗಳ ವೃದ್ಧಿ-ಕ್ಷಯಗಳಲ್ಲಿಯೂ, ಅಯನಾದಿ ವಿಷಯಗಳಲ್ಲಿಯೂ ಸಿದ್ಧಾಂತಪಂಚಾಂಗಾನುಸಾರವಾಗಿಯೇ ಅದು ಇರುತ್ತಿದ್ದದರಿಂದ ನಮ್ಮ ಜಿಲ್ಲೆಯ ಅನೇಕ ಕಡೆಗಳಲ್ಲಿ ಅದನ್ನನುಸರಿಸಿ ಕರ್ಮಾಚರಣೆಯನ್ನು ನಡಿಸಿಕೊಂಡು ಬಂದಿದ್ದರು. ಹೀಗಿರುವಾಗ ಕಳೆದ ಪ್ರಮೋದ ಸಂ।ದ ಮೊದಲುಗೊಂಡು ಅವರು ತಮ್ಮ ಪೂರ್ವಕ್ರಮವನ್ನು ಬದಲಾಯಿಸಿ ಶ್ರೀ.ವೇ.**ವೆಂಕಟರಮಣ ಮಹಾಬಲೇಶ್ವರ ಪಂಡಿತ** ಗೋಕರ್ಣ ಇವರ ಸಹ ಸಂಪಾದಕತ್ವದಿಂದ ೮-೧೦ ಘಟಿಗಳು ವೃದ್ಧಿ-ಕ್ಷಯಬರುವ ತಿಥ್ಯಾದಿಗಳನ್ನೂ, ಕರ್ಕಟ-ಮಕರಸಂಕ್ರಾಂತಿಗಳಿಗಿಂತ ೨೩-೨೪ ದಿನಗಳ ಮೊದಲು ದಕ್ಷಿಣೋತ್ತರಾಯಣಗಳ ಆರಂಭವನ್ನೂ ಕಾಣಿಸಿರುವ ಹೊಸಬಗೆಯ ಪಂಚಾಂಗವನ್ನು ಆರಂಭಿಸಿದರು. ಇವರು ಹೀಗೆ ಆರಂಭಿಸುವುದಕ್ಕಿಂತ ಮೊದಲೇ ಮೇಲೆ ಕಾಣಿಸಿದ ನಮ್ಮ ಕೈ.ವಾ. ಪೂಜ್ಯಪಿತೃವ್ಯರು ಅಂತಹ ನವೀನರೀತಿಯ ಪಂಚಾಂಗವು ವಿಹಿತವಾದ್ದಲ್ಲವೆಂಬುದನ್ನು ನಮ್ಮ ಜಿಲ್ಲೆಯ ವೃತ್ತಪತ್ರಿಕೆಯಲ್ಲಿಯೇ ಪ್ರಕಟಿಸಿದ್ದರು. ಅದನ್ನಿವರು ಗಮನಿಸದೆ ಒಮ್ಮೆಲೇ ಹೊಸತರದ ಪಂಚಾಂಗವನ್ನು ಪ್ರಕಟಿಸತೊಡಗಿದ್ದರಿಂದ ಆ ವಿಷಯವಾಗಿ ಜನರಲ್ಲಿ ಬಲವಾದ ಜಿಜ್ಞಾಸೆಯೂ, ಕ್ಷೋಭೆಯೂ ಉಂಟಾಗಹತ್ತಿತು. ಅದೇ ಕೆಲವು ಸಮಯದೊಳಗೆ ಒಬ್ಬ ಯೋಗ್ಯ ನಿಷ್ಠಾವಂತರ ಮರಣವು ಸಂಭವಿಸಿದಾಗ ನಿಜವಾಗಿ ಉತ್ತರಾಯಣವಾಗಿದ್ದರೂ ಇವರ ಹೊಸ ಬಗೆಯ ಪಂಚಾಂಗದಂತೆ ದಕ್ಷಿಣಾಯನಾರಂಭವಾಗಿತ್ತೆಂಬ ಕಾರಣದಿಂದ ತನ್ನಿಮಿತ್ತವಾಗಿ ಪ್ರಾಯಶ್ಚಿತ್ತವಿಧಾನವೂ ನಡೆಯಿಸಲ್ಪಟ್ಟಿತು. ಇವನ್ನೆಲ್ಲ ನೋಡಿ ಸಹಿಸಲಾಗದೆ ಧರ್ಮನಿಷ್ಠರೂ, ಬಹುಮಾನ್ಯರೂ, **ವಿದ್ಯಾವಿನೋದ, ವೇದಾಂತಕಲಾನಿಧಿ** ಇತ್ಯಾದ್ಯನೇಕ ಬಿರುದಾಂಕಿತರೂ ಆದ ಕೀರ್ತಿಶೇಷ ಕೈ. ವಾ. ಶ್ರೀ. **ಕೆಕ್ಕಾರ ಶಿವಭಟ್ಟ**ರವರು **'ಆಸ್ತಿಕದಕ್ಷಿಣೋತ್ತರಾಯಣಂ'** ಎಂಬ ಲೇಖವನ್ನೂ, ಅವರ ಅನುಜರಾದ ಶ್ರೀ ವೇ. **ಗಣಪತಿ ರಾಮ ಭಟ್ಟ**ರು **'ಅಯನನಿರ್ಣಯಸಂಗ್ರಹಃ'** ಎಂಬ ಲೇಖನವನ್ನೂ ಬರೆದು ಇವರ ನವೀನರೀತಿಯ ಸಾಯನಅಯನಗಳು ಕರ್ಮಾಚರಣೆಗೆ ಯೋಗ್ಯವಲ್ಲವೆಂದು ಖಂಡಿಸಿದರು.

ಆಗ ಅದೇ ಪಂಚಾಂಗಸಂಪಾದಕರಲ್ಲೊಬ್ಬರಾದ ಮೇಲೆ ಕಾಣಿಸಿದ ಶ್ರೀ.ವೇ ವೆಂಕಟರಮಣ ಪಂಡಿತರು ' ಅಯನಮೀಮಾಂಸಾ ' ಎಂಬ ಲೇಖನವನ್ನು ಬರೆದು ಅದರಲ್ಲಿ ತಾವು ತೊಡಗಿದ ಸಾಯನಾಯನವೇ ಯುಕ್ತವಾದುದೆಂದು ವಾದಿಸಿದರು. ಅದೇ ಸಮಯದಲ್ಲಿ, ಈಗ ಬ್ರಹ್ಮೀಭೂತರಾಗಿರುವ ಶ್ರೀಮತ್ಪರ ಮಹಂಸಪರಿವ್ರಾಜಕಶ್ರೀಶಂಕರಾನಂದಯತಿವರ್ಯರ ಅಧ್ಯಕ್ಷತೆಯಲ್ಲಿ ನಮ್ಮ ಕರ್ಕಿಗ್ರಾಮದಲ್ಲಿಯೇ ಉಭಯಪಕ್ಷಗಳ ಪಂಡಿತರ ಸೇರುವಿಕೆಯಿಂದ ಸಾರ್ವ ಜನಿಕ ಸಭೆ ಕೂಡಿ ಈ ನವೀನಪಂಚಾಂಗದ ವಿಷಯವಾಗಿ ಚರ್ಚೆ ನಡೆದು ಅದು ಕರ್ಮಾಚರಣೆಗೆ ವಿಹಿತವಾದುದಲ್ಲವೆಂತಲೇ ನಿರ್ಣಯವಾಯಿತು. ಅನಂತರ ಸಭಾಧ್ಯಕ್ಷರಾದ (ಮೇಲೆಕಾಣಿಸಿರುವ) ಶ್ರೀಶಂಕರಾನಂದಯತಿಗಳು " ಶಾಸ್ತ್ರವಿಹಿತಪಂಚಾಂಗನಿರ್ಣಯಃ " ಎಂಬ ಗ್ರಂಥವನ್ನು ರಚಿಸಿ ಅದರ ಲ್ಲಿ ದೃಕ್ತುಲ್ಯಾದಿಗಳೂ, ಸಾಯನಾಯನಗಳೂ ಕರ್ಮಯೋಗ್ಯವಲ್ಲವೆಂದು ಬಹು ಪ್ರಮಾಣಗಳನ್ನು ಕೊಟ್ಟು ನಿರ್ಣಯಿಸಿದ್ದು ಅದನ್ನು ಮೇಲೆ ಕಾಣಿಸಿರು ವ ನಮ್ಮ ಪಿತೃವ್ಯರು (ಕೈ.ವಾ.ಶ್ರೀ.ಕೃಷ್ಣಭಟ್ಟರು) ಪ್ರಕಟಿಸಿದರು. ಈ ಗ್ರಂಥ ವೂ, ಮತ್ತು ಈ ವಿವಾದಕ್ಕೆ ಸಂಬಂಧಪಟ್ಟ ಹಿಂದೆ ಕಾಣಿಸಿರುವ ಎಲ್ಲ ಲೇಖ ನಗಳೂ ಸಂಸ್ಕೃತಭಾಷೆಯಲ್ಲಿ ಬರೆಯಲ್ಪಟ್ಟಿದ್ದವು. ಆ ಸಮಯದಲ್ಲಿ ಮೇಲೆ ಹೇಳಿದ ಕರ್ಕಿಸಭೆಯ ನಿರ್ಣಯದಂತೆ ಮೊದಲಿನಿಂದಲೂ ಸೂರ್ಯಸಿದ್ಧಾಂ ತಾನುಸಾರವಾಗಿ ಗುಣಿಸಲ್ಪಡುತ್ತಿದ್ದ ನೊಗೇರಿ ಪಂಚಾಂಗವು ಈ ಪ್ರಾಂತದಲ್ಲಿ ಹೆಚ್ಚಾಗಿ ಪ್ರಚಾರವಾಗಿ ಆದರಿಂದ ನಮ್ಮ ಆಚರಣೆಗಳಿಗೆಲ್ಲ ತುಂಬಾ ಸಹಾಯ ವಾಯಿತು. ತರುವಾಯ ಹಿಂದೆ ಕಾಣಿಸಿದ ಪಂಚಾಂಗಸಂಪಾದಕರಲ್ಲಿ ಇನ್ನೊ ಬ್ಬರಾದ ಶ್ರೀ.ರಾಮ ತಿಮ್ಮಣ್ಣ ಪಂಡಿತರು "ಶಾಸ್ತ್ರಸಿದ್ಧದೃಕ್ಪಂಚಾಂಗಸಮರ್ಥ ನೆ ಮತ್ತು ಅಯನಸಮರ್ಥನೆ" ಎಂಬ ಹೆಸರಿನ ಒಂದು ಪುಸ್ತಕವನ್ನು ಕನ್ನಡ ದಲ್ಲಿ ಪ್ರಕಟಿಸಿದರು. ಇದರಿಂದ ಕನ್ನಡನಾಡಿನ ಸಾರ್ವಜನಿಕರಲ್ಲಿ ದೃಕ್ಪಂಚಾಂ ಗವು ಶಾಸ್ತ್ರಸಮ್ಮತವಾದುದೆಂತಲೂ, ಸಿದ್ಧಾಂತಪಂಚಾಂಗವು ಅಯುಕ್ತವಾ ದುದೆಂತಲೂ ವಿಪರೀತಭಾವನೆಯುಂಟಾಗಲಿಕ್ಕೆ ಅವಕಾಶವಾದ್ದರಿಂದಲೂ, ಮತ್ತು ಸಂಸ್ಕೃತವನ್ನರಿಯದ ಬಹು ಜನರಿಗೆ ದೇಶಭಾಷೆಯಗ್ರಂಥಗಳೇ ಉಪ ಯೋಗಕರವಾಗುವುದರಿಂದಲೂ ಸನಾತನವೈದಿಕಧರ್ಮದಲ್ಲಿ ಶ್ರದ್ಧಾವರಗಳಿ ರುವ ಬಹುಜನ ಸಮಾಜಕ್ಕೆ ಸಿದ್ಧಾಂತಪಂಚಾಂಗದ ಔಚಿತ್ಯ, ಹಾಗೂ ನವೀ ನದೃಕ್ಪಂಚಾಂಗದ ಅಶಾಸ್ತ್ರೀಯತೆಯನ್ನು ಸ್ಪಷ್ಟವಾಗಿ ತಿಳಿಸಲಿಕ್ಕೆ ಕನ್ನಡದಲ್ಲಿ ಯೇ ಒಂದು ಗ್ರಂಥವನ್ನು ಪ್ರಕಟಿಸಬೇಕೆಂದು ಈ ಗ್ರಂಥದ ಮುಖಪತ್ರದಲ್ಲಿ ಕಾಣಿಸಿರುವ ಗ್ರಂಥಕರ್ತರಿಬ್ಬರೂ ಕೂಡಿ ನಿಶ್ಚಯಿಸಿಕೊಂಡು ಅದರಂತೆ ಗ್ರಂಥವನ್ನು ರಚಿಸಿದ್ದಲ್ಲದೆ ಈ ಪೈಕಿ ನಮ್ಮ ಪಿತೃವ್ಯರು ಇದರ ಪ್ರಕಾಶಕರಾಗ ಬೇಕೆಂದೂ ನಿಶ್ಚಯವಾಗಿತ್ತು. ಈ ಎಡೆಯಲ್ಲಿಯೇ ಶಿವಮೊಗ್ಗದಲ್ಲಿಯೂ, ಮೈಸೂರಿನಲ್ಲಿಯೂ ಜ್ಯೋತಿಃಸಮ್ಮೇಲನಗಳು ನಡೆದವು. ಶಿವಮೊಗ್ಗದಲ್ಲಿ

ಸಿದ್ಧಾಂತಪಕ್ಷಕ್ಕೇನೇ ಹೆಚ್ಚಿನ ಪ್ರಾಶಸ್ತ್ಯವುಂಟಾಗಿತ್ತೆಂದೂ, ಮೈಸೂರಿನಲ್ಲಿಯೂ ಸಿದ್ಧಾಂತಪಕ್ಷವೇ ಪ್ರಬಲವಾಗಿದ್ದರೂ ಸಿದ್ಧಾಂತಿಗಳ ಅವ್ಯವಹಾರ್ಯವಾದ ಸೌಜನ್ಯಾತಿಶಯದಿಂದಲೂ, ದೃಕ್ಪಕ್ಷೀಯರ ಕಾಲೋಚಿತವಾದ ಚತುರೋಪಾಯಗಳಿಂದಲೂ ಸಭಾಸಮ್ಮತವಾಗಿ ಯಾವ ನಿರ್ಣಯವೂ ಆಗದೆ ಸಿದ್ಧಾಂತಪಕ್ಷದವರೇ ಪ್ರತ್ಯೇಕವಾಗಿ ತಾತ್ಕಾಲಿಕವಾದ ತಮ್ಮದೊಂದು ನಿರ್ಣಯವನ್ನು ಪ್ರಕಟಿಸಿದರೆಂಬುದೂ ಈ ಮೊದಲೇ ಭಾವ, ಯುವ, ಧಾತೃ ಸಂವತ್ಸರಗಳ ಮೊಗೇರಿ ಪಂಚಾಂಗದ ಪ್ರಸ್ತಾವನೆಯಲ್ಲಿ ವಿವರವಾಗಿ ಪ್ರಕಟಿಸಲ್ಪಟ್ಟದೆ. ಮೈಸೂರುಸಮ್ಮೇಲನವು ನಡೆದಾಗ ಅಲ್ಲಿಯೇ ಇರುತ್ತಿದ್ದ ನಮಗೆ ಅದೇನೂ ಅಪರಿಚಿತವಾದದ್ದಲ್ಲ. ಇದಾದನಂತರ ಮೊದಲಿನಿಂದಲೂ ನಮಗೆ ಪರಿಚಿತರಾಗಿದ್ದು ಸಿದ್ಧಾಂತಪದ್ಧತಿಯು ಉನ್ನತಿಗಾಗಿ ತನುಮನಧನಗಳಿಂದ ಅವಿಶ್ರಾಂತವಾಗಿ ಪ್ರಯತ್ನಿಸುತ್ತಿರುವ, ಮತ್ತು ತಮ್ಮ ಅಗಾಧವಾದ ವಿದ್ಯಾನೈಪುಣ್ಯಾದಿ ಗುಣಾತಿಶಯಗಳಿಂದ ಪ್ರಖ್ಯಾತರಾಗಿರುವ ಸಿದ್ಧಾಂತಕೇಸರಿ, ದೈವಜ್ಞಭೂಷಣ, ವಿದ್ಯಾವಾರಿಧಿ ಇತ್ಯಾದ್ಯನೇಕ ಬಿರುದಾಂಕಿತರಾದ ಸನ್ಮಾನ್ಯ ಬ್ರಹ್ಮಶ್ರೀ ವೇ|| ಸಿದ್ಧಾಂತಿ ಮೊಗೇರಿ ಭಾಸ್ಕರ ಅಡಿಗಳು ನಮ್ಮೆಲ್ಲರ ಅಪೇಕ್ಷೆಯಂತೆ ಪ್ರತ್ಯೇಕವಾಗಿ ನಮ್ಮ ಉತ್ತರ ಕನ್ನಡ ಜಿಲ್ಹೆಯ ಧರ್ಮಾಭಿಮಾನಿಗಳ ಉಪಯೋಗಕ್ಕೆಂದೇ ಸೂರ್ಯಸಿದ್ಧಾಂತರೀತಿಯ ಪಂಚಾಂಗವನ್ನು ಸಿದ್ಧಪಡಿಸುವದನ್ನು ವಹಿಸಿಕೊಂಡು ಆ ಬಗ್ಗೆ ನಮ್ಮ ಜಿಲ್ಲೆಯ ಸನ್ಮಾನ್ಯ ಶ್ರೀ ಕೆಕ್ಕಾರು ಧರ್ಮವಿದ್ಯಾಪರಿಷತ್ತಿನ ಉದಾರಾಶ್ರಯವನ್ನು ಸಹ ಪಡೆದು ಅದರಂತೆ ಪಂಚಾಂಗವನ್ನು ತಯಾರಿಸುತ್ತಿರುವಲ್ಲಿ ಆ ಪಂಚಾಂಗದ ಔಚಿತ್ಯವನ್ನು ಸ್ವತಃ ಮನಗಂಡ ನಮ್ಮ ಪಿತೃವ್ಯರು ಅದರ ಪರಿಶೋಧಕತ್ವದಲ್ಲಿ ಭಾಗವಹಿಸಿ ಕಳೆದ ಯುವಸಂವತ್ಸರಾದಿಯಾಗಿ ಈ ಪಂಚಾಂಗದ ಪ್ರಚಾರದಲ್ಲಿ ಪ್ರವೃತ್ತರಾದರು. ಮತ್ತು ಮೈಸೂರಿನಲ್ಲಿ ಪ್ರಕಟವಾಗುವ 'ಶ್ರೀಮನ್ಮಹಾರಾಜಾ ಸಂಸ್ಕೃತ ಮಹಾಪಾಠಶಾಲೆಯ ತ್ರೈಮಾಸಿಕ ಪತ್ರಿಕೆ'ಯಲ್ಲಿ ಅವರು 'ದೃಕ್ಪಂಚಾಂಗವಿಮರ್ಶಃ' ಎಂಬ ಸಂಸ್ಕೃತಲೇಖವನ್ನು ಪ್ರಕಟಿಸಿದರು. ಆದರೆ ಸಾಂಸಾರಿಕವಾದ ಹಲವು ತೊಂದರೆಗಳಿಂದಲೂ, ಮೇಲಿಂದಮೇಲೆ ಬರುತ್ತಿದ್ದ ನಾನಾ ತರದ ಕಾರ್ಯಾಂತರಗಳಿಂದಲೂ, ಇತರ ಶಾರೀರಿಕ ಆಲಸ್ಯಾದಿಗಳಿಂದಲೂ ಮೇಲೆ ಹೇಳಿದಂತೆ ಮೊದಲೇ ಸಿದ್ಧವಾದ ಕನ್ನಡ ಗ್ರಂಥವನ್ನು ಪ್ರಕಟಿಸಬೇಕೆಂಬ ಅವರ ಸದಿಚ್ಛೆಯು ಪೂರ್ತಿಯಾಗದೆ ಅವರು ಪರಂಧಾಮವನ್ನು ಸೇರಬೇಕಾದ ಶೋಚನೀಯ ಪ್ರಸಂಗವು ಬಂದುದು ನಮ್ಮೆಲ್ಲರ ದುರ್ದೈವವೇ ಆಗಿದೆ. ಆ ನಂತರ ಅವರ ಸದಿಚ್ಛೆಯನ್ನು ನಿರ್ವರ್ತಿಸುವದು ನಮ್ಮ ಕರ್ತವ್ಯವೆಂಬ ಭಾವನೆಯಿಂದ ನಾವು ಅದನ್ನು ಪ್ರಕಟಗೊಳಿಸಬೇಕೆಂದು ಅವಲೋಕಿಸುವಲ್ಲಿ ಆಗಿಂದಾಗಲೇ ಮುದ್ರಿಸಲಿಕ್ಕೆ ಸರಿಯಾಗಿ ಅದು ಬರೆಯಲ್ಪಟ್ಟಿರದೆ ಅದರಲ್ಲಿ ಕೆಲವು ತಿದ್ದುಪಡಿಗಳನ್ನು ಮಾಡಿ

ಕೆಲವು ಹೊಸ ವಿಷಯಗಳನ್ನು ಸಹ ಸೇರಿಸಿ ಪರಿಷ್ಕರಿಸುವದು ಅಗತ್ಯವೆಂದು ತೋರಿದ್ದರಿಂದ ಈ ಕಾರ್ಯವನ್ನು ನಿರ್ವಹಿಸಲಿಕ್ಕೆ ಪ್ರಾಚೀನ, ಮತ್ತು ನವೀನ ಪದ್ಧತಿಯ ಗಣಿತಕ್ರಮಗಳಲ್ಲಿಯೂ, ಮಾರ್ಮಿಕವಾದ ಗಣಿತ, ಗೋಳಗಳ ವಿಶೇಷವಿಜ್ಞಾನದಲ್ಲಿಯೂ ನಿಷ್ಣಾತರೆಂದು ಪ್ರಸಿದ್ಧರಾದ ಮೇಲೆ ಕಾಣಿಸಿದ **ಶ್ರೀ.ವೇ. ಸಿದ್ಧಾಂತಿ ಮೊಗೇರಿ ಭಾಸ್ಕರ ಅಡಿಗರನ್ನು** ಕೇಳಿಕೊಳ್ಳಲಾಗಿ ಅವರು ಸಂತೋಷದಿಂದ ಈ ಕಾರ್ಯವನ್ನು ವಹಿಸಿಕೊಂಡು ಪೂರ್ತಿಗೊಳಿಸಿದರು. ವಿವಿಧರೀತಿಯ ವಿಶೇಷಕಾರ್ಯಗಳಲ್ಲಿ ಪ್ರಾಮುಖ್ಯಭಾಗವನ್ನು ವಹಿಸಿ ದುಡಿಯುತ್ತಿರುವ ಅವರು ತಮ್ಮ ಅಮೋಘವಾದ ದೀರ್ಘಸಮಯವನ್ನು ಈ ಕಾರ್ಯದಲ್ಲಿ ವಿನಿಯೋಗಿಸಿದ್ದು ಅವರ ನಿಃಸ್ವಾರ್ಥಬುದ್ಧಿ, ಸಿದ್ಧಾಂತನಿಷ್ಠೆ ಮುಂತಾದ ಶ್ರೇಷ್ಠಗುಣಗಳ ಪರಾಕಾಷ್ಠೆಯನ್ನು ಸ್ಪಷ್ಟಗೊಳಿಸುತ್ತದೆ. ಹೆಚ್ಚು ಹೇಳುವುದೇನು ? ಈ ಗ್ರಂಥವು ಈ ರೂಪದಲ್ಲಿ ಪ್ರಕಟಗೊಂಡಿರುವುದಕ್ಕೆ ಬಹುಮಟ್ಟಿಗೆ ಅವರ ಪರಿಶ್ರಮವೇ ಕಾರಣವಾಗಿರುವುದರಿಂದ ಇದರ ಹೆಚ್ಚಿನ ಶ್ರೇಯಸ್ಸು ಅವರ ಭಾಗದ್ದಾಗಿದೆ. ಇದರಲ್ಲಿ ಗಣಿತ, ಗೋಳಗಳಿಗೆ ಸಂಬಂಧಿಸಿರುವ ವಿಷಯಗಳಂತೂ ವಿಶೇಷವಾಗಿ ಅವರ ಹೆಚ್ಚಿನ ಪರಿಶ್ರಮವನ್ನೇ ಹೊಂದಿದವುಗಳೆಂದು ನಿಃಸಂಕೋಚವಾಗಿ ಹೇಳುವೆವು. ಮತ್ತು ಈ ಎಲ್ಲ ವಿಷಯಗಳಲ್ಲಿಯೂ ಅವರಿಂದಾದ ಉಪಕೃತಿಯು ನಮ್ಮೆಲ್ಲರಿಗೂ ಚಿರಸ್ಮರಣೀಯವಾಗಿರುವುದು.

ಇನ್ನು ಅವರ ಈ ಪರಿಷ್ಕರಣದ ಕಾರ್ಯದಲ್ಲಿ ಅವರೊಟ್ಟಿಗೆ ಇದ್ದು ಈ ಬಗ್ಗೆ ಅನೇಕತರದ ಸಹಾಯ, ಸೌಕರ್ಯಗಳನ್ನು ಕಲ್ಪಿಸಿಕೊಟ್ಟದ್ದಲ್ಲದೆ ಮುಂದೆ ಈ ಗ್ರಂಥದ ಮುದ್ರಣಕಾರ್ಯದಲ್ಲಿಯೂ ಸಹ ಅವಿಶ್ರಾಂತವಾಗಿ ಹಲವು ವಿಧದಿಂದ ಶ್ರಮಪಟ್ಟಿರುವ ಹೆಗಡೆಯ **ಶ್ರೀ. ವೇ. ಗಣಪತಿ ಶರ್ಮಾ ಧರ್ಮಶಾಸ್ತ್ರಾಲಂಕಾರ** ಇವರಿಗೂ, ಮತ್ತು ಇದರ ಮೂಲಪ್ರತಿಯನ್ನು ತಯಾರಿಸುವಲ್ಲಿ ಬಹುವಿಧದಿಂದ ಸಹಾಯಮಾಡಿರುವ **ದೈವಜ್ಞಭೂಷಣ, ವಿದ್ಯಾವಿಶಾರದ ಶ್ರೀ.ವೇ. ಗಣಪತಿ ಶಂಕರ ಭಟ್ಟ, ಸರ್ಪಕಣೇಶ್ವರ ಕರ್ಕಿ** ಇವರಿಗೂ, ಮತ್ತು ನಮ್ಮ ಈ ಗ್ರಂಥಪ್ರಕಟನೆಯ ಕಾರ್ಯದಲ್ಲಿ ಹಲವು ಬಗೆಯಿಂದ ಸಹಕರಿಸಿರುವ **ಶ್ರೀ.ವೇ. ಹರಿ ಗಣೇಶ ಭಟ್ಟ ವಿದ್ಯಾಭೂಷಣ** ಮಾಣ್ಕೋಜಿ ಕರ್ಕಿ ಇವರಿಗೂ, ಮತ್ತು **ಶ್ರೀ. ವೇ. ಅನಂತ ಶರ್ಮಾ ದೇವನೀಮಠ ವಿದ್ಯಾಭೂಷಣ** ಇವರಿಗೂ ನಾವು ತುಂಬಾ ಕೃತಜ್ಞರಾಗಿರುವೆವು. ಇವಲ್ಲದೆ ಈ ಗ್ರಂಥದ ಪ್ರಕಟನೆಯ ಕಾರ್ಯದಲ್ಲಿ ಮೂಲತಃ ನಮ್ಮನ್ನು ಪ್ರೋತ್ಸಾಹಿಸಿರುವ ಸನ್ಮಾನ್ಯ **ಶ್ರೀ ವಿಶ್ವನಾಥಧರ್ಮವಿದ್ಯಾಪರಿಷತ್ ಕೆಕ್ಕಾರು** ಇವರ ಸತ್ಪ್ರೇರಣೆಯ ಮಹತ್ವವನ್ನಾದರೂ ಈ ಸಂದರ್ಭದಲ್ಲಿ ಮರೆಯಲಾಗದು.

ಇದೆಲ್ಲ ಮುಗಿದು ಗ್ರಂಥವು ಮುದ್ರಣಕ್ಕೆ ಸಿದ್ಧವಾಯಿತಾದರೂ ಮುಂದಿನ ಮುದ್ರಣದ ಕಾರ್ಯವನ್ನು ಸಾಗಿಸುವದು ಕಷ್ಟಕರವಾಗಿ ತೋರಿತು ಧಾರಣೆಗಳೆಲ್ಲ ಮಿತಿಮೀರಿ ಬೆಳೆದಿರುವ ಈ ದುಷ್ಕಾಲದಲ್ಲಿ ಬೆಲೆಯನ್ನೇನೂ

ಇಡದೆ ಕೇವಲ ಧರ್ಮಬುದ್ಧಿಯಿಂದಲೇ ಪ್ರಚಾರಪಡಿಸತಕ್ಕ ಇಷ್ಟೊಂದು ದೊಡ್ಡ ಗ್ರಂಥದ ಮುದ್ರಣದ ವೆಚ್ಚವನ್ನು ನಾವಾದರೂ ಸಹಿಸುವುದು ಹೇಗೆ ? ಹೀಗೆಂದು ಯೋಚಿಸುತ್ತಿರುವಾಗ ಈ ಗ್ರಂಥದ ಮೂಲರಚನೆಯಲ್ಲಿ ಹೆಚ್ಚಿನ ಭಾಗವನ್ನು ನಿರ್ವಹಿಸಿದವರಾಗಿದ್ದು **ಮಹೋಪದೇಶಕರೆಂಬ** ಗೌರವವನ್ನು ಹೊಂದಿದವರೂ, **ವೇದಾಂತಾಲಂಕಾರ** ಎಂಬ ಬಿರುದನ್ನು ಸಂಪಾದಿಸಿದವರೂ, ಧರ್ಮೈಕಪ್ರಾಣರೂ, ನಮ್ಮ ಮೂಲಗುರುಗಳೂ ಆಗಿರುವ ಪೂಜ್ಯರಾದ ಬ್ರಹ್ಮಶ್ರೀ. ವೇ. **ಕಡತೋಕಾ ಶಂಭು ಭಟ್ಟರು** ವಿಪುಲದ್ರವ್ಯ ಸಂಪನ್ನತೆಯಿಂದಲ್ಲವಾದರೂ ತಮ್ಮ ಗುರುವರ್ಯರೂ, ಪುಣ್ಯಶ್ಲೋಕರೂ ಆಗಿರುವ ಕೈ.ವಾ. ಶ್ರೀ.ಕೆಕ್ಕಾರ **ಶಿವಭಟ್ಟರು** ತೊಡಗಿದ ಧಾರ್ಮಿಕಸೇವಾಕಾರ್ಯವಿದೆಂಬ ಗುರುವರ್ಯರ ಮೇಲಿನ ಗುರುತರವಾದ ಭಕ್ತಿಸಂಪನ್ನತೆಯಿಂದ ಪ್ರೇರಿತರಾಗಿ ಇದರ ಪ್ರಕಟನೆಗೆ ಬೇಕಾದ ವೆಚ್ಚವನ್ನೆಲ್ಲ ವಹಿಸಿಕೊಂಡು ಈ ಭಾಗದಲ್ಲಿ ನಮಗೆ ಬಂದ ಬಹು ದೊಡ್ಡ ಎಡರನ್ನು ನಿವಾರಿಸಿದ್ದಕ್ಕಾಗಿ ಅವರಿಗೆ ನಾವು ತುಂಬಾ ಋಣಿಗಳಾಗಿರುತ್ತೇವೆ. ಅವರಿಂದಾದ ಈ ಉಪಕಾರವು ಎಂದೆಂದಿಗೂ ಮರೆಯತಕ್ಕದ್ದಾಗಿಲ್ಲ.

ಇದಲ್ಲದೆ ಶಾಸ್ತ್ರವಿಹಿತವಾಗಿರುವ ಸಿದ್ಧಾಂತಾನುಸಾರಿ ಪಂಚಾಂಗಗಳೇ ಶ್ರೌತ,ಸ್ಮಾರ್ತಾದಿ ಸಕಲ ಕರ್ಮಾನುಷ್ಠಾನಗಳಿಗೂ ಯೋಗ್ಯವಾದವುಗಳೆಂದೂ, ನವೀನದೃಕ್ಪಂಚಾಂಗವೂ, ಸಾಯನಗಣನೆಯ ಅಯನಾರಂಭವೂ ಕರ್ಮಾಚರಣೆಗೆ ಯೋಗ್ಯವಲ್ಲವೆಂದೂ ಈ ಗ್ರಂಥದಲ್ಲಿ ಪ್ರತಿಪಾದಿಸಿದ್ದು ಅದರಂತೆಯೇ ತಮ್ಮ ಅಮೋಘವಾದ ಅಭಿಪ್ರಾಯವನ್ನು ಕೊಟ್ಟು ಅನುಗ್ರಹಿಸಿರುವ ಪೂಜನೀಯರಾದ ಮಠಾಧಿಪತಿಗಳೂ, ಸನ್ಮಾನ್ಯರಾದ ವಿದ್ವಜ್ಜನರೂ ನಮಗೆ ಸರ್ವದಾ ಅಭಿವಂದನೀಯರಾಗಿರುವರು.

ಮತ್ತು ಈ ಗ್ರಂಥದ ಮುದ್ರಣವನ್ನು ಅಷ್ಟು ಉತ್ತಮವಲ್ಲವೆಂಬಂತಾದರೂ ಸಕಾಲದಲ್ಲಿ ಮುಗಿಸಿಕೊಟ್ಟಿರುವ ಕುಮಟೆಯ ರಾಮಕೃಷ್ಣ ಮುದ್ರಣಾಲಯದ ಮಾಲಿಕರ ಆಭಾರವನ್ನು ನಾವು ಮನ್ನಿಸುವುದಲ್ಲದೆ ನಮ್ಮ ಈ ಎಲ್ಲ ಕಾರ್ಯಗಳಿಗೂ ನಿರ್ವಿಘ್ನತೆಯನ್ನು ಕರುಣಿಸಿರುವ ಧರ್ಮರಕ್ಷಕನಾದ **ಶ್ರೀಭಗವಂತನ** ಕೃಪೆಯು ನಿರಂತರವಾಗಿರಬೇಕೆಂದು ಬೇಡಿಕೊಳ್ಳುವೆವು.

ಇನ್ನು ಈ ಗ್ರಂಥವನ್ನು ವಾಚಕರ ಕೈಗೆ ಒಪ್ಪಿಸುವ ಮುಂಚೆ ಅವರಿಗೆ ನಾವು ವಿಜ್ಞಾಪಿಸುವುದೇನಂದರೆ— ಧರ್ಮಪ್ರಚಾರಕ್ಕಾಗಿ ಪ್ರಕಟಿಸಿರುವ ಈ ಗ್ರಂಥದ ಬಗ್ಗೆ ದ್ರವ್ಯರೂಪವಾದ ಮೌಲ್ಯವನ್ನೇನೂ ಅಪೇಕ್ಷಿಸದೆ ಧರ್ಮಾರ್ಥವಾಗಿಯೇ ಇವನ್ನು ಮಹಾಜನರಿಗೆ ಹಂಚುವ ವ್ಯವಸ್ಥೆಯನ್ನು ಮಾಡಿದೆ. ಇದರಲ್ಲಿ ನಿರೂಪಿಸಿರುವಂತೆ ಸಿದ್ಧಾಂತಪಂಚಾಂಗವನ್ನನುಸರಿಸಿ ಕರ್ಮಾಚರಣೆಮಾಡುವುದೇ ತತ್ವತಃ ಈ ಗ್ರಂಥದ ಬೆಲೆಯಾಗಿರುವದು. ಇದು ಕೇವಲ ವಾದಗ್ರಂಥವೆಂದಷ್ಟೇ ಅಲ್ಲ; ಈಗಿನ ಪಂಚಾಂಗವಾದದ ಸಾರವನ್ನು

ಮಾಧ್ಯಸ್ಥ್ಯಬುದ್ಧಿಯಿಂದ ವಿಮರ್ಶಿಸತಕ್ಕವರಿಗೆ ಸಹ ಇದೊಂದು ಬೋಧಪ್ರದವಾದ ಗ್ರಂಥವಾಗಿದೆ. ಮುಖ್ಯವಾಗಿ ಇದರಲ್ಲಿ ದೃಕ್ಪಂಚಾಂಗವು ಶಾಸ್ತ್ರವಿರುದ್ಧವು ಮಾತ್ರವಲ್ಲದೆ ದೃಕ್ಪ್ರತ್ಯಕ್ಷಕ್ಕೂ ಸಹ ಸರಿಯಾದ್ದಲ್ಲವೆಂಬುವದನ್ನು ಹಲವು ವಿಷಯಗಳಿಂದ ಸ್ಪಷ್ಟಪಡಿಸಿದ್ದು, ಸುವಿಚಾರಿಗಳಾದ ವಾಚಕರು ಅವನ್ನೆಲ್ಲ ಸೂಕ್ಷ್ಮವಾಗಿ ಲಕ್ಷಿಸಬೇಕಾಗಿ ವಿನಂತಿ. ಈಗಿನ ಆರ್ಥಿಕ ದುಃಸ್ಥಿತಿಯ ಮೂಲಕ ಮಿತವಾಗಿ ಮುದ್ರಿಸಲ್ಪಟ್ಟಿರುವ ಈ ಗ್ರಂಥದ ಪ್ರತಿಗಳು ಕನ್ನಡನಾಡಿನ ವಾಚಕರಿಗೆಲ್ಲ ಸಾಕಾಗುವಷ್ಟು ಧಾರಾಳವಾಗಿಲ್ಲವಾದುದರಿಂದ ವಾಚಕಮಹಾಶಯರು ಪ್ರತಿಯೊಬ್ಬರೂ ಈ ಗ್ರಂಥವನ್ನು ತಮ್ಮ ಮಟ್ಟಿನ ಉಪಯೋಗಕ್ಕೆ ಮಾತ್ರವೆಂದು ತಿಳಿದುಕೊಳ್ಳದೆ ತಮ್ಮ ತಮ್ಮ ಪರಿಚಯದವರಲ್ಲಿಯೂ ಸಹ ಪ್ರಚಾರಗೊಳಿಸಿ ತನ್ಮೂಲಕ ನಮ್ಮ ಈ ಧಾರ್ಮಿಕಸೇವಾಕಾರ್ಯವು ಸಫಲವಾಗುವಂತೆ ಸಹಾಯ ಮಾಡಬೇಕಾಗಿ ಧರ್ಮಾಭಿಮಾನಿಗಳಾದ ಸಜ್ಜನರಲ್ಲಿ ವಿಜ್ಞಾಪಿಸಿಕೊಳ್ಳುವೆವು.

ಅಂತ್ಯದಲ್ಲಿ ಹೇಳತಕ್ಕ ಇನ್ನೊಂದು ಮಾತೇನಂದರೆ— ಈ ಗ್ರಂಥವನ್ನು ನಾವು ಪ್ರಕಟಿಸಿರುವುದರ ಉದ್ದೇಶವೇನೆಂಬುದನ್ನು ಹಿಂದೆಯೇ ಹೇಳಿರುತ್ತೇವೆ. ವೈಯಕ್ತಿಕವಾಗಿ ಯಾರೊಬ್ಬರನ್ನು ದೂಷಿಸಲಿಕ್ಕಾಗಲಿ, ಭೂಷಿಸಲಿಕ್ಕಾಗಲಿ ಇದನ್ನು ನಾವು ಪ್ರಕಟಿಸಿದ್ದಲ್ಲ. ಪರಂತು ನವೀನದೃಗ್ವಾದಿಗಳು ಶಾಸ್ತ್ರ, ಶಿಷ್ಟಾಚಾರ, ಪೂರ್ವಾಚಾರಗಳಿಗೆಲ್ಲ ವಿರೋಧವಾಗಿ ನಡಿಸಿರುವ, ನಡಿಸುತ್ತಿರುವ, ನಡಿಸುವ ಅಸಂಗತವಾದ ಅಪಪ್ರಚಾರಗಳಿಂದ ನವೀನದೃಕ್ಪಂಚಾಂಗವು ಕರ್ಮಾಚರಣೆಗೆ ಯೋಗ್ಯವಾದ್ದೆಂಬ ವಿಪರೀತಭಾವನೆಯು ಜನರಲ್ಲಿ ಉಂಟಾಗಿ ತನ್ಮೂಲಕ ಅಶಾಸ್ತ್ರೀಯವಾದ ಅನಾಚಾರವು ಜನತೆಯಲ್ಲಿ ಪ್ರಸಾರವಾಗಬಾರದೆಂಬ ಸದುದ್ದೇಶದಿಂದಲೇ ರಚಿತವಾಗಿರುವ ಈ ಗ್ರಂಥವನ್ನು ನಮ್ಮ ಹಿರಿಯ (ಪಿತೃವ್ಯ)ರ ಆ ಸಂಕಲ್ಪವು ನೆರವೇರಬೇಕೆಂದು ನಾವಾದರೂ ಅದೇ ಉದ್ದೇಶದಿಂದಲೇ ಪ್ರಕಟಿಸಿದ್ದಾಗಿದೆ. ಇದರಿಂದ ಮಹಾಜನರು ಸಿದ್ಧಾಂತ, ಮತ್ತು ದೃಕ್ಪಂಚಾಂಗಗಳ ಯುಕ್ತಾಯುಕ್ತತೆಯನ್ನು ತಿಳಿದುಕೊಂಡವರಾಗಿ ಶಾಸ್ತ್ರವಿರುದ್ಧವಾಗಿರುವ ನವೀನದೃಕ್ಪಂಚಾಂಗವನ್ನು ನಿರ್ದಾಕ್ಷಿಣ್ಯವಾಗಿ ಕಿತ್ತೊಗೆದು ಶಾಸ್ತ್ರವಿಹಿತವಾಗಿರುವ ಸಿದ್ಧಾಂತಪಂಚಾಂಗಾನುಸಾರವಾಗಿಯೇ ಸಕಲ ಧರ್ಮಕರ್ಮಗಳನ್ನೂ ಆಚರಿಸಿ ಶ್ರೇಯಸ್ಸನ್ನು ಹೊಂದುವಂತಾಗಬೇಕೆಂದೂ, ನವೀನದೃಕ್ಪಂಚಾಂಗವನ್ನು ಸಿದ್ಧಪಡಿಸುತ್ತಿರುವ ಗಣಕರಾದರೂ ತಮ್ಮ ಅಶಾಸ್ತ್ರೀಯವಾದ ಉಪಕ್ರಮವನ್ನು ಬಿಟ್ಟು ಪೂರ್ವಪದ್ಧತಿಯಂತೆ ಸಿದ್ಧಾಂತಾನುಸಾರವಾಗಿಯೇ ಪಂಚಾಂಗವನ್ನು ಸಿದ್ಧಪಡಿಸಿ ಸತ್ಕೀರ್ತಿಯನ್ನು ಹೊಂದಬೇಕೆಂದೂ ನಮ್ಮ ಸದಿಚ್ಛೆಯಿರುತ್ತದೆ.

ಆ ಪ್ರಕಾರ ಸರ್ವರಿಗೂ ಸದ್ಬುದ್ಧಿಯನ್ನಿತ್ತು ತನ್ಮೂಲಕ ನಮ್ಮೆಲ್ಲರ ಪರಿಶ್ರಮವು ಸಾರ್ಥಕವಾಗುವಂತೆ ಅನುಗ್ರಹಿಸಬೇಕಾಗಿ **ಸರ್ವಪ್ರೇರಕನೂ**

ಸರ್ವಶಕ್ತನೂ ಆಗಿರುವ ಶ್ರೀ ಪರಮಾತ್ಮನನ್ನು ಅನನ್ಯಭಾವದಿಂದ ಪ್ರಾರ್ಥಿಸುವೆವು.

ತಾರಣಸಂವತ್ಸರದ
ಜ್ಯೇಷ್ಠಕೃಷ್ಣ ೧೩
ವಿದ್ಯಾರಣ್ಯಜಯಂತೀ.

ಇತಿ ಬುಧಜನವಶಂವದಃ
ಪ್ರಕಾಶಕಃ
ಹರಿ रामचन्द्र शास्त्री शर्मा.



ಶುದ್ಧಾಶುದ್ಧಪತ್ರಿಕೆಯು.

| ಪು. | ಪಂ. | ಅಶುದ್ಧ. | ಶುದ್ಧ. |
|---|---|---|---|
| ೧೦ | ३ | ಪ್ರತ್ಯಕ್ಷವಿರುವದೆಂದು | ಪ್ರತ್ಯಕ್ಷವಿರುವವೆಂದು |
| ೧೫ | ೬ | ತಿಳಿಯುವುದಾಗಿದೆ | ಭಾವಿಸುವುದಾಗಿದೆ |
| ೨೮ | ೨೪ | ಹೇರುವುದಲ್ಲದ | ಹೇಳಿರುವುದಲ್ಲದೆ |
| ३೨ | ೨೨ | ಸೂಕ್ಷ್ಮತಿಥಿ | ಸೂಕ್ಷ್ಮ ( ? ) ತಿಥಿ |
| ೪೦ | ३೨ | ಆದರೆ | ಅಂದರೆ |
| ೬೭ | ३೦ | ಕಾಣಿಸದ್ದಲ್ಲದೆ | ಕಾಣಿಸಿದ್ದಲ್ಲದೆ |
| ೬೯ | ೫ | ಯಾಕಂದರೆ | ಮತ್ತು |
| ೭೯ | ३ | ಆಯುನ | ಅಯನ |
| ೯೨ | ೧೭ | ಅವರ | ಇವರ |
| ೯೫ | ३೦ | ಚಾಂದ್ರಮಾಸ | ಚಾಂದ್ರಮಾನ |
| ೧೦೨ | ३३ | ನಿರೂಪಿಸಲಿಕ್ಕಾಗಿ ಅದಕ್ಕೆ | ನಿರೂಪಿಸಲಿಕ್ಕಾಗಿ ಹೇಳಲ್ಪಟ್ಟದ್ದು ಅದಕ್ಕೆ |
| ೧೧೦ | ೧೪ | ಇವರ ಹಲವು | ಇವರು ತಮ್ಮ ಹಲವು |
| ,, | ೧೫ | ಆಧಾರವಾಗಿರುವ | ಆಧಾರವಾಗಿ ಮಾಡಿಕೊಂಡಿರುವ |
| ೧೧೪ | ೧३ | ವಿವರಿಸಿರುವುದರಿಂದ | ವಿವರಿಸದಿರುವುದರಿಂದ |
| ೧೨೪ | ೧೯ | ತಿಳಿಕೊಂಡಾರೆಂಸು | ತಿಳಿದುಕೊಂಡಾರೆಂದು |
| ೧३३ | ३३ | ತಾವು | ತಾವು ಮುಂಚೆ |
| ೧३೯ | ೧೦ | ಹೇಳಿರುವುದು | ಹೇಳಿರುತ್ತದೆ. ಅದರಿಂದ |
| ,, | ೧೮ | ಪುಟ ೬೫ ರಲ್ಲಿ | ಪುಟ ೬೫ ರಲ್ಲಿ ಇವರು ಆಕ್ಷೇಪಿಸಿರುವಂತೆ |
| ೧೪೮ | ೧३ | ಹೊಂದುವಲ್ಲಿ | ಹೊಂದಬಹುದಾಗಿದ್ದು |

ಸೂ—ಸಾಮಾನ್ಯವಾಚಕರಿಗೆ ಸಹಜವಾಗಿ ತಿಳಿಯತಕ್ಕ ಕೆಲವು ಅಲ್ಪತರದ ಅಶುದ್ಧಿಗಳನ್ನು ಕಾಣಿಸಿಲ್ಲ.

ॐ

॥ ಶ್ರೀಗಣೇಶಾಯ ನಮಃ ॥



ಆಸ್ತಿಕಪಂಚಾಂಗನಿರೂಪಣಪೂರ್ವಕ

(ನವೀನ)

# ದೃಕ್ಪಂಚಾಂಗಖಂಡನಂ.

उदगादयमादित्यो विश्वेन सहसा सह ।
द्विषंतं मह्यं रंधयन्मो अहं द्विषते रधम् ॥

श्रीसद्गुरुं शिवमशेषजगन्निदानं ज्योतिर्मयं दिनमणिं निखिलांश्च देवान्।
नत्वा महर्षिगणमास्तिकतुष्टिदं दृक्पंचांगखंडननिबंधममुं करोमि ॥१॥

## पीठिका

शास्त्रार्थमपरिज्ञाय । तद्विरुद्धं न बुध्यते ।
अनल्पमेधसां वाऽपि । किं पुनश्चाल्पमेधसाम् ॥२॥

अपि च

विधायको विध्वंसकः । क्रियाक्रमो द्वेधा भवेत् ।
विधाय च स्विष्टं ततो । विरोधकं विध्वंसयेत् ॥३॥

अतः खण्डनार्थं मया शास्त्रसिद्धं विशुद्धं च सिद्धांतपंचांगमादौ ।
निरूप्यास्तिकानां मतं मानहीना कृतिः खण्ड्यते नूत्नदृक्पंचिकात्र ॥
श्रौतं स्मार्तं चार्षवाक्यं प्रमाणं तत्सारं यत्प्रोक्तवन्तो महांतः ।
शिष्टा विद्यारण्यहेमाद्रिमुख्यास्तन्निष्ठा अप्यास्तिका न त्वनिष्ठाः ॥५॥
येना(ऽ)स्तिकाः पण्डितमानभाजो(ऽ)विच्छिन्नपूर्वाचरणा भवन्ति ।
निरूपणं खण्डनमित्युभार्थौ ग्रन्थः कृतस्तद्धृतये* सुयोग्यः ॥६॥

परेषां दूषणे नैव न च पांडित्यदर्शने ।
मत्प्रवृत्तिस्तु शास्त्रोक्तकर्मबोधे चिरं जयेत् ॥७॥



## ಗ್ರಂಥಪ್ರತಿಜ್ಞೆ.

ಅತೀಂದ್ರಿಯದರ್ಶಿಗಳಾದ ಮಹರ್ಷಿಗಳು ಮಾನವರ ಉನ್ನತಿಗಾಗಿಯೇ ಧರ್ಮಶಾಸ್ತ್ರಗಳನ್ನು ನಿರೂಪಿಸಿರುವರು. ಅಂತಹ ಶಾಸ್ತ್ರೋಕ್ತವಾದ ಧರ್ಮಕರ್ಮಗಳನ್ನು ಆಚರಿಸಲಿಕ್ಕೆ ಶಾಸ್ತ್ರೋಚಿತವಾದ ಕಾಲವ್ಯವಸ್ಥೆಯೇ ಬೇಕು. ಆದ್ದರಿಂದ ಶ್ರೌತಸ್ಮಾರ್ತಾದಿ ಶಾಸ್ತ್ರೋಕ್ತ ಕರ್ಮಾನುಷ್ಠಾನಗಳಿಗೆ ಸೂರ್ಯಸಿದ್ಧಾಂತಾನುಸಾರಿಯಾದ §ಬಾಣವೃದ್ಧಿ, ರಸಕ್ಷಯ ಲಕ್ಷಣದ ತಿಥ್ಯಾದಿಗಳಿಂದಲೂ, ಸೂರ್ಯನ ನಿರಯನ ಕರ್ಕ, ಮಕರಸಂಕ್ರಾಂತಿಗಳಿಂದ ಆರಂಭಿಸತಕ್ಕ ದಕ್ಷಿಣೋತ್ತರಾಯಣಗಳಿಂದಲೂ ಕೂಡಿರುವ ಸಿದ್ಧಾಂತಪಂಚಾಂಗವೇ ಸರ್ವಥೈವ ಗ್ರಾಹ್ಯವು; ಇದಕ್ಕೆ ವಿರುದ್ಧವಾಗಿರುವ ದೃಕ್ಪಂಚಾಂಗದ ತಿಥ್ಯಾದಿಗಳೂ, ಸಾಯನ ಉದಗ್ದಕ್ಷಿಣಾಯನಗಳೂ ಸಕಲಕರ್ಮಗಳಿಗೂ ಅಗ್ರಾಹ್ಯವು.



---

* तद्धृतये = तेषां धृतये. पक्षे:– तेषां हतये इति ॥

§ ಬಾಣ=೫ (ಘಟಗಳ) ವೃದ್ಧಿ, ರಸ=೬ (ಘಟಗಳ) ಕ್ಷಯ, ಹೀಗೆ ಬಾಣವೃದ್ಧಿ ರಸಕ್ಷಯವೆಂದು ಹೇಳಿರುವಲ್ಲೆಲ್ಲ ಘಟಿಯ ಪೂರ್ಣಾಂಕವಷ್ಟೇ ಲಕ್ಷಿಸಲ್ಪಟ್ಟದ್ದು ಮುಂದಿನ ವಿಘಟೀರೂಪವಾದ ಅಂಶವು ಉಪೇಕ್ಷಿಸಲ್ಪಟ್ಟಿರುವುದೆಂದು ತಿಳಿಯಬೇಕು.

# ೧. ಆಸ್ತಿಕಪಂಚಾಂಗನಿರೂಪಣ.

'धर्मं जिज्ञासमानानां प्रमाणं परमं श्रुतिः ॥' (मनुः)
तद्दर्शिनामृषीणां च या वाक्सा स्मृतिरुच्यते ॥
'धर्मं जिज्ञासमानानां प्रमाणं परमं स्मृतिः ॥' (स्मृत्यर्णवः)
दृष्टोक्तयोर्नार्थभेदः प्रमाणं च स्मृतिस्ततः ॥
प्रत्यक्षं पशुभिश्चापि ग्राह्यं तस्माद्धि केवलम् ॥
परमार्थं प्रमाणं तु शास्त्रं सर्वार्थसाधनम् ॥

ಮೊದಲನೆಯ ಪ್ರಶ್ನೆ:— ಮನುಷ್ಯರ ಉನ್ನತಿಗಾಗಿ ಧರ್ಮಶಾಸ್ತ್ರಗಳು ರಚಿಸಲ್ಪಟ್ಟಿರುವವೆಂಬುದು ಸರಿ; ಆದರೆ ಉನ್ನತಿಗೆ ಸಾಧಕವಾದ ಅಂಥ ಧರ್ಮಶಾಸ್ತ್ರಗ್ರಂಥಗಳು ಯಾವವು ? ಮತ್ತು ಅವುಗಳನ್ನು ರಚಿಸಿರುವ ಮಹರ್ಷಿಗಳು ಯಾರು ?

ಉತ್ತರ:--"ಮನ್ವತ್ರಿವಿಷ್ಣುಹಾರೀತಯಾಜ್ಞವಲ್ಕ್ಯೋಶನೋಽಂಗಿರಾಃ । ಯಮಾಪಸ್ತಂಬಸಂವರ್ತಾಃ ಕಾತ್ಯಾಯನಬೃಹಸ್ಪತೀ ॥ ಪರಾಶರವ್ಯಾಸಶಂಖಲಿಖಿತಾ ದಕ್ಷಗೌತಮೌ । ಶಾತಾತಪೋ ವಸಿಷ್ಠಶ್ಚ ಧರ್ಮಶಾಸ್ತ್ರಪ್ರವರ್ತಕಾಃ ॥" ಎಂದು ಯಾಜ್ಞವಲ್ಕ್ಯಸ್ಮೃತಿಯಲ್ಲಿಯೂ, "ವಸಿಷ್ಠೋ ನಾರದಶ್ಚೈವ ಸುಮಂತುಶ್ಚ ಪಿತಾಮಹಃ । ಬಭ್ರುಃ ಕಾರ್ಷ್ಣಾಜಿನಿಃ ಸತ್ಯವ್ರತೋ ಗಾರ್ಗ್ಯಶ್ಚ ದೇವಲಃ ॥ ಜಮದಗ್ನಿರ್ಭರದ್ವಾಜಃ ಪುಲಸ್ತ್ಯಃ ಪುಲಹಃ ಕ್ರತುಃ । ಆತ್ರೇಯಶ್ಚಾಗಲೇಯಶ್ಚ ಮರೀಚಿರ್ವತ್ಸ ಏವಚ ॥ ಪಾರಸ್ಕರಶ್ಚ ಋಶ್ಯಶೃಂಗೋ ಬೈಜಾವಾಪಸ್ತಥೈವ ಚ । ಇತ್ಯೇತೇ ಸ್ಮೃತಿಕರ್ತಾರ ಏಕವಿಂಶತಿರೀರಿತಾಃ ॥" "ಜಾಬಾಲಿರ್ನಚಿಕೇತಾಶ್ಚ ಸ್ಕಂದೋ ಲೋಗಾಕ್ಷಿಕಾಶ್ಯಪೌ । ವ್ಯಾಸಃ ಸನತ್ಕುಮಾರಶ್ಚ ಶಂತನುರ್ಜನಕಸ್ತಥಾ ॥ ವ್ಯಾಘ್ರಃ ಕಾತ್ಯಾಯನಶ್ಚೈವ ಜಾತುಕರ್ಣ್ಯಃ ಕಪಿಂಜಲಃ । ಬೋಧಾಯನಶ್ಚ ಕಾಣಾದೋ ವಿಶ್ವಾಮಿತ್ರಸ್ತಥೈವ ಚ । ಪೈಠೀನಸಿರ್ಗೋಭಿಲಶ್ಚೇತ್ಯುಪಸ್ಮೃತಿವಿಧಾಯಕಾಃ ॥" ಇತ್ಯಾದಿ ಪಾರಿಜಾತ, ವೈದ್ಯನಾಥೀಯಾದಿ ನಿಬಂಧಗಳಲ್ಲಿಯೂ ಉದಾಹರಿಸಿರುವಂತೆ ಮನು, ಅತ್ರಿ, ಅಂಗಿರಸ, ಬೃಹಸ್ಪತಿ, ಪರಾಶರ,

ವ್ಯಾಸ, ವಸಿಷ್ಠ, ನಾರದ ಮೊದಲಾದ ಅತೀಂದ್ರಿಯ (ದಿವ್ಯ) ಜ್ಞಾನಸಂಪನ್ನ ರಾದ ಮಹರ್ಷಿಗಳು ವೇದಾನುಸಾರವಾಗಿ ಧರ್ಮಶಾಸ್ತ್ರಗಳನ್ನು ಪ್ರವರ್ತಿಸಿ ರುವರು. ಮತ್ತು ಅವರ ಗ್ರಂಥಗಳು ಆಯಾ ಮಹರ್ಷಿಗಳ ಸ್ಮೃತಿಗಳೆಂದು ಪ್ರಸಿದ್ಧವಾಗಿರುವವು.

೨ನೇ ಪ್ರಶ್ನೆ:— ಧರ್ಮವನ್ನು ಬೋಧಿಸತಕ್ಕ ಸ್ವತಃಪ್ರಮಾಣ ವಾದ ವೇದವು ಇರುತ್ತಿರುವಾಗ ಈ ಸ್ಮೃತಿಶಾಸ್ತ್ರಗಳಿಂದ ಬೇರೆ ಪ್ರಯೋಜನ ವೇನು ?

ಉತ್ತರ:— ವೇದವು ಅತ್ಯಂತ ಶ್ರೇಷ್ಠಪ್ರಮಾಣವೆಂಬುದು ಸರಿ; ಆದರೆ ಆ ಅನಂತ ವೇದದಲ್ಲಿ ಬಹುಭಾಗವು ಉಪಲಬ್ಧವಿಲ್ಲ. ಮತ್ತು ವೇದಾ ರ್ಥವು ಬಹು ಗಂಭೀರವಾಗಿರುವುದರಿಂದ ಉಪಲಬ್ಧವಿರುವ ಕೆಲವು ಭಾಗ ವಾದರೂ ಕೂಡ ಶುದ್ಧಬುದ್ಧಿ ಸಂಸ್ಕಾರಾದಿ ಅಧಿಕಾರಸಿದ್ಧಿಯಿಲ್ಲದವರಿಗೆ –ವಿದ್ವಾಂಸರಿಗೆ ಸಹ– ಸರಿಯಾಗಿ ಅರ್ಥವಾಗುವಂತಿಲ್ಲ. ಅರ್ಥಜ್ಞಾನವಾದ ಹೊರತು ಅದರ ಶ್ರೇಷ್ಠಪ್ರಾಮಾಣ್ಯವನ್ನು ಉಪಯೋಗಿಸಿಕೊಳ್ಳಲು ಶಕ್ಯವಾ ಗದು. ಆವ ಕಾರಣ 'ಶ್ರುತಿಂ ಪಶ್ಯಂತಿ ಮುನಯಃ ಸ್ಮರಂತಿ ಚ ತಥಾ ಸ್ಮೃ ತಿಂ । ತಸ್ಮಾತ್ಪ್ರಮಾಣಮುಭಯಂ ಪ್ರಮಾಣೈಃ ಪ್ರಮಿತಂ ಭುವಿ ॥' ಎಂಬ ಸ್ಮೃತಿವಚನದಂತೆ ಪರಮಕಾರುಣಿಕರಾದ ಮಹರ್ಷಿಗಳು ಲೋಕಹಿತಕ್ಕಾಗಿ ಸಮಗ್ರವೇದವನ್ನೂ ಸಮಾಧಿದೃಷ್ಟಿಯಿಂದ ಅವಲೋಕಿಸಿ ಅದರ ಸರಿಯಾದ ಅಭಿಪ್ರಾಯವನ್ನೇ ಸ್ಮೃತಿರೂಪದಿಂದ ಹೇಳಿರುವರು. ಅದ್ದರಿಂದ ಶ್ರುತಿಯಂ ತೆ ಸ್ಮೃತಿಶಾಸ್ತ್ರಗಳೂ ಪ್ರಮಾಣವಾಗಿರುವುವಲ್ಲದೆ ವೇದಾನುಕೂಲವಾಗಿರುವ ಪುರುಷಾರ್ಥಸಾಧಕವಾದ ಧರ್ಮವನ್ನೆಲ್ಲ ವಿಶದವಾಗಿ ತಿಳಿಸುವುದೇ ಅವುಗಳ ಪ್ರಯೋಜನವಾಗಿದೆ. ಮತ್ತು 'ಸ್ಮೃತಿಂ ವಿನಾ ನಹಿ ಜ್ಞಾನಂ ಧರ್ಮಸ್ಯ ಭವ ತಿ ಕ್ವಚಿತ್ । ನ ಜಾತು ಜಾಯತೇ ರೂಪಮಾಲೋಕೇನ ವಿನಾ ಯಥಾ ॥' ಎಂಬಂತೆ ಸ್ಮೃತಿಗ್ರಂಥಗಳಿಲ್ಲದೆ ಧರ್ಮಸ್ವರೂಪವನ್ನು ತಿಳಿದುಕೊಳ್ಳುವುದು ಶಕ್ಯವಿಲ್ಲವೆಂದೂ, ಆದುದರಿಂದ ''ಅಧೀತ್ಯ ಚತುರೋ ವೇದಾನ್ ಸಹಾಂ ಗಾನ್ ಸಪದಕ್ರಮಾನ್ । ಸ್ಮೃತಿಹೀನಾ ನ ಶೋಭಂತೇ ಚಂದ್ರಹೀನೇವ ಶರ್ವರೀ ॥' ಎಂಬಂತೆ ಸ್ಮೃತಿಗಳನ್ನು ಬಿಟ್ಟು ಪದ, ಕ್ರಮಾದಿಗಳ ಸಹಿತ ನಾಲ್ಕು ವೇದಗಳನ್ನು ಸಾಂಗವಾಗಿ ಅಧ್ಯಯನಮಾಡಿದರೂ ಅವೆಲ್ಲ ಚಂದ್ರನಿ ಲ್ಲದ ರಾತ್ರಿಯಂತೆ ವ್ಯರ್ಥವೆಂದೂ ಹೇಳಿರುವ ಇನ್ನೂ ಅನೇಕ ಪ್ರಮಾಣವಚ ನಗಳಿರುತ್ತವೆ. ಅವುಗಳಿಂದೆಲ್ಲ ಸ್ಮೃತಿಶಾಸ್ತ್ರಗಳ ಪ್ರಾಮಾಣ್ಯವೂ, ಪ್ರಯೋ ಜನವೂ ಸ್ಪಷ್ಟವಾಗಿ ತಿಳಿದುಬರುವದು.

೩ನೇ ಪ್ರಶ್ನೆ: — ಈ ಧರ್ಮ (ಶಾಸ್ತ್ರ) ಗ್ರಂಥಗಳು ಅನೇಕವಾಗಿ ರುವುದರಿಂದ ಅವೆಲ್ಲವುಗಳ ತಾತ್ಪರ್ಯವನ್ನು ತಿಳಿದುಕೊಳ್ಳುವುದು ಹೇಗೆ ?

ಉತ್ತರ:— ಈ ಶಾಸ್ತ್ರಗಳ ತಾತ್ಪರ್ಯವು ಸಾಮಾನ್ಯರಿಗೆ ತಿಳಿಯುವುದು ಕಷ್ಟವೇ ಸರಿ. ಆದುದರಿಂದಲೇ ಮನುವು— '**ಧರ್ಮೇಣಾಧಿಗತೋ ಯೈಸ್ತು ವೇದಃ ಸಪರಿಬೃಂಹಣಃ । ತೇ ಶಿಷ್ಟಾ ಬ್ರಾಹ್ಮಣಾ ಜ್ಞೇಯಾಃ ಶ್ರುತಿಪ್ರತ್ಯಕ್ಷಹೇತವಃ ॥**' ಅಂದರೆ:— ಬ್ರಹ್ಮಚರ್ಯಾದಿ ನಿಯಮಗಳನ್ನು ವಿಧಿವತ್ತಾಗಿ ಆಚರಿಸುತ್ತ ಸಾಂಗವಾಗಿ ಸಕಲ ವೇದಗಳನ್ನೂ, ಮೀಮಾಂಸಾದಿ ಶಾಸ್ತ್ರಗಳನ್ನೂ ಅರ್ಥತಃ ಸರಿಯಾಗಿ ತಿಳಿದುಕೊಂಡಿರುವ ಶಿಷ್ಟರಿಗೇನೇ ಶಾಸ್ತ್ರಾರ್ಥವು ಸರಿಯಾಗಿ ತಿಳಿಯುವುದೆಂದು ಹೇಳಿರುವನು. ಇದರಂತೆ ಶ್ರುತಿಸ್ಮೃತ್ಯಾದಿ ಶಾಸ್ತ್ರಾರ್ಥವನ್ನೆಲ್ಲ ಸರಿಯಾಗಿ ತಿಳಿದುಕೊಂಡಿರುವ ಕಾಲಮಾಧವಾದಿ ನಿಬಂಧಕಾರರು ಲೋಕಾನುಗ್ರಹಾರ್ಥವಾಗಿ ಶಾಸ್ತ್ರಗಳ ತಾತ್ಪರ್ಯವನ್ನು ನಿರ್ಣಯಿಸಿ ಧರ್ಮನಿಬಂಧಗಳನ್ನು ರಚಿಸಿರುವರು. ಅವುಗಳಿಂದ ಧರ್ಮಶಾಸ್ತ್ರಗಳ ತಾತ್ಪರ್ಯವು ನಿರ್ಣಯವಾಗಿ ತಿಳಿಯುವುದು. ಆದುದರಿಂದ ಅಂತಹ ಧರ್ಮನಿಬಂಧಗಳು ನಮ್ಮೆಲ್ಲರ ಕರ್ಮಾನುಷ್ಠಾನಗಳಿಗೆ ಪ್ರಮಾಣವಾಗಿರುವವು.

೪ನೇ ಪ್ರಶ್ನೆ:— ಆಗಲಿ; ಧರ್ಮಶಾಸ್ತ್ರೋಕ್ತವಾದ ಕರ್ಮಗಳನ್ನು ಮಾಡಲಿಕ್ಕೆ ಶಾಸ್ತ್ರೋಚಿತವಾದ ಕಾಲವ್ಯವಸ್ಥೆಯೇ ಬೇಕೆಂದು ಪ್ರತಿಜ್ಞೆಯಲ್ಲಿ ಹೇಳಿರುವುದರ ಮರ್ಮವೇನು ?

ಉತ್ತರ:— ಕರ್ಮಗಳನ್ನು ಸಕಾಲದಲ್ಲಿ ಮಾಡಿದರೇನೇ ಅವುಗಳು ಫಲಕಾರಿಯಾಗುವವು; ಅಕಾಲದಲ್ಲಿ ಮಾಡುವ ಕಾರ್ಯವು ನಿಷ್ಫಲವಾಗುವುದೆಂಬುದು ಬೇರೆ ಹೇಳಬೇಕಾಗಿಲ್ಲ. ಆದರೆ ಶಾಸ್ತ್ರೋಕ್ತಕರ್ಮಗಳು ಸಫಲವಾಗಲಿಕ್ಕೆ ಅವಶ್ಯಕವಾದ ವಿಹಿತಕಾಲವು ಯಾವುದೆಂಬುದನ್ನು ಶಾಸ್ತ್ರಜ್ಞಾನದ ಹೊರತು ಸ್ವತಂತ್ರವಾಗಿ ತಿಳಿಯಲಿಕ್ಕೆ ಸಾಧ್ಯವಿಲ್ಲ. ಆದ್ದರಿಂದ ಸರ್ವಜ್ಞರಾದ ಮಹರ್ಷಿಗಳು ಕರ್ಮಾಚರಣೆಗೆ (ಅದು ಸಫಲವಾಗಲಿಕ್ಕೆ) ಅನುಕೂಲವಾದ ಕಾಲವನ್ನು ಧರ್ಮಶಾಸ್ತ್ರಗಳಲ್ಲಿಯೇ ಹೇಳಿರುವರು. ಮತ್ತು ಆ ಕಾಲವನ್ನು ಸಿದ್ಧಪಡಿಸಿಕೊಳ್ಳುವುದಕ್ಕೆ ಅನುಕೂಲವಾಗಿ ವೇದಾಂಗವಾದ ಜ್ಯೋತಿಃಶಾಸ್ತ್ರವನ್ನು ಪ್ರತ್ಯೇಕವಾಗಿ ಹೇಳಿದ್ದು, ತನ್ಮೂಲಕ ತಿಥ್ಯಾದಿಕಾಲಗಳನ್ನು ಪ್ರಮಿತಿಗೊಳಿಸಿರುವರು. ಇಂಥ ಜ್ಯೋತಿಃಶಾಸ್ತ್ರವನ್ನು ಉಪದೇಶಿಸಿದವರು ಯಾರೆಂದರೆ:— '**ಸೂರ್ಯಃ ಪಿತಾಮಹೋ ವ್ಯಾಸೋ ವಸಿಷ್ಠೋಽತ್ರಿಃ ಪರಾಶರಃ ।**

ಕಶ್ಯಪೋ ನಾರದೋ ಗರ್ಗೋ ಮರೀಚಿರ್ಮನುರಂಗಿರಾಃ ॥ ಲೋಮಶಃ ಪೌಲಿಶಶ್ಚೈವ ಚ್ಯವನೋ ಯವನೋ ಭೃಗುಃ । ಶೌನಕೋಽಷ್ಟಾದಶಾಃಸ್ಮೇತೇ ಜ್ಯೋತಿಃಶಾಸ್ತ್ರಪ್ರವರ್ತಕಾಃ ॥" ಎಂಬುದಾಗಿ ಕಶ್ಯಪರೂ, ಮತ್ತು 'ವಿಶ್ವಸೃಜ್ ನಾರದೋ ವ್ಯಾಸೋ ವಸಿಷ್ಠೋಽತ್ರಿಃ ಪರಾಶರಃ । ಲೋಮಶೋ ಯವನಃ ಸೂರ್ಯಶ್ಚ್ಯವನಃ ಕಶ್ಯಪೋ ಭೃಗುಃ ॥ ಪುಲಸ್ತ್ಯೋ ಮನುರಾಚಾರ್ಯಃ ಪೌಲಿಶಃ ಶೌನಕೋಽಂಗಿರಾಃ । ಗರ್ಗೋ ಮರೀಚಿರಿತ್ಯೇತೇ ಜ್ಯೋತಿಃಶಾಸ್ತ್ರಪ್ರವರ್ತಕಾಃ ॥' ಎಂಬುದಾಗಿ ಪರಾಶರರೂ ಹೇಳಿರುವಂತೆ ಸೂರ್ಯ, ಪಿತಾಮಹ, ವ್ಯಾಸ, ವಸಿಷ್ಠಾದಿ ಮಹರ್ಷಿಗಳು ಜ್ಯೋತಿಃಶಾಸ್ತ್ರ ಪ್ರವರ್ತಕರಾಗಿರುವರು. ಇವರು ಹೇಳಿರುವ ಜ್ಯೋತಿಷ ಗ್ರಂಥಗಳಿಗೇನೇ ಜ್ಯೋತಿಃಶಾಸ್ತ್ರವೆಂಬ ಪ್ರಸಿದ್ಧಿಯು ಇರುವುದು. ಋಗ್ವೇದೀಯ ಚರಣವ್ಯೂಹ ಪರಿಶಿಷ್ಟದಲ್ಲಿ ಶೌನಕರು "ಲಕ್ಷಂ ತು ಚತುರೋ ವೇದಾ ಲಕ್ಷಮೇಕಂ ತು ಭಾರತಂ । ಲಕ್ಷಂ ವ್ಯಾಕರಣಂ ಪ್ರೋಕ್ತಂ ಚತುರ್ಲಕ್ಷಂ ತು ಜ್ಯೌತಿಷಂ ॥" ಎಂದು ಹೇಳಿರುವಂತೆ ಈ ಜ್ಯೋತಿಃಶಾಸ್ತ್ರವು ಒಟ್ಟಿಗೆ ನಾಲ್ಕು ಲಕ್ಷ ಶ್ಲೋಕಗಳುಳ್ಳದ್ದೆಂದು ಪರಿಗಣಿಸಲ್ಪಟ್ಟಿರುವದು. ಮತ್ತು ಈ ಶಾಸ್ತ್ರದಲ್ಲಿ— 'ಸಿದ್ಧಾಂತ ಸಂಹಿತಾ–ಹೋರಾ–ರೂಪಂ ಸ್ಕಂಧತ್ರಯಾತ್ಮಕಂ । ವೇದಸ್ಯ ನಿರ್ಮಲಂ ಚಕ್ಷುರ್ಜ್ಯೋತಿಃಶಾಸ್ತ್ರಮಿಹೋಚ್ಯತೇ ॥ ಅಸ್ಯ ಶಾಸ್ತ್ರಸ್ಯ ಸಂಬಂಧೋ ವೇದಾಂಗ ಇತಿ ಧಾತೃತಃ । ಅಭಿಧೇಯಂ ಚ ಜಗತಃ ಶುಭಾಶುಭನಿರೂಪಣಂ ॥" ಎಂಬ ನಾರದವಚನದಂತೆ ೧. ಸಿದ್ಧಾಂತ, ೨. ಸಂಹಿತಾ, ೩. ಹೋರಾ ಎಂಬ ಮೂರು ವಿಭಾಗಗಳಿದ್ದು ಇವರಲ್ಲಿ ಜಗತ್ತಿನ ಶುಭಾಶುಭಫಲಗಳೂ, ಕರ್ಮಾನುಷ್ಠಾನಕ್ಕೆ ಅನುಗುಣವಾದ ಕಾಲವಿಧಾನವೂ ಬೋಧಿಸಲ್ಪಟ್ಟಿರುವುದರಿಂದ ವೇದೋಕ್ತಕರ್ಮಗಳಿಗೆ ಕಾಲವಿಧಾಯಕತ್ವೇನ ಸಾಕ್ಷಾತ್ಸಂಬಂಧಿಸಿರುವ ಈ ಶಾಸ್ತ್ರವು ವೇದಾಂಗವೆಂದೇ ಹೇಳಲ್ಪಟ್ಟಿರುವುದು. ಇಷ್ಟೇ ಅಲ್ಲ, 'ತಸ್ಮಾದ್ವೇದಾಂಗಶಾಸ್ತ್ರಾಣಾಂ ಪ್ರಧಾನಂ ಜ್ಯೋತಿಷಂ ಸ್ಮೃತಂ । ಯಸ್ಮಾದೇತದ್ವಿನಾ ಶಾಸ್ತ್ರಾ ಕಾಲಜ್ಞಾನಂ ನ ಸಿಧ್ಯತಿ ॥' ಅಂದರೆ:— ಈ ಜ್ಯೋತಿಃಶಾಸ್ತ್ರವನ್ನು ಬಿಟ್ಟರೆ ಕರ್ಮಕಾಲವನ್ನು ತಿಳಿದುಕೊಳ್ಳುವುದು ಅಶಕ್ಯವಾಗುವುದರಿಂದಲೂ, ಕಾಲಜ್ಞಾನದ ಹೊರತು ಕರ್ಮಾಚರಣೆಯು ಸಿದ್ಧಿಸುವುದಿಲ್ಲವಾದುದರಿಂದಲೂ ಕರ್ಮವನ್ನು ಬೋಧಿಸುವ ವೇದಕ್ಕೆ ಅಂಗಭೂತವಾದ ಶಾಸ್ತ್ರಗಳಲ್ಲಿ ಜ್ಯೋತಿಃಶಾಸ್ತ್ರವು ಪ್ರಧಾನವಾಗಿರುತ್ತದೆ. ಆಚರಿಸತಕ್ಕ ಕರ್ಮಗಳನ್ನೂ, ಆಚರಣೆಗೆ ಯೋಗ್ಯವಾದ ಕಾಲಗಳ ಸ್ವರೂಪವನ್ನೂ ಬೋಧಿಸುವ ಶಾಸ್ತ್ರಗಳು ಭಿನ್ನವಾಗಿದ್ದರೂ ಅವುಗಳಲ್ಲಿರುವ ಪರಸ್ಪರ ಸಂಬಂಧವು

ಅಪರಿಹಾರ್ಯವಾಗಿರುವುದರಿಂದ ಮಹರ್ಷಿಗಳು ಕೇವಲ ಧರ್ಮಶಾಸ್ತ್ರಗಳನ್ನಷ್ಟೇ ಹೇಳಿರದೆ, ಅವುಗಳನ್ನಾಚರಿಸಲಿಕ್ಕೆ ಯುಕ್ತವಾದ ಕಾಲಗಣನೆಯನ್ನು ಯಾವ ರೀತಿಯಿಂದ ಮಾಡತಕ್ಕದ್ದೆಂಬುದನ್ನು ಸಹ ಜ್ಯೋತಿಃಶಾಸ್ತ್ರಗಳ ಮೂಲಕ ತಿಳಿಸಿರುವರು. ಈ ಹಿಂದೆ ವಿವರಿಸಿರುವ ಶಾಸ್ತ್ರಪ್ರವರ್ತಕರಲ್ಲಿ ಪಿತಾಮಹ, ವ್ಯಾಸ, ವಸಿಷ್ಠ, ಅತ್ರಿ, ಪರಾಶರ, ಕಶ್ಯಪ, ನಾರದ, ಗರ್ಗ, ಮರೀಚಿ, ಮನು, ಅಂಗಿರಸ, ಪುಲಸ್ತ್ಯ ಮೊದಲಾದ ಮಹರ್ಷಿಗಳು ಧರ್ಮಶಾಸ್ತ್ರ-ಜ್ಯೋತಿಃಶಾಸ್ತ್ರಗಳೆರಡಕ್ಕೂ ಪ್ರವರ್ತಕರಾಗಿರುವುದನ್ನು ಇಲ್ಲಿ ಲಕ್ಷ್ಯವಿಟ್ಟು ನೋಡಬೇಕು. ಹೀಗೆ ಮಹರ್ಷಿಗಳು ಧರ್ಮಶಾಸ್ತ್ರ, ಜ್ಯೋತಿಃಶಾಸ್ತ್ರಗಳ ತತ್ವಗಳನ್ನೆಲ್ಲ ಸಾಕ್ಷಾತ್ಕರಿಸಿಕೊಂಡು ಉಭಯ ಶಾಸ್ತ್ರಗಳಿಗೂ ಪರಸ್ಪರ ಸಮನ್ವಯವಾಗಿರುವಂತೆಯೇ ಶಾಸ್ತ್ರಗಳನ್ನು ಉಪದೇಶಿಸಿರುವುದರಿಂದ ಈ ಉಭಯ ಶಾಸ್ತ್ರಗಳಿಗೂ ಇರುವ ಸಂಬಂಧವು ನಿತ್ಯವೂ, ಅಭೇದ್ಯವೂ ಆಗಿರುತ್ತದೆ. ಮತ್ತು ಆರ್ಷಶಾಸ್ತ್ರಕ್ಕೆ ವಿರುದ್ಧವಾದ ಕಾಲದಲ್ಲಿ ಕರ್ಮಾಚರಣೆಯನ್ನು ಮಾಡಿದರೆ ಅಕಾಲದಲ್ಲಿ ಮಾಡಿದ ಕಾರ್ಯದಂತೆ ಅದು ನಿಷ್ಫಲವಾಗುವುದರಿಂದ ಶಾಸ್ತ್ರವಿಹಿತ ಕರ್ಮಾಚರಣೆಗೆ ಶಾಸ್ತ್ರೋಚಿತವಾದ ಕಾಲ ವ್ಯವಸ್ಥೆಯೇ ಬೇಕೆಂದು ನಾವು ಪ್ರತಿಜ್ಞೆಯಲ್ಲಿ ಹೇಳಿರುವೆವು.

೫ನೇ ಪ್ರಶ್ನೆ:— ಮಹರ್ಷಿವಚನಗಳಲ್ಲಿ ಇಲ್ಲವೆ ಬೇರೆ ಬೇರೆ ಶಾಸ್ತ್ರಗಳಲ್ಲಿ ಮತಭೇದ ತೋರಿದರೆ ಅವುಗಳನ್ನು ಹೇಗೆ ಸ್ವೀಕರಿಸಬೇಕು?

ಉತ್ತರ:— ಆರ್ಷವಚನಗಳೆಲ್ಲವೂ ಪ್ರಮಾಣಭೂತವಾಗಿರುವವೆಂದೇ ತಿಳಿಯಬೇಕು. ಯಾಕೆಂದರೆ—"ಅಪ್ರಮಾಣ್ಯಂ ಚ ವೇದಾನಾಮಾರ್ಷಾಣಾಂ ಚಾಽಪಿ ಕುತ್ಸನಂ। ಅವ್ಯವಸ್ಥಾಽಪಿ ಸರ್ವತ್ರ ಏತನ್ನಾಶನಮಾತ್ಮನಃ॥" "ಪ್ರಮಾಣಾನಿ ಪ್ರಮಾಣಜ್ಞೈಃ ಪರಿಪಾಲ್ಯಾನಿ ಯತ್ನತಃ। ಅಪ್ರಮಾಣಮೃಷಿಂ ಕೃತ್ವಾ ಸೋಽಂಧೇ ತಮಸಿ ಮಜ್ಜತಿ॥" ಎಂಬ ವಸಿಷ್ಠಾದಿ ವಚನಗಳಂತೆ ಆರ್ಷವಚನಗಳನ್ನು ಪ್ರಮಾಣವಲ್ಲವೆಂದೂ, ವ್ಯವಸ್ಥೆಯಿಲ್ಲದ್ದೆಂದೂ ತಿರಸ್ಕರಿಸುವವರು ದುರ್ಗತಿಯನ್ನು ಹೊಂದುತ್ತಾರಾದ್ದರಿಂದ, ಮೇಲಿಂದ ನೋಡುವಲ್ಲಿ ಅವುಗಳಲ್ಲಿ ಭಿನ್ನತೆಯು ತೋರಿಬಂದರೂ ಪ್ರಮಾಣಜ್ಞರಾದ ವಿದ್ವಾಂಸರು ಅವುಗಳನ್ನು ತಕ್ಕ ವ್ಯವಸ್ಥೆಯಿಂದ ಪ್ರಮಾಣೀಕರಿಸಬೇಕು. ಅಂಥ ಸಂದರ್ಭದಲ್ಲಿ "ಸ್ಮೃತಿದ್ವೈಧೇ ತು ವಿಷಯಃ ಕಲ್ಪನೀಯಃ ಪೃಥಕ್ಪೃಥಕ್।" 'ಯುಗಧರ್ಮಾಃ ಪರಿಗ್ರಾಹ್ಯಾಃ ಸರ್ವವರ್ಣೈರ್ಯಥೋಚಿತಾಃ।' 'ದೇಶಾಚಾರಾಃ ಪರಿಗ್ರಾಹ್ಯಾಸ್ತತ್ತದ್ದೇಶೀಯಕೈರ್ಜನೈಃ।' ಇತ್ಯಾದಿ ವಚನಗಳಲ್ಲಿ ಹೇಳಿರುವಂತೆ ಆಪಾತತಃ ವಿರೋಧ ತೋರುವ ಋಷಿವಚನಗಳಲ್ಲಿಯೇ ವಿಷಯಭೇದ

ದಿಂದ ಸಮಂಜಸವಾಗಿ ವ್ಯವಸ್ಥೆಯನ್ನು ಮಾಡಲಿಕ್ಕೆ ಬರುವುದರಿಂದ ಆ ಪ್ರಕಾರ ವ್ಯವಸ್ಥೆಯನ್ನು ತಿಳಿದುಕೊಂಡು ಸ್ವೀಕರಿಸಬೇಕು. ಮತ್ತು ಶಾಸ್ತ್ರಗಳು ಅನೇಕವಾಗಿರುವುವಾದರೂ ಅವೆಲ್ಲವೂ ಆರ್ಷಶಾಸ್ತ್ರಗಳೇ ಆಗಿರುವಲ್ಲಿ ಬಹುಮಟ್ಟಿಗೆ ಮತಭೇದವಿರಲು ಕಾರಣವಿರುವದಿಲ್ಲ. ಒಂದುವೇಳೆ ಅವುಗಳಲ್ಲಿ ಮತಭೇದವು ತೋರಿಬಂದರೂ ಆಸ್ತಿಕರಾದ ಶಿಷ್ಟಜನರ ಆಚರಣೆಯ ಬಗ್ಗೆ ಧರ್ಮಶಾಸ್ತ್ರವೇ ಪ್ರಧಾನವಾಗಿರುವುದು. ಹೇಗಂದರೆ:— ಒಬ್ಬ ವರನಿಗೆ ಒಂದು ವಧುವಿನ ಗ್ರಾಹ್ಯಾಗ್ರಾಹ್ಯತೆಯನ್ನು ಶಾಸ್ತ್ರರೀತಿಯಿಂದ ನಿರ್ಣಯಿಸಿಕೊಳ್ಳಬೇಕಾಗಿರುವಲ್ಲಿ— ವೈದ್ಯಶಾಸ್ತ್ರದೃಷ್ಟ್ಯಾ ಆಕೆಯು ನಿರೋಗಿತೆ, ಸಶಕ್ತತೆ, ಅನುರೂಪವಯಸ್ಸು ಮುಂತಾದ ಗುಣಗಳಿಂದ ಗ್ರಾಹ್ಯಳೆಂದು ತಿಳಿಯಲಾದರೂ, ಸಾಮುದ್ರಿಕಶಾಸ್ತ್ರದಂತೆ ಆಕೆಯ ರೇಖಾವಿನ್ಯಾಸ, ನೇತ್ರ-ಭ್ರೂ-ಕಂಠ-ಹಸ್ತಾದಿ ಅವಯವಲಕ್ಷಣಗಳಿಂದ ಸುಲಕ್ಷಣೆಯೆಂದು ತೋರಿಬಂದರೂ, ಕಾಮಶಾಸ್ತ್ರದಂತೆ ಸರಸಕೋಮಲೆಯಾದ 'ಮನೋರಮೆ' ಎಂದು ಕಂಡರೂ, ಜ್ಯೋತಿಃಶಾಸ್ತ್ರದಂತೆ ಸೌಭಾಗ್ಯ, ಸಂತಾನ, ಸೌಮಂಗಲ್ಯಾದಿ ಗುಣವಿಶಿಷ್ಟಳೆಂದು ನಿಶ್ಚಯಿಸಲ್ಪಟ್ಟರೂ ಧರ್ಮಶಾಸ್ತ್ರಪ್ರಕಾರ ಆಕೆಯಲ್ಲಿ ಸಗೋತ್ರ, ವಿರುದ್ಧಸಂಬಂಧ, ಭಿನ್ನಜಾತೀಯತಾದಿ ದೋಷಗಳಿರುವಲ್ಲಿ ಸರ್ವಥಾ ಅಗ್ರಾಹ್ಯಳೇ ಆಗುತ್ತಾಳೆ. ಇದರಂತೆ ಶಾಸ್ತ್ರಾಂತರಗಳಿಂದ ನಿರ್ದೋಷವೆಂದು ತೋರಬಹುದಾದ ವಿಷಯವಾದರೂ ಧರ್ಮಶಾಸ್ತ್ರದಂತೆ ಅಯುಕ್ತವಾಗಿರುವಲ್ಲಿ ತ್ಯಾಜ್ಯವಾಗುವುದು. ಮತ್ತು ಅನ್ಯ ಶಾಸ್ತ್ರಗಳಿಗೆ ಪ್ರತಿಕೂಲವಾಗಿದ್ದರೂ ಧರ್ಮಶಾಸ್ತ್ರದಂತೆ ಅನುಕೂಲವಾಗಿರುವುದನ್ನು ಗ್ರಾಹ್ಯ ಮಾಡುವಲ್ಲಿ ಅಧರ್ಮದ ಪ್ರಸಕ್ತಿಯಿರುವುದಿಲ್ಲವಾದುದರಿಂದ (ಹೀಗೆ ಅನ್ವಯ-ವ್ಯತಿರೇಕಗಳಿಂದ) ಶಿಷ್ಟಜನರ ಆಚರಣೆಯಲ್ಲಿ ಧರ್ಮಶಾಸ್ತ್ರವೇ ಪ್ರಬಲಪ್ರಮಾಣವೆಂದು ಸಿದ್ಧವಾಗುವುದು.

೬ನೇ ಪ್ರಶ್ನೆ:— ವ್ಯವಸ್ಥೆಯಿಂದ ಸ್ವೀಕರಿಸಬೇಕೆಂಬುದು ಇತರ ಶಾಸ್ತ್ರಗಳಲ್ಲಿ ಯುಕ್ತವಾಗಿದ್ದರೂ ಜ್ಯೋತಿಷವು ಪ್ರಗತಿಶಾಸ್ತ್ರವಾಗಿರುವುದರಿಂದಲೂ, ಮತ್ತು "* ಅಪ್ರತ್ಯಕ್ಷಾಣಿ ಶಾಸ್ತ್ರಾಣಿ ವಿವಾದಾಸ್ತೇಷು ಕೇವಲಂ। ಪ್ರತ್ಯಕ್ಷಂ

---

*ಇಲ್ಲಿ ಅಪ್ರತ್ಯಕ್ಷ ಮತ್ತು ವಿವಾದಾತ್ಮಕವೆಂಬ ಲಕ್ಷಣವು ವೇದ, ಇತಿಹಾಸ, ಪುರಾಣ, ಆಗಮ, ತಂತ್ರಾದಿ ಸಕಲ ಶಾಸ್ತ್ರಗ್ರಂಥಗಳಿಗೂ ಅನ್ವಯಿಸುವಂತಿರುವುದರಿಂದ 'ಶಾಸ್ತ್ರಾಣಿ' ಎಂಬುದರಲ್ಲಿ ಅವೆಲ್ಲವನ್ನೂ ಸಂಗ್ರಹಿಸಿದೆ ಮತ್ತು ಈ ಶ್ಲೋಕವನ್ನು ದೃಗ್ವಾದಿಗಳು ತಮಗೆ ಪರಮಪ್ರಮಾಣವೆಂದು ಆದರಿಸುತ್ತಿದ್ದರೂ ಅದರ ಸಮೂಲತ್ವವನ್ನು ಪ್ರಕಟಿಸದಿರುವ ಕಾರಣವೇನಿರಬಹುದೆಂದು ಸುಜ್ಞರು ಊಹಿಸಿಕೊಳ್ಳಬೇಕಾಗಿದೆ. ಬೇರೊಂದು ಕಡೆ ಈ ಶ್ಲೋಕದ ಆದಿಚರಣವನ್ನು 'ಅಫಲಾನ್ಯನ್ಯ ಶಾಸ್ತ್ರಾಣಿ' ಎಂತಲೂ, ೩ನೆಯ ಚರಣವನ್ನು 'ಸಫಲಂ ಜ್ಯೋತಿಷಂ ಶಾಸ್ತ್ರಂ' ಎಂತಲೂ ಪಾಠಭೇದದಿಂದ ಕಾಣಿಸಿದ್ದುಂಟು.

ಜ್ಯೋತಿಷಂ ಶಾಸ್ತ್ರಂ ಚಂದ್ರಾರ್ಕೌ ಯತ್ರ ಸಾಕ್ಷಿಣೌ ॥" ಎಂಬಂತೆ ಕರ್ಮಾದಿಗಳನ್ನು ಬೋಧಿಸುವ ಇತರ ಶಾಸ್ತ್ರಗಳೆಲ್ಲ ಅಪ್ರತ್ಯಕ್ಷಗಳಾಗಿರುವುದರಿಂದ ಕೇವಲ ವಿವಾದಾಸ್ಪದಗಳಾದ (ವ್ಯರ್ಥ?) ಶಾಸ್ತ್ರಗಳಾಗಿದ್ದು, ಚಂದ್ರ-ಸೂರ್ಯರು ಸಾಕ್ಷಿಗಳಾಗಿರುವ ಜ್ಯೋತಿಷವು ಪ್ರತ್ಯಕ್ಷಶಾಸ್ತ್ರವಾಗಿರುವುದರಿಂದಲೂ ಅದನ್ನು ಶಾಸ್ತ್ರೀಯ ವ್ಯವಸ್ಥೆಯಿಲ್ಲದೆ ಕೇವಲ ಪ್ರತ್ಯಕ್ಷದಿಂದಲೇ ನಿರ್ಣಯಿಸಿಕೊಳ್ಳಲಿಕ್ಕಾಗುವುದಿಲ್ಲವೇ ?

ಉತ್ತರ:— ಈ ಶ್ಲೋಕವು ದೃಕ್ಪಕ್ಷದವರಿಗೆ ಸಾಧಕವೆಂದು ಇದರ ಅರ್ಥವನ್ನಾದರೂ ಮೇಲಿನ ಪ್ರಶ್ನೆಯಲ್ಲಿ ತೋರುವಂತೆಯೇ ಕೆಲವರು-ಪಂಡಿತರು ಸಹ-ಕಲ್ಪಿಸಿಕೊಂಡಿರುವರು. ಆದರೆ ಈ ಶ್ಲೋಕದ ಅರ್ಥವನ್ನು ವಿವೇಕದಿಂದ ವಿಚಾರಿಸುವಲ್ಲಿ ಜ್ಯೋತಿಃಶಾಸ್ತ್ರದ ಪ್ರಶಸ್ತಿಯನ್ನು ಹೇಳುವುದಿಷ್ಟೇ ಇದರ ವಿವಕ್ಷಿತಾರ್ಥವಾಗಿರುವುದಲ್ಲದೆ ಇತರ ಶಾಸ್ತ್ರಗಳು ಉಪೇಕ್ಷಿಸಲ್ಪಡತಕ್ಕವುಗಳೆಂತಾಗಲಿ, ಜ್ಯೋತಿಃಶಾಸ್ತ್ರವು ಪ್ರತ್ಯಕ್ಷದಿಂದಲೇ ಸಿದ್ಧವಾಗತಕ್ಕದ್ದೆಂತಾಗಲಿ ಹೇಳುವುದು ಇದರ ತಾತ್ಪರ್ಯವಲ್ಲವೆಂಬುದು ಸ್ಪಷ್ಟವಾಗುವುದು. ಯಾಕೆಂದರೆ— ಶ್ರುತಿ, ಸ್ಮೃತಿ, ಪುರಾಣ, ಇತಿಹಾಸ, ತರ್ಕ, ನ್ಯಾಯ, ಮೀಮಾಂಸಾ, ವ್ಯಾಕರಣಾದಿ ಜ್ಯೋತಿಷೇತರ ಸಮಸ್ತಶಾಸ್ತ್ರಗಳೂ ವ್ಯರ್ಥವೆಂದು ಕಲ್ಪಿಸುವಲ್ಲಿ, ಈ ಎಲ್ಲ ಶಾಸ್ತ್ರಗಳಿಗೂ ಅಪ್ರಾಮಾಣ್ಯವುಂಟಾಗುವುದಲ್ಲದೆ ಪರ್ಯಾಯದಿಂದ ಸಾಕ್ಷಾತ್ ವೇದಕ್ಕೇನೇ ಅಪ್ರಾಮಾಣ್ಯವೂ, ವ್ಯರ್ಥತೆಯೂ ಸಂಭವಿಸಿ, ತನ್ಮೂಲಕ ತದಂಗಭೂತವಾದ ಜ್ಯೋತಿಷಕ್ಕೂ ಸಹ ಅಪ್ರಾಮಾಣ್ಯವೂ ವ್ಯರ್ಥತೆಯೂ ಉಂಟಾಗುವುದು ಅನಿವಾರ್ಯವಾಗುತ್ತದೆ. ಹೇಗಂದರೆ:— "ತಿಥಿನಕ್ಷತ್ರವಾರಾದ್ಯಾಃ ಸಾಧನಂ ಪುಣ್ಯಪಾಪಯೋಃ । ಪ್ರಧಾನಗುಣಭಾವೇನ ಸ ಸ್ವಾತಂತ್ರ್ಯೇಣ ತೇ ಕ್ಷಮಾಃ ॥" ಎಂಬ ಗರ್ಗೋಕ್ತಿಯಂತೆ ಸ್ವತಂತ್ರವಾದ ಕರ್ಮಗಳನ್ನು ಬೋಧಿಸತಕ್ಕ ಶ್ರುತಿ-ಸ್ಮೃತ್ಯಾದಿ ಶಾಸ್ತ್ರಗಳಿಗೆ ಗುಣಭೂತವಾದ ತಿಥ್ಯಾದಿಗಳನ್ನು ನಿರೂಪಿಸತಕ್ಕ ಜ್ಯೋತಿಃಶಾಸ್ತ್ರವು (ಸ್ವತಂತ್ರವಾಗಿರದೆ) ಅಂಗಭೂತವಾಗಿರುವುದರಿಂದ ಮೂಲವನ್ನೇ ನಿರಾಕರಿಸುವಲ್ಲಿ ತದಂಗವೂ ಸಹ ಸ್ವತಃ ನಿರಾಕೃತವಾಗುವುದು. ಆದುದರಿಂದ ಹೀಗೆ ಅಪಾರ್ಥವನ್ನು ಕಲ್ಪಿಸಿದರೆ ಶಾಸ್ತ್ರ, ನ್ಯಾಯ, ಯುಕ್ತಿಗಳಿಗೆಲ್ಲ ವಿರುದ್ಧವಾಗುವುದಲ್ಲದೆ ಸ್ವವ್ಯಾಹತಿ (ತನ್ನ ಮಾತಿಗೆ ತಾನೇ ವಿರುದ್ಧ ಹೇಳುವಿಕೆ) ಯೂ ಉಂಟಾಗುವುದು. ಅಭ್ಯುದಯಕ್ಕೂ, ಮೋಕ್ಷಕ್ಕೂ ಕಾರಣವಾಗಿರುವ ಶ್ರುತಿ-ಸ್ಮೃತಿಸಮ್ಮತವಾದ ಧರ್ಮ-ಕರ್ಮಗಳಿಗೆಲ್ಲಾ ಧರ್ಮಶಾಸ್ತ್ರವೇ ಮುಖ್ಯವಾಗಿರುವಾಗ ಅದೆಲ್ಲ ವ್ಯರ್ಥವೆಂದು ದೂಷಿಸಿ ತದಂಗ

ಭೂತವಾಗಿರುವ ಜ್ಯೋತಿಷವು ಮಾತ್ರ ಸಾರ್ಥಕ (ನಿಜ) ವಾದ ಶಾಸ್ತ್ರವೆನ್ನುವು ದು ಅತ್ಯಂತ ವಿಸಂಗತವಲ್ಲವೇ? ಇನ್ನು ಜ್ಯೋತಿಷದ ಕೆಲವಿಷಯುಗಳು ಪ್ರತ್ಯಕ್ಷ ವಿರುವದೆಂದು ಸೂರ್ಯ-ಚಂದ್ರರ ಸಾಕ್ಷಿ ಇಟ್ಟದ್ದರ ಮೇಲಿಂದ ಇಡೀ ಜ್ಯೋತಿಃ ಶಾಸ್ತ್ರ(ದ ವಿಷಯುಗಳೆಲ್ಲ)ವೂ ಪ್ರತ್ಯಕ್ಷದಿಂದಲೇ ನಿರ್ಣಯವಾಗತಕ್ಕದ್ದೆಂತಾಗಲಿ, ಸಿದ್ಧಾಂತವಾಗತಕ್ಕದ್ದೆಂತಾಗಲಿ ವಾದಿಸುವುದು ಕೇವಲ ಹಾಸ್ಯಾಸ್ಪದವಾಗಿದೆ. ಯಾಕಂದರೆ:— ಜ್ಯೋತಿಃಶಾಸ್ತ್ರೋಕ್ತ ತಿಥಿ, ವಾರ, ನಕ್ಷತ್ರ, ಯೋಗ, ಕರಣ, ಸಂಕ್ರಾಂತಿ ಮುಂತಾದ ಹಲವು ವಿಷಯಗಳು ಪ್ರತ್ಯಕ್ಷದಿಂದ ಸಿದ್ಧವಾಗತಕ್ಕವು- ಗಳಲ್ಲ. ಇದನ್ನು ಮುಂದಿನ ಭಾಗದಲ್ಲಿ ಕ್ರಮಶಃ ವಿವರಿಸಿದೆ. ಪ್ರಕೃತ ಈ ಶ್ಲೋಕ ದಲ್ಲಿ ಸಾಕ್ಷಿಯಾಗಿಟ್ಟ ಸೂರ್ಯ-ಚಂದ್ರರ ವಿಷಯವನ್ನೇ ವಿಚಾರಕ್ಕೆ ತೆಗೆದು ಕೊಂಡರೂ ಅವರ ಪರಿಮಿತಿಯನ್ನು ಕೇವಲ ಪ್ರತ್ಯಕ್ಷದಿಂದಲೇ ನಿರ್ಣಯಿಸ ತಕ್ಕದ್ದು ಸರಿಯಾಗುವುದಿಲ್ಲ. ಹೇಗಂದರೆ— ಸೂರ್ಯ-ಚಂದ್ರರ ಬಿಂಬಪರಿಮಾಣ ವು ಕೇವಲ ಒಂದು ಗೇಣಿನಷ್ಟು ಇರುವುದೆಂದು ಎಲ್ಲರಿಗೂ ದೃಕ್ಸಿದ್ಧಪ್ರತ್ಯಕ್ಷವಾಗಿ ತೋರುವುದು. ಇದೇ ನಿಶ್ಚಯವೆಂದು ಎಷ್ಟೋ ಜನರು ನಂಬಿರಲೂ ಬಹುದು. ಆದರೆ ವಸ್ತುಸ್ಥಿತಿಯು ಹಾಗಿಲ್ಲವೆಂದು ಅಭಿಜ್ಞರಿಗೆಲ್ಲ ತಿಳಿದಿರತಕ್ಕದ್ದೇಸರಿ ಈ ಬಗ್ಗೆ ಶ್ರುತಿಯಲ್ಲಿ— "ಸ್ಮೃತಿಃ ಪ್ರತ್ಯಕ್ಷಮೈತಿಹ್ಯಮನುಮಾನಶ್ಚತುಷ್ಟಯಂ। ಏತೈರಾದಿತ್ಯಮಂಡಲಂ ಸರ್ವೈರೇವ ವಿಧಾಸ್ಯತೇ ॥" ಅಂದರೆ— ಸ್ಮೃತಿ, ಪ್ರತ್ಯಕ್ಷ (ಇಲ್ಲಿ ಪ್ರತ್ಯಕ್ಷವೆಂದರೆ ವೇದವೆಂದು ಸಾಯಣಭಾಷ್ಯದಲ್ಲಿ ಹೇಳಿದೆ.) ಪುರಾಣ, ಐತಿಹ್ಯ, ಅನುಮಾನಾದಿ ಪ್ರಮಾಣಗಳಿಂದೆಲ್ಲ ಸೂರ್ಯಮಂಡಲದ ಪರಿಮಿತಿಯನ್ನು ನಿಶ್ಚಯಿಸಬೇಕೆಂದು ಹೇಳಿದೆ. ಹೀಗೆ ಶಾಸ್ತ್ರೀಯವಿಷಯಗಳು ವೇದ, ಶಾಸ್ತ್ರಾದಿಗಳಿಂದಲೇ ನಿರ್ಣಯವಾಗತಕ್ಕವುಗಳೇ ಹೊರತು ಪ್ರತ್ಯಕ್ಷದಿಂದ ಲ್ಲ. ಪ್ರತ್ಯಕ್ಷವೇ ಶ್ರೇಷ್ಠಪ್ರಮಾಣವೆಂದು ಕಲ್ಪಿಸಿಕೊಂಡಿರುವ ದೃಕ್ಪಕ್ಷದ ಪಂಡಿತ ರಾದರೂ ಸೂರ್ಯ, ಚಂದ್ರ ಮಂಡಲಗಳು ಅನೇಕ ಯೋಜನ ವಿಸ್ತಾರವಿರುವು ದೆಂದು ಒಪ್ಪಲೇಬೇಕಷ್ಟೇ! ಅಂದಮೇಲೆ ವಿಷಯದ ಸತ್ಯತೆಯನ್ನು ತಿಳಿಯುವ ಬಗ್ಗೆ ಶಾಸ್ತ್ರ, ಅನುಮಾನಾದಿಗಳಿಗೆ ಶರಣುಹೋಗಬೇಕಲ್ಲದೆ ಬೇರೆ ಗತಿಯೇ ಇರು ವುದಿಲ್ಲ ಈ ವಿಷಯದಲ್ಲಿ ಭಾಸ್ಕರಾಚಾರ್ಯರೂ ಸಹ— "ದಿವ್ಯಂ ಜ್ಞಾನಮ- ತೀಂದ್ರಿಯಂ ಯದೃಷಿಭಿರ್ಬ್ರಾಹ್ಮಂ ವಸಿಷ್ಠಾದಿಭಿಃ। ಪಾರಂಪರ್ಯ- ವಶಾದ್ರಹಸ್ಯಮವನೀಂ ನೀತಂ ಪ್ರಕಾಶ್ಯಂ ತತಃ ॥ ನೈತದ್ದ್ವೇಷಿಕೃತಘ್ನ ದುರ್ಜನ ದುರಾಚಾರಾಽಚಿರಾವಾಸಿನಾಂ। ಸ್ಯಾದಾಯುಃ ಸುಕೃತಕ್ಷಯೋ ಮುನಿಕೃತಾಂ ಸೀಮಾಮಿಮಾಮುಜ್ಝತಃ ॥" ಅಂದರೆ— ಜ್ಯೋತಿಃಶಾಸ್ತ್ರವು ಅತೀಂದ್ರಿಯವಾದ (ಕೇವಲ ಪ್ರತ್ಯಕ್ಷದಿಂದಲೇ ತಿಳಿಯತಕ್ಕದಾಗಿರದ) ದಿವ್ಯ

ಜ್ಞಾನವಾಗಿದ್ದು ಅತಿರಹಸ್ಯವಾಗಿರತಕ್ಕ ಈ ಶಾಸ್ತ್ರವನ್ನು ವಸಿಷ್ಠಾದಿ ಮಹರ್ಷಿಗಳು ಜನರ ಕಲ್ಯಾಣಕ್ಕಾಗಿಯೇ ಉಪದೇಶಿಸಿರುತ್ತಾರೆ; ಆದ್ದರಿಂದ ದ್ವೇಷ, ಕೃತಘ್ನತೆ, ದುರಾಚಾರ ಮೊದಲಾದ ದೋಷವುಳ್ಳ ದುರ್ಜನರಿಗೆ ಇದನ್ನು ಬೋಧಿಸಬಾರದು. (ಎಂದು ಆ ಮಹರ್ಷಿಗಳ ಸಂಕಲ್ಪವಿರುವುದು) ಇದನ್ನು ಮೀರಿದರೆ ಆಯುಷ್ಯವೂ, ಪುಣ್ಯವೂ ನಾಶವಾಗುವುದು; ಎಂದು ಸ್ಪಷ್ಟವಾಗಿ ಹೇಳಿರುವರು. ಪ್ರತ್ಯಕ್ಷಜ್ಞಾನವು ಸಜ್ಜನರು, ದುರ್ಜನರೆಂಬ ಭೇದವಿಲ್ಲದೆ ಎಲ್ಲರಿಗೂ ಸಮಾನವಾಗಿರುವುದರಿಂದಲೂ, ಪ್ರತ್ಯಕ್ಷದಿಂದಾಗತಕ್ಕ ಜ್ಞಾನವು ಅತೀಂದ್ರಿಯವೆನ್ನುವುದು ತೀರ ವಿರುದ್ಧವಾಗುವುದರಿಂದಲೂ ಜ್ಯೋತಿಷಶಾಸ್ತ್ರಕ್ಕೆ ಬ್ರಾಹ್ಮ, ದಿವ್ಯ, ಅತೀಂದ್ರಿಯ ಮೊದಲಾದ ವಿಶೇಷಣಗಳನ್ನು ಹೇಳಿರುವ ಈ ಶ್ಲೋಕದಿಂದ ಜ್ಯೋತಿಷವು ಕೇವಲ ಪ್ರತ್ಯಕ್ಷ ಶಾಸ್ತ್ರವಲ್ಲವೆಂದು ಭಾಸ್ಕರಾಚಾರ್ಯರೇ ಸಿದ್ಧಾಂತಪಡಿಸಿರುವರೆಂಬುದು ಸ್ಪಷ್ಟವಾಗುವುದು. ಆದುದರಿಂದ 'ಪ್ರತ್ಯಕ್ಷಂ ಜ್ಯೋತಿಷಂ ಶಾಸ್ತ್ರಂ' ಎಂಬ ಶ್ಲೋಕವು ಕೇವಲ ಪ್ರತ್ಯಕ್ಷದಿಂದಲೇ ಜ್ಯೋತಿಃಶಾಸ್ತ್ರದ ನಿರ್ಣಯವಾಗುವುದೆಂದು ಹೇಳಿದ್ದಾಗಿರದೆ, ಪ್ರರೋಚನಾರ್ಥವಾಗಿ ಹೇಳಿರುವ ಪ್ರಾಶಸ್ತ್ಯವಚನವೆಂದು ಎಲ್ಲರೂ ಒಪ್ಪತಕ್ಕದ್ದಾಗಿದೆ. ಪ್ರಾಶಸ್ತ್ಯವಚನವೆಂದರೆ— ಮೆಚ್ಚಿಗೆಗಾಗಿ ಮಹತ್ವವನ್ನು ಹೇಳುವ ಮಾತು. 'ನ ಗೃಹಂ ಗೃಹಮಿತ್ಯಾಹುರ್ಗೃಹಿಣೀ ಗೃಹಮುಚ್ಯತೇ|' 'ಯಸ್ಯಾಸ್ತಿ ವಿತ್ತಂ ಸ ನರಃ ಕುಲೀನಃ|' ಈ ಮೊದಲಾದ ಶ್ಲೋಕಗಳು ಇದೇ ತರದ್ದಾಗಿವೆ ಇನ್ನು ಹೇಗಾದರೂ ಜ್ಯೋತಿಷವು ಪ್ರತ್ಯಕ್ಷ ಶಾಸ್ತ್ರವೇ ಸರಿಯೇಂದೂ, ಆದಕ್ಕೆ ಪ್ರತ್ಯಕ್ಷವೇ ನಿರ್ಣಾಯಕವೆಂದೂ, ಪ್ರತ್ಯಕ್ಷದಿಂದ ನಿರ್ಣಯಿಸಿದ ಶಾಸ್ತ್ರದಲ್ಲಿ ವಿವಾದಕ್ಕೆ ಕಾರಣವಿಲ್ಲವೆಂದೂ ಯಾರಾದರೂ ಆಗ್ರಹಪಡುವುದಾದರೆ ಅಂಥವರು ತಮ್ಮ ಅಭಿನಿವೇಶಕ್ಕೆ ಸರಿಯಾದ ಯಾವ ಜ್ಯೋತಿಷಗ್ರಂಥವೂ (ಪಂಚಾಂಗವೂ ಸಹ) ಈ ವರೆಗೆ ನಿರ್ಮಾಣವಾಗಿಲ್ಲವೆಂದಾದರೂ ಒಪ್ಪಬೇಕಾಗುತ್ತದೆ. ಅಥವಾ ಇತರ ಶಾಸ್ತ್ರಗಳಂತೆ ಜ್ಯೋತಿಃಶಾಸ್ತ್ರವಾದರೂ ಪ್ರತ್ಯಕ್ಷದಿಂದಲೇ ಸಿದ್ಧವಾಗತಕ್ಕದ್ದಲ್ಲವೆಂದೂ, ಆದರಲ್ಲಾದರೂ ಶಾಸ್ತ್ರೀಯ ವ್ಯವಸ್ಥೆಯೇ ಆವಶ್ಯವಾಗಿರುವುದೆಂದೂ ಒಪ್ಪಬೇಕು. ಯಾಕೆಂದರೆ— ಪ್ರತ್ಯಕ್ಷಪ್ರಮಾಣವನ್ನೇ ಮುಖ್ಯವಾಗಿಟ್ಟುಕೊಂಡಿರುವ ಆಧುನಿಕ ನವೀನ ದೃಕ್ಪಕ್ಷದಲ್ಲಿಯೇ ಚೈತ್ರ, ರೈವತಗಳೆಂಬ ಎರಡು ಅವಾಂತರಪಕ್ಷಗಳಿದ್ದು, ಆವೆರಡು ಪಕ್ಷಗಳಿಂದ ಸಾಧಿಸಲ್ಪಡುವ ಪಂಚಾಂಗಗಳ ಸಂಕ್ರಾಂತಿಗಳಲ್ಲಿ ೩-೪ ದಿನಗಳ ವ್ಯತ್ಯಾಸವೂ ಅಧಿಕಮಾಸಗಳಲ್ಲಿ ೩. ೪ ತಿಂಗಳುಗಳ ವ್ಯತ್ಯಾಸವೂ, ಇದರಂತೆ ಪ್ರತಿನಿತ್ಯದ ಪಂಚಾಂಗಗಳಲ್ಲಿಯೂ ಸಹ ಇನ್ನೂ ಅನೇಕ ತರದ ವ್ಯತ್ಯಾಸಗಳೂ ಉಂಟಾಗುತ್ತಿದ್ದು ಈ ಎರಡು ಪಕ್ಷಗಳು ಈಗಲೂ ಸಹ ಬಲವಾಗಿ ವಿವಾದಿಸುತ್ತಲೇ ಇರುವಲ್ಲಿ ದೃಕ್ಪಕ್ಷದವರು

ಪ್ರತ್ಯಕ್ಷವೆಂದು ಸಾಧಿಸುವ ಈ ನೂತನ ಜ್ಯೋತಿಃಶಾಸ್ತ್ರವೆಂಬುದು ಸಹ ಪ್ರತ್ಯಕ್ಷ ಶುದ್ಧವಾದ ನಿರ್ವಿವಾದ ಶಾಸ್ತ್ರವಲ್ಲವೆಂದು ಸಿದ್ಧವಾಗುವುದಿಲ್ಲವೇ? ಇದಲ್ಲದೆ ಕಲ್ಪಾದಿಯಿಂದ ಕಲ್ಪಾಂತದ ವರೆಗೆ ಗ್ರಹಗಳ ಗತಿಯು ಸಮಾನವಾಗಿರಲಾರದೆಂದೂ, ಆಗಾಗ ಬದಲಾಯಿಸುತ್ತಿರುವ ಗತಿಗನುಸಾರವಾಗಿ ಹೊಸ ಶಾಸ್ತ್ರವನ್ನು ರಚಿಸಿಕೊಳ್ಳಬೇಕಾಗುವುದರಿಂದ ಜ್ಯೋತಿಷವು ಪ್ರಗತಿಶಾಸ್ತ್ರವಾಗಿರುವುದೆಂದೂ, ಕಲ್ಪಾಂತದ ವರೆಗಿನ ಗಣಿತ ಕ್ರಮವನ್ನು ಹೇಳಿರುವ ಆರ್ಷಶಾಸ್ತ್ರಗಳು ಯಾವಾಗಲೂ ಪ್ರಮಾಣವಾಗಲಾರವೆಂದೂ ಕೆಲವರು ಹೇಳುತ್ತಿರುವರು. ಸ್ವಲ್ಪ ವಿಚಾರ ಮಾಡಿದರೆ ಈ ಕಲ್ಪನೆಯಾದರೂ ಸರಿಯಾದುದಲ್ಲವೆಂದೇ ಸಿದ್ಧವಾಗುವುದು. ಹೇಗಂದರೆ— ತ್ರಿಕಾಲಾಬಾಧಿತವಾಗಿ(ನಿತ್ಯವಾಗಿ)ರುವ ವೇದಗಳ ರಹಸ್ಯಾರ್ಥಗಳನ್ನೆಲ್ಲ ಗರ್ಭೀಕರಿಸಿಕೊಂಡಿರುವ ಮಹರ್ಷಿಗಳ ಸ್ಮೃತಿರೂಪವಾದ ಧರ್ಮಶಾಸ್ತ್ರಗಳಲ್ಲಿ ಉಕ್ತವಾಗಿರುವ ಪ್ರಾತಃ, ಸಂಗವ, ಮಧ್ಯಾಹ್ನಾದಿ ಕಾಲವಿಭಾಗಗಳು, ತಿಥಿನಕ್ಷತ್ರಗಳ ವೇಧ, ತದನುಸಾರವಾಗಿ ವಿಧಿಸಲ್ಪಟ್ಟಿರುವ ಕರ್ಮಾಂಗಕಾಲನಿರ್ಣಯ ಈ ಮೊದಲಾದ ಕರ್ಮಕಾಲಪ್ರಕ್ರಿಯೆಗಳೆಲ್ಲವೂ ಆಗಾಗ ಬದಲಾಯಿಸದೆ ಸ್ಥಿರರೂಪವಾಗಿರುವಲ್ಲಿ, ತ್ರಿಕಾಲಜ್ಞರಾದ ಮಹರ್ಷಿಗಳು ಕಲ್ಪಾಂತದ ವರೆಗಿನ ಗ್ರಹಗತಿಸ್ವರೂಪವನ್ನೂ ಕರ್ಮಗಳಿಗೆ ಯೋಗ್ಯವಾದ ಕಾಲಸ್ವರೂಪವನ್ನೂ ತತ್ವತಃ ತಿಳಿದವರಾಗಿದ್ದು, ಕರ್ಮಕಾಲಪ್ರಕ್ರಿಯೆಗಳಿಗನುಸಾರವಾಗಿ ಕಾಲನಿರ್ಣಯಗಳಿಗೆಲ್ಲ ಪ್ರಮಾಣವಾಗಿರುವಂತೆ ಕಲ್ಪಾಂತದ ವರೆಗಿನ ಗಣಿತಕ್ರಮವನ್ನು ಹೇಳಿದ್ದು ಯುಕ್ತವೇ ಆಗಿರುವುದರಿಂದ ಅದರಲ್ಲಿ ವಿಸಂಗತಿಯೇನೂ ಇರುವುದಿಲ್ಲ. ಇಷ್ಟೇ ಅಲ್ಲ, ಗಣಿತಕ್ರಮಕ್ಕೂ, ತಿಥ್ಯಾದಿಗಳಿಗೂ, ಕರ್ಮಕಾಲಪ್ರಕ್ರಿಯೆಗಳಿಗೂ, ಕಾಲನಿರ್ಣಯಕ್ಕೂ, ಧರ್ಮಶಾಸ್ತ್ರಕ್ಕೂ, ವೇದಕ್ಕೂ ಪರಸ್ಪರ ಸಂಬಂಧವಿರುವುದರಿಂದ ಇದರಲ್ಲಿ ಯಾವುದೇ ಬದಲಾಯಿಸಲ್ಪಟ್ಟರೂ ಪರ್ಯಾಯದಿಂದ ಎಲ್ಲಕ್ಕೂ ಬಾಧೆಯುಂಟಾಗುವುದು. ಆದಕಾರಣ ಶ್ರುತಿಸ್ಮೃತಿಗಳು ಪ್ರಮಾಣವಾಗಿ (ತಿಳಿಯಲ್ಪಡುತ್ತಿ)ರುವ ವರೆಗೆ ಆರ್ಷಜ್ಯೋತಿಃಶಾಸ್ತ್ರವಾದರೂ ಪ್ರಮಾಣವೇ ಆಗಿರುವುದು ಅನಿವಾರ್ಯವಾಗಿದೆ. ಆದುದರಿಂದಲೇ ಕರ್ಮಾರ್ಹತಿಥ್ಯಾದಿಗಳನ್ನು ನಿರೂಪಿಸುವ ಜ್ಯೋತಿಃಶಾಸ್ತ್ರವನ್ನಾದರೂ ಇತರ ಶಾಸ್ತ್ರಗಳಂತೆ ಶಾಸ್ತ್ರೀಯವ್ಯವಸ್ಥೆಯಿಂದಲೇ ತಿಳಿದುಕೊಳ್ಳಬೇಕಲ್ಲದೆ ಪ್ರತ್ಯಕ್ಷಾದಿ ಪ್ರಮಾಣದಿಂದ ಸ್ವತಂತ್ರವಾಗಿ ಕಲ್ಪಿಸಬಾರದೆಂದು ಶಾಸ್ತ್ರಪ್ರವರ್ತಕರೇ ಆಗಿರುವ ಮಹರ್ಷಿಗಳೂ, ಅಭಿಯುಕ್ತರೂ ಸಹ ಸ್ಪಷ್ಟವಾಗಿ ಹೇಳಿರುವರು. ಅವುಗಳಲ್ಲಿ ಕೆಲವು ವಚನಗಳನ್ನಿಲ್ಲಿ ಉದಾಹರಿಸುವೆವು. ಸಂವರ್ತಃ— "ಜ್ಯೌತಿಷಂ ವ್ಯವಹಾರಂ ಚ ಪ್ರಾಯಶ್ಚಿತ್ತಂ ಚಿಕಿತ್ಸಿತಂ | ವಿನಾ ಶಾಸ್ತ್ರೇಣ ಯೋ ಬ್ರೂಯಾತ್ತಮಾಹುರ್ಬ್ರಹ್ಮಘಾತಕಂ ||"

ಅಂದರೆ— ಜ್ಯೋತಿಷ, ವ್ಯವಹಾರ, ಪ್ರಾಯಶ್ಚಿತ್ತಾದಿಗಳನ್ನೆಲ್ಲ ಶಾಸ್ತ್ರಪ್ರಮಾಣ ವನ್ನು ಬಿಟ್ಟು ಹೇಳುವವರು ಬ್ರಹ್ಮಘಾತಕರಾಗುವರೆಂದು ಸಂವರ್ತರೂ, ವರಾಹಮಿಹಿರಾಚಾರ್ಯರ:—. "ಜ್ಯೌತಿಷಮಾಗಮಶಾಸ್ತ್ರಂ ವಿಪ್ರತಿಪತ್ತೌ ನ ಯೋಗ್ಯಮಸ್ಮಾಕಂ। ಸ್ವಯಮೇವ ವಿಕಲ್ಪಯಿತುಂ ಕಿಂತು ಬಹೂನಾಂ ಮತಂ ವಕ್ಷ್ಯೇ ॥" ತಾತ್ಪರ್ಯ:— ಜ್ಯೋತಿಷವು (ಪ್ರತ್ಯಕ್ಷದಿಂದ ತಿಳಿಯತಕ್ಕದ್ದಾಗಿರದ) ಆಗಮಶಾಸ್ತ್ರವಾಗಿರುತ್ತದೆ. ಅದರಲ್ಲಿ ವಿಪ್ರತಿಪತ್ತಿಯು (ಮತಭೇದವು) ತೋರಿದಾಗ ನಾವಾಗಿ (ಪ್ರತ್ಯಕ್ಷಾದಿ ಕಾರಣಗಳಿಂದ) ನಿರ್ಣಯವನ್ನು ಕಲ್ಪಿಸುವುದು ಯುಕ್ತವಲ್ಲ. ಆದುದರಿಂದ ಪ್ರಸಿದ್ಧರಾಗಿರುವ ಬಹುಮುನಿಗಳ ಮತವನ್ನು ಸಂಗ್ರಹಿಸಿ ಹೇಳತಕ್ಕದ್ದೆಂದು ವರಾಹಮಿಹಿರಾಚಾರ್ಯರೂ, ಈ ಶ್ಲೋಕದ ವ್ಯಾಖ್ಯಾನದಲ್ಲಿ— ಭಟ್ಟೋತ್ಪಲ:— "ಜ್ಯೋತೀಂಷಿ ಗ್ರಹನಕ್ಷತ್ರಾದೀನಿ ತಾನ್ಯಧಿಕೃತ್ಯ ಕೃತಂ ಶಾಸ್ತ್ರಂ ಜ್ಯೌತಿಷಂ। ತಚ್ಚ ಆಗಮಶಾಸ್ತ್ರಂ ಆಗಮೇನ ವಿನಾ ನ ಜ್ಞಾಯತೇ। ಅಸ್ಮಾಕಂ ವಿಪ್ರತಿಪತ್ತೌ ವಿಷಯೇ ಸ್ವಯಮೇವ ಆತ್ಮನಾ ವಿಕಲ್ಪಯಿತುಂ ನ ಯೋಗ್ಯಂ ನ ನ್ಯಾಯ್ಯಂ ಇದಂ ಶೋಭನಮಿದಮಶೋಭನಮಿತಿ। ಯತಃ ಸರ್ವಏವ ಮುನಯಃ ತ್ರಿಕಾಲದರ್ಶಿನಃ ನ ಜ್ಞಾಯತೇ ಕಸ್ಯ ಮುನೇಃ ಕೀದೃಶ ಆಗಮ ಇತಿ। ತಸ್ಮಾದಸ್ಮಾಕಂ ವಿಕಲ್ಪಯಿತುಂ ನ ನ್ಯಾಯ್ಯಂ। ಕಿಂತು ಬಹೂನಾಂ ಪ್ರಭೂತಾನಾಂ ಮತಂ ವಕ್ಷ್ಯೇ ॥" ತಾತ್ಪರ್ಯ:— ಜ್ಯೋತಿಷವು ಗ್ರಹ–ನಕ್ಷತ್ರಾದಿಗಳ ವಿಷಯವಾಗಿ ಮುನಿಗಳಿಂದ ರಚಿಸಲ್ಪಟ್ಟ ಶಾಸ್ತ್ರವಾಗಿದೆ. ಅದನ್ನು ಶಾಸ್ತ್ರಜ್ಞಾನವಿಲ್ಲದೆ ತಿಳಿಯಲಾಗುವುದಿಲ್ಲ. ಅದರಲ್ಲಿ ಯಾವ ವಿಷಯದಲ್ಲಾದರೂ ನಮಗೆ ವಿರೋಧ ತೋರಿಬಂದರೆ ನಾವಾಗಿ (ಪ್ರತ್ಯಕ್ಷಾದಿಗಳ ಮೂಲಕ) ಇದು ಸರಿ; ಇದು ಸರಿಯಲ್ಲವೆಂದು ನಿರ್ಣಯಿಸುವುದು ಯುಕ್ತವಲ್ಲ. ಯಾಕೆಂದರೆ— ಈ (ಶಾಸ್ತ್ರಪ್ರವರ್ತಕರಾದ) ಎಲ್ಲ ಮಹರ್ಷಿಗಳೂ ತ್ರಿಕಾಲಜ್ಞಾನಸಂಪನ್ನರೇ ಆಗಿರುವರು. ಮುನಿಗಳ ಶಾಸ್ತ್ರ (ಅಭಿಪ್ರಾಯ) ವನ್ನು ತಿಳಿಯುವುದು ಸುಲಭವಲ್ಲ. ಆದುದರಿಂದ ಬಹುಋಷಿಗಳಿಗೆ ಸಮ್ಮತವಾಗಿರುವ ಪ್ರಸಿದ್ಧಮತವನ್ನು ಹೇಳುವೆನೆಂದು ಭಟ್ಟೋತ್ಪಲರೂ ಹೇಳಿರುವರು. ಇದಲ್ಲದೆ "ಶಾಸ್ತ್ರಾರ್ಥಃ ಕ್ವಾಪಿ ನ ತ್ಯಾಜ್ಯಸ್ತ್ಯಕ್ತೋಽತೀವ ಪ್ರಮಾದಕೃತ್। ದೃಷ್ಟಾದೃಷ್ಟವಿರೋಧಶ್ಚ ಸರ್ವಸಂಪದ್ವಿನಾಶನಃ। ದೇವೈರಥೋ ಮನುಷ್ಯೈಶ್ಚ ನ ತ್ಯಾಜ್ಯಃ ಶಾಸ್ತ್ರಚೋದಿತಃ ॥" ಅಂದರೆ— ಮನುಷ್ಯನಾಗಲಿ, ದೇವತೆಗಳೇ ಆಗಲಿ ಶಾಸ್ತ್ರಾರ್ಥವನ್ನು ಎಂದಿಗೂ ಬಿಡಬಾರದು. ಪ್ರತ್ಯಕ್ಷಾದಿ ಕಾರಣಗಳಿಂದ ಶಾಸ್ತ್ರವನ್ನು ಪರಿತ್ಯಾಗ ಮಾಡುವುದು ಬಹು ದೊಡ್ಡ ತಪ್ಪಾಗಿರುವುದು. ಆದರಿಂದ

ಬಹು ಅನರ್ಥವುಂಟಾಗುವುದು; ಎಂದು ಬೃಹಸ್ಪತ್ಯಾಚಾರ್ಯರು ಹೇಳಿದ್ದಾರೆ ಈ ಮೊದಲಾದ ಅನೇಕ ಕಾರಣಗಳಿಂದ ಜ್ಯೋತಿಷವನ್ನಾದರೂ ಇತರ ಶಾಸ್ತ್ರಗಳಂತೆ ಶಾಸ್ತ್ರವಚನಗಳಿಂದಲೇ ವ್ಯವಸ್ಥೆ ಮಾಡಬೇಕೆಂತಲೂ, ಕೇವಲ ಪ್ರತ್ಯಕ್ಷದಿಂದಲೇ ನಿರ್ಣಯಿಸಿಕೊಳ್ಳತಕ್ಕದ್ದಲ್ಲವೆಂತಲೂ ಶಾಸ್ತ್ರಸಿದ್ಧಾಂತವಾಗಿದೆ.

೭ನೇ ಪ್ರಶ್ನೆ:— ಪ್ರತಿಜ್ಞೆಯಲ್ಲಿ ಸೂರ್ಯಸಿದ್ಧಾಂತಾನುಸಾರಿ ಪಂಚಾಂಗವೇ ಗ್ರಾಹ್ಯವೆಂದು ಹೇಳಿರುವುದು ಶಾಸ್ತ್ರವಚನಗಳಿಂದ ಸಿದ್ಧವಾಗುವುದೋ ?

ಉತ್ತರ:— ಹೌದು, ಅವಶ್ಯವಾಗಿ ಸಿದ್ಧವಾಗುವದು. ಹೇಗೆಂದರೆ— ಧರ್ಮಶಾಸ್ತ್ರ-ಜ್ಯೋತಿಃಶಾಸ್ತ್ರಗಳೆರಡಕ್ಕೂ ಪ್ರವರ್ತಕರಾದ ವೇದವ್ಯಾಸರು ಹೇಳಿರುವುದೇನಂದರೆ- "ಸೌರೋಪನಿಷದೇವಾದ್ಯಾ ಕಲ್ಪೇ ತ್ವಸ್ಮಿನ್ ಸನಾತನೀ| ಯಾಮಾದಿತ್ಯಃ ಸ್ವಯಂ ಪ್ರಾಹ ಮಯಾಯ ಪರಿಪೃಚ್ಛತೇ || ಕಾಲಜ್ಞಾನಂ ತು ತತ್ಸಿದ್ಧಂ ವಿಶುದ್ಧಂ ನಾನ್ಯದಿಷ್ಯತೇ | ತದ್ವಿರುದ್ಧಂ ತು ಯತ್ಸರ್ವಮಪರಿಗ್ರಾಹ್ಯಮೇವ ತತ್ ||" ಅಂದರೆ- ಭಗವಾನ್ ಸೂರ್ಯದೇವನು ತಾನೇ ಮಯನಿಗೆ ಹೇಳಿದ ಅನಾದಿಯಾದ, ಉಪನಿಷದ್ರೂಪವಾದ ಸೂರ್ಯಸಿದ್ಧಾಂತವೇ ಈ ಕಲ್ಪದಲ್ಲಿ ಅತ್ಯಂತ ಶ್ರೇಷ್ಠವಾದದ್ದು. ಇದರಲ್ಲಿ ಹೇಳಿದ ಕಾಲಜ್ಞಾನವೇ ಶುದ್ಧವು. ಇದಕ್ಕೆ ವಿರುದ್ಧವಾಗಿರುವುದೆಲ್ಲ ಪರಿತ್ಯಾಜ್ಯವು; ಎಂದಿರುವರು. ಇದರಂತೆಯೇ ಭಾರ್ಗವಸಂಹಿತೆಯಲ್ಲಿಯೂ ಸಹ- "ಸೂರ್ಯಾಂಶಪುರುಷಪ್ರೋಕ್ತಂ ತಂತ್ರಂ ತಿಥ್ಯಾದಿಸಂಮತಂ | " ಅಂದರೆ- ತಿಥ್ಯಾದಿಗಳಲ್ಲಿ ಸೂರ್ಯಾಂಶಪುರುಷನು ಹೇಳಿದ ಸೂರ್ಯಸಿದ್ಧಾಂತವೇ ಯೋಗ್ಯವಾದದ್ದು; ಎಂದಿರುವದು. ವರಾಹಮಿಹಿರಾಚಾರ್ಯರು ಸಹ 'ಸ್ಪಷ್ಟತರಃ ಸಾವಿತ್ರಃ' ಅಂದರೆ ಸೂರ್ಯಸಿದ್ಧಾಂತವು ಅತಿ ಸ್ಪಷ್ಟವಾದದ್ದೆಂದು ಹೇಳಿದ್ದು, ಸ್ಮೃತಿಸಾರ ಸಮುಚ್ಚಯವೆಂಬ ನಿರ್ಣಯ ಗ್ರಂಥದಲ್ಲಿಯೂ ಕೂಡ "ಸೂರ್ಯಸಿದ್ಧಾಂತಪಂಚಾಂಗಂ ವಿಲೋಕ್ಯೈವ ಪ್ರವರ್ತಯೇತ್ | ಪ್ರಮಾಣಂ ತದಿತಿ ಜ್ಞೇಯಮನ್ಯಥಾ ವ್ಯಾಕುಲಂ ಭವೇತ್ || " ಅಂದರೆ- ಸೂರ್ಯಸಿದ್ಧಾಂತ ಪಂಚಾಂಗದಿಂದಲೇ ಕರ್ಮಕಾಲವನ್ನು ನಿರ್ಣಯಿಸಬೇಕು. ಕಾಲನಿರ್ಣಯದಲ್ಲಿ ಅದೇ ಪ್ರಮಾಣವಾಗಿರುವದು. ಅದಕ್ಕೆ ವಿರುದ್ಧವಾದರೆ ವ್ಯಾಕುಲಾಸ್ಪದವಾಗುವುದು. ಎಂದು ನಿರ್ಣಯಿಸಲ್ಪಟ್ಟಿರುವುದು. ಈ ಪ್ರಕಾರ ಅನೇಕ ಶಾಸ್ತ್ರವಚನಗಳಿರುವವಷ್ಟೇ ಅಲ್ಲದೆ, ಭಾಸ್ಕರಾಚಾರ್ಯರು, ವಿದ್ಯಾರಣ್ಯರು, ಕಮಲಾಕರ ದೈವಜ್ಞರೇ ಮೊದಲಾದ ಇನ್ನೂ ಅನೇಕ ಮಹಾಮಹಾ ಪಂಡಿತೋತ್ತಮರೆಲ್ಲರೂ ಸೂರ್ಯಸಿದ್ಧಾಂ

ತವನ್ನು ಆತ್ಯಾದರದಿಂದ ಶಾಸ್ತ್ರ ಪ್ರಮಾಣವನ್ನಾಗಿ ಸ್ವೀಕರಿಸಿ ಬಂದಿರುವುದರಿಂದ ಲೂ ಸಹ ಕರ್ಮಕಾಲನಿರ್ಣಯದಲ್ಲಿ ಸೂರ್ಯಸಿದ್ಧಾಂತ ಪಂಚಾಂಗವೇ ಪ್ರಾಮುಖ್ಯವಾದುದೆಂದು ಸ್ವಯಮೇವ ಸಿದ್ಧವಾಗಿರುವದು. ಇನ್ನು 'ತದ್ವಿರುದ್ಧಂ ತು ಯತ್ಸರ್ವಂ' ಎಂಬ ವಚನ ಧ್ವನಿಯ ಬಲದಿಂದ ಇದಕ್ಕೆ ವಿರುದ್ಧವಿಲ್ಲದ (ವೃದ್ಧಿ ಕ್ಷಯಾದಿಗಳಲ್ಲಿ ಸಾಮ್ಯವಿರುವ) ತದನುಸಾರಿ ಪಂಚಾಂಗವೂ (ಗೌಣತ್ವೇನ) ಗ್ರಾಹ್ಯವೆಂದು ತಿಳಿಯುವುದಾಗಿದೆ.

೮ನೇ ಪ್ರಶ್ನೆ:— ಇತ್ತೀಚೆಗೆ ಕೆಲವರು ನವೀನ ದೃಕ್ಪಂಚಾಂಗವೆಂಬ ಹೆಸರಿನಿಂದ ಪಂಚಾಂಗವನ್ನು ಪ್ರಕಟಿಸುತ್ತಿದ್ದು, ಅದು ಪ್ರತ್ಯಕ್ಷಕ್ಕೆ ಸರಿಬರುವಂತೆ ನೂತನ ಸಂಸ್ಕಾರಗಳಿಂದ ತಯಾರಿಸಿದ್ದೆಂತಲೂ, ಅದರಲ್ಲಿ ಕಾಣಿಸಿರುವ ತಿಥ್ಯಾದಿಗಳೇ ಕರ್ಮಾನುಷ್ಠಾನಕ್ಕೆ ಯೋಗ್ಯವಾದವುಗಳೆಂತಲೂ ಹೇಳುತ್ತಾರೆ. ಅದು ಸರಿಯೋ?

ಉತ್ತರ:— ಸರಿಯಲ್ಲ, ಯಾಕಂದರೆ- ನಾವು ಹಿಂದೆ ವಿವರಿಸಿರುವಂತೆ ಮಹರ್ಷಿಪ್ರಣೀತವಾದ ಯಾವ ಜ್ಯೋತಿಷಗ್ರಂಥಗಳಲ್ಲಿಯೂ ಅಂಥಾ (ನೂತನ) ಸಂಸ್ಕಾರಗಳನ್ನು ಹೇಳಿಲ್ಲ; ಮತ್ತು ಅದರಂತೆ ಸಿದ್ಧವಾಗುವ ತಿಥ್ಯಾದಿಕಾಲಗಳು ಯಾವ ಶಾಸ್ತ್ರಕ್ಕೂ ಸಂಬರತಕ್ಕವುಗಳಲ್ಲ; ಇದೂ ಅಲ್ಲದೆ ಜ್ಯೋತಿಷ-ಧರ್ಮ ಶಾಸ್ತ್ರಗಳಲ್ಲೆಲ್ಲ ಸರ್ವಸಾಮಾನ್ಯವಾಗಿ ಕಂಡುಬರುವ ತಿಥ್ಯಾದಿಗಳ ಪರಮವೃದ್ಧಿ-ಕ್ಷಯಗಳಿಗೂ ಕೂಡ ಅದು ಸರಿಯಿರದೆ ತೀರಾ ಭಿನ್ನವಾಗಿರುವುದರಿಂದ, ಮತ್ತು ಶಾಸ್ತ್ರಸಿದ್ಧವಾದ ಕಾಲಕ್ಕೂ ದೃಕ್ಪಂಚಾಂಗದಲ್ಲಿ ಕಾಣಿಸಿರುವ ಕಾಲಕ್ಕೂ ತಿಥ್ಯಾದಿಗಳಲ್ಲಿ ಸುಮಾರು ೧೫ ಘಟಿಗಳ ವರೆಗಿನ ವ್ಯತ್ಯಾಸವು ತೋರಿಬರುವುದರಿಂದ, ದೃಕ್ಪಂಚಾಂಗದ ತಿಥ್ಯಾದಿಗಳ ಪ್ರಕಾರ ಕರ್ಮಕಾಲವನ್ನು ನಿರ್ಣಯಿಸಿದರೆ ಹಲವು ಸಂದರ್ಭಗಳಲ್ಲಿ ಕರ್ಮಾಚರಣೆಯನ್ನು ಮಾಡತಕ್ಕ ದಿನವೇ ಬದಲಾಗುವುದು; ಹಲವು ಸಂದರ್ಭಗಳಲ್ಲಿ ಶಾಸ್ತ್ರೋಚಿತವಾದ ಕಾಲವೇ ಸಿಗದೆ ಅನವಸ್ಥೆಯುಂಟಾಗುವುದು; ಇದರಿಂದ ಕರ್ಮಕಾಲನಿರ್ಣಯವೇ ಕುಂಠಿತವಾಗಿ ಬಹು ಅನರ್ಥಕ್ಕೆ ಕಾರಣವಾಗುವುದು. (ಶಾಸ್ತ್ರದ ಸಾಮಾನ್ಯಪರಿಚಯವುಳ್ಳವರಿಗೂ ಸಹ ಸರಿಯಾಗಿ ತಿಳಿಯುವಂತೆ ಈ ವಿಷಯವನ್ನು ಮುಂದೆ ಧರ್ಮಶಾಸ್ತ್ರಪರಿಶೀಲನವೆಂಬ ಪ್ರಕರಣದಲ್ಲಿ ಉದಾಹರಣಪೂರ್ವಕವಾಗಿ ತೋರಿಸಿಕೊಟ್ಟಿದೆ.) ಈ ಮುಂತಾದ ಅನೇಕ ಕಾರಣಗಳಿಂದ ದೃಕ್ಪಂಚಾಂಗದ ತಿಥ್ಯಾದಿಗಳು ಕರ್ಮಾನುಷ್ಠಾನಕ್ಕೆ ಯೋಗ್ಯವಾದವುಗಳಲ್ಲ. ಆದುದರಿಂದ ಈ ವಿಷಯದಲ್ಲಿ ಶಿವ, ಬ್ರಹ್ಮಾದಿಸುರೋತ್ತಮರೂ,

ವಸಿಷ್ಠ, ಗರ್ಗ, ಶಾಕಲ್ಯಾದಿ ಮಹರ್ಷಿಗಳೂ, ಶ್ರೀಶಂಕರಾಚಾರ್ಯರು, ವಿದ್ಯಾರಣ್ಯರು ಮೊದಲಾದ ಮಹಾಪುರುಷರೂ, ರಲ್ಲಾಚಾರ್ಯ, ಬೊಪ್ಪದೇವ, ಕಮಲಾಕರ ದೈವಜ್ಞರೇ ಮೊದಲಾದ ಪಂಡಿತೋತ್ತಮರೂ ಸಹ ಏಕಕಂಠವಾಗಿ ಆರ್ಷ ಶಾಸ್ತ್ರಗಳಲ್ಲಿ ಹೇಳಲ್ಪಡದ ಕೇವಲ ಪ್ರತ್ಯಕ್ಷಸಿದ್ಧವಾದ ಬೀಜಾದಿ ಯಾವ ಸಂಸ್ಕಾರಗಳನ್ನೂ ತಿಥ್ಯಾದಿ ಗಣಿತವಲ್ಲಿ ಮಾಡಬಾರದೆಂತಲೂ, ಗ್ರಹಣಾದಿ ವಿಷಯಗಳಲ್ಲಿ ಮಾತ್ರ ಅಂಥಾ ಸಂಸ್ಕಾರಗಳನ್ನು ಮಾಡಬೇಕೆಂತಲೂ, ನಿರ್ಣಯವಾಗಿ ಹೇಳಿರುವರು. ಅಂಥ ಮೂಲ ಪ್ರಮಾಣ ವಚನಗಳನ್ನೆಲ್ಲ ಸಂಗ್ರಹಿಸಿ ಮುಂದೆ ಪ್ರತ್ಯೇಕವಾಗಿ ಬರೆದಿದೆ.

೯ನೇ ಪ್ರಶ್ನೆ:— ತಿಥ್ಯಾದಿಗಳಲ್ಲಿ ಮಾಡಬಾರದ (ಬೀಜಾದಿದೃಕ್) ಸಂಸ್ಕಾರಗಳನ್ನು ಗ್ರಹಣಾದಿಗಳಲ್ಲಿ ಮಾಡಬೇಕೆನ್ನಲು ಕಾರಣವೇನು?

ಉತ್ತರ:— ಶಾಸ್ತ್ರಗಳಲ್ಲಿ ಹೇಳಿರುವ ನಿಯಮಗಳಿಗೆ ಪ್ರತ್ಯೇಕವಾಗಿ ಕಾರಣವನ್ನು ಹುಡುಕಬೇಕಾಗಿಲ್ಲ. ಯಾಕಂದರೆ- ಶಾಸ್ತ್ರವಚನಗಳು ಪ್ರತ್ಯಕ್ಷಾದಿ ಪ್ರಮಾಣಾಂತರಗಳಿಂದ ಸಿದ್ಧವಾಗಬೇಕಾಗಿರದೆ ಸ್ವತಃ ಪ್ರಮಾಣಗಳಾಗಿರುವವು. ಕಾರಣಗಳನ್ನು ತಿಳಿದೇ ಅವುಗಳನ್ನು ಪರಿಗ್ರಹಿಸಬೇಕೆಂತಾಗಲಿ, ಕಾರಣಗಳು ತಿಳಿಯದಿದ್ದರೆ ಬಿಡತಕ್ಕದ್ದೆಂತಾಗಲಿ ಎಲ್ಲಿಯೂ ಹೇಳಿಲ್ಲ. ಇಷ್ಟೇ ಅಲ್ಲ, ಏತೈರ್ಯಾನಿ ಪ್ರಣೀತಾನಿ ಧರ್ಮಶಾಸ್ತ್ರಾಣಿ ವೈ ಪುರಾ | ತಾನ್ಯೇತಾನಿ ಪ್ರವೀಣೈಸ್ತು ನ ಹಾತವ್ಯಾನಿ ಹೇತುಭಿಃ ||" "ಪುರಾಣಂ ಮಾನವೋ ಧರ್ಮಃ ಸಾಂಗೋ ವೇದಶ್ಚಿಕಿತ್ಸಿತಂ | ಆಜ್ಞಾಸಿದ್ಧಾನಿ ಚತ್ವಾರಿ ನ ಹಾತವ್ಯಾನಿ ಹೇತುಭಿಃ ||" ತಾತ್ಪರ್ಯ:— ವೇದ, ವೇದಾಂಗ, ಧರ್ಮಶಾಸ್ತ್ರ, ಪುರಾಣಾದಿಗಳಲ್ಲಿ ಹೇಳಿರುವ ನಿಯಮಗಳು ಈಶ್ವರಾಜ್ಞಾರೂಪವಾಗಿರುವುದರಿಂದ ಅವುಗಳಿಗೆ ಪ್ರತಿಕೂಲವಾಗಿ ಪ್ರತ್ಯಕ್ಷ, ಅನುಮಾನ, ಉಪಪತ್ತಿ ಮುಂತಾದ ಕಾರ್ಯಕಾರಣಾದಿ ಹೇತುಸಾಧ್ಯವಿಚಾರಗಳಿಂದ ವಿರೋಧವನ್ನು ಕಲ್ಪಿಸಿ ಅವುಗಳನ್ನು ಬಿಡತಕ್ಕದ್ದಲ್ಲವೆಂತಲೇ ಸ್ಪಷ್ಟವಾಗಿ ಹೇಳಿರುವ ಈ ವಿಷ್ಣುವಚನದಂತೆ ಬೃಹಸ್ಪತಿ, ಮನು, ವ್ಯಾಸ, ವಸಿಷ್ಠ, ಹಾರೀತ, ಅಂಗಿರಸಾದಿ ಮಹರ್ಷಿಗಳು ಹೇಳಿರುವ ಇನ್ನೂ ಅನೇಕ ವಚನಗಳಿರುತ್ತವೆ. ಆದುದರಿಂದ ಶಾಸ್ತ್ರೋಕ್ತ ನಿಯಮಗಳ ಕಾರಣಗಳನ್ನೆಲ್ಲ ನಾವು ತಿಳಿದುಕೊಳ್ಳಲೇಬೇಕೆಂತಾಗಲಿ, ಅಥವಾ ತಿಳಿದುಕೊಳ್ಳಲಿಕ್ಕೆ ಶಕ್ಯವಿರುವುದೆಂತಾಗಲಿ, ಕಾರಣಗಳು ತಿಳಿಯದ ನಿಯಮಗಳು ಗ್ರಾಹ್ಯವಲ್ಲವೆಂತಾಗಲಿ ಹೇಳಲಿಕ್ಕಾಗದು. ಇನ್ನು ಕೆಲವರು ತಮ್ಮ ಬುದ್ಧಿ

ಚಾತುರ್ಯದಿಂದ ಶಾಸ್ತ್ರನಿಯಮಗಳಿಗೆ ಯಾವುದಾದರೂ ಕಾರಣವನ್ನು ಕಲ್ಪಿಸಬಹುದಾಗಿದ್ದರೂ ಅವಷ್ಟೇ ಸರಿಯೆಂತಾಗಲಿ, ಅದು ಸರ್ವರಿಗೂ ಸಮ್ಮತವಾಗಬಹುದೆಂತಾಗಲಿ ಅಥವಾ ಅದರ ಹೊರತು ಬೇರೆ ಕಾರಣಗಳೇನೂ ಇಲ್ಲವೆಂತಾಗಲಿ ಹೇಳಲಿಕ್ಕೂ ಬರಲಾರದು. ಶಾಸ್ತ್ರಗಳಲ್ಲಿ ಕರ್ಮ, ಕರ್ತೃ, ವಿಷಯಾದಿ ಅನೇಕ ಭೇದಗಳಿಂದ ಬೇರೆ ಬೇರೆ ಅನೇಕ ನಿಯಮ (ವ್ಯವಸ್ಥೆ) ಗಳು ಹೇಳಲ್ಪಟ್ಟವೆ. ಅವೆಲ್ಲವುಗಳ ಸರಿಯಾದ ಕಾರಣಗಳನ್ನು ತಿಳಿದುಕೊಳ್ಳುವುದು ಕಷ್ಟವೇ ಸರಿ. ಉಪನಯನದಂತಹ ಶ್ರೇಷ್ಠಕರ್ಮದಲ್ಲಿ ವಟುವಿಗೆ (ಹುಡುಗನಿಗೆ) ಊಟವಾದ ನಂತರ ಕ್ಷೌರವು ವಿಹಿತವಾಗಿರುವಾಗ ಸಾಮಾನ್ಯವಾದ ನಿತ್ಯಕ್ಷೌರದಲ್ಲಿ ಭೋಜನೋತ್ತರ ಕ್ಷೌರವು ಯಾಕೆ ನಿಷೇಧಿಸಲ್ಪಟ್ಟದೆಯೆಂತಲೂ, ದಂಪತಿಗಳ ಸಹಭೋಜನವು ನಿತ್ಯದಲ್ಲಿಯೂ ನಿಷಿದ್ಧವಾಗಿರುವಾಗ ವಿವಾಹಾದಿ ಕಾರ್ಯಗಳಲ್ಲಿ ಹೇಗೆ ಉಚಿತವಾಗುವುದೆಂದೂ, ನಿತ್ಯದ ಊಟಕ್ಕೆ ಯೋಗ್ಯವಾದ ಹಲವು ಪದಾರ್ಥಗಳು ಶ್ರಾದ್ಧಾದಿಗಳಲ್ಲಿ ಯಾಕೆ ನಿಷೇಧಿಸಲ್ಪಟ್ಟವೆ ಎಂಬುದಾಗಿಯೂ, ಯತಿ, ದೀಕ್ಷಿತ (ನಿಷ್ಠಾವಂತ) ರಿಗೂ ಸಹ ವಪನ ಯೋಗ್ಯವಾದ ಪರ್ವಕಾಲವು ಇತರರಿಗೆ ಯಾಕೆ ನಿಷಿದ್ಧವಾಗಿರಬೇಕೆಂದೂ, ದೇವಕಾರ್ಯಕ್ಕೆ ಪೂರ್ವಾಹ್ನವೂ, ಪಿತೃಕಾರ್ಯಗಳಿಗೆ ಅಪರಾಹ್ನವೂ ಯಾಕೆ ವಿಹಿತವಾಗಿರುವುದೆಂದೂ, ದೇವಕಾರ್ಯವಾದ ಪ್ರದೋಷವ್ರತದಲ್ಲಿ ಶಿವಪೂಜೆಯನ್ನು ಪ್ರದೋಷಕಾಲದಲ್ಲಿಯೂ, ಪಿತೃಕೃತ್ಯವಾದ ನಾಂದೀಶ್ರಾದ್ಧವನ್ನು ಪೂರ್ವಾಹ್ನದಲ್ಲಿಯೂ, ಅದರಲ್ಲಿಯೂ, ಅಧಾನಾಂಗವಾಗಿ ಮಾಡತಕ್ಕದ್ದನ್ನು ಅಪರಾಹ್ನದಲ್ಲಿಯೂ ಯಾಕೆ ವಿಧಿಸಿರುವುದೆಂದೂ, ಆಕಳು, ಎಮ್ಮೆ, ಆಡು, ಕುನ್ನಿ ಮೊದಲಾದವುಗಳೆಲ್ಲ ತಿರ್ಯಗ್ಜಂತುಗಳೇ ಆಗಿ (ರುವುದು ಪ್ರತ್ಯಕ್ಷಸಿದ್ಧವಾಗಿ) ರುವಲ್ಲಿ ಆಕಳುಗಳಿಗೇನೇ ಅಷ್ಟು ಮಹತ್ವವೇಕೆಂದೂ, (ಹೀಗೆ ಸಾಮಾನ್ಯ ವಿಚಾರಕ್ಕೆ ಹತ್ತದ ಹಲವು ವಿಷಯಗಳುಂಟು; ಆ ಕುರಿತು) ಯಾರಾದರೂ ಆಕ್ಷೇಪಿಸಿದರೆ ಶಾಸ್ತ್ರತಃ ತಿಳಿದಷ್ಟನ್ನು ಹೇಳಬಹುದಲ್ಲದೆ ಇವುಗಳಿಗೆಲ್ಲ ಪ್ರತ್ಯಕ್ಷಾದಿ ಉಪಪತ್ತಿಗಳಿಂದ ಕಾರಣವನ್ನು ನಿರ್ಣಯಿಸಲಿಕ್ಕೆ ಶಕ್ಯವಿಲ್ಲ. ಶಿಷ್ಟರಾದ ಆಸ್ತಿಕರಿಗೆ "ವಚನಾದೇವ ಪ್ರವೃತ್ತಿಃ, ವಚನಾದೇವ ನಿವೃತ್ತಿಃ" ಎಂಬಂತೆ ಗ್ರಾಹ್ಯಾಗ್ರಾಹ್ಯತೆಯ ನಿರ್ಣಯದಲ್ಲಿ ಶಾಸ್ತ್ರವಚನಗಳೇ ಪ್ರಮಾಣವಾಗಿರುವುದರಿಂದ ಈ ಭಿನ್ನ ಭಿನ್ನ ವಿಷಯಗಳಲ್ಲೆಲ್ಲ ಹೇಗೆ ಶಾಸ್ತ್ರವಚನಗಳೇ ಪ್ರಮಾಣವಾಗಿರುವವೋ ಹಾಗೆಯೇ ಬೀಜಾದಿ ದೃಕ್ಸಂಸ್ಕಾರಗಳು ತಿಥ್ಯಾದಿಗಳಲ್ಲಿ ಬೇಡವೆಂತಲೂ, ಗ್ರಹಣಾದಿಗಳಲ್ಲಿ ಬೇಕೆಂತಲೂ ಹೇಳಿರುವ ಶಾಸ್ತ್ರವಚನಗಳು ಪ್ರಮಾಣವೆಂದು ತಿಳಿಯಬೇಕು. ಮತ್ತು ಶಾಸ್ತ್ರಗಳಲ್ಲಿ ಹಾಗೆ ಹೇಳಿರಲಿಕ್ಕೆ ಅವೆರಡೂ ಸ್ವರೂಪತಃ (ಪ್ರತ್ಯಕ್ಷತಶ್ಚ) ಭಿನ್ನವಿಷಯಗಳಾಗಿರುವುದೇ ಕಾರಣವೆಂದು ತಿಳಿಯುವುದು.

೧೦ನೇ ಪ್ರಶ್ನೆ:— ತಿಥ್ಯಾದಿಗಳೂ, ಗ್ರಹಣಾದಿಗಳೂ ಸ್ವರೂಪತಃ ಭಿನ್ನ ವಿಷಯಗಳೆನ್ನುವುದು ಹೇಗೆ?

ಉತ್ತರ:— ತಿಥ್ಯಾದಿಗಳಿಗೂ, ಗ್ರಹಣಾದಿಗಳಿಗೂ ಸಂಸ್ಕಾರ ಭೇದವನ್ನು ನಿರೂಪಿಸಿ(ಮುಂದೆ ಧರ್ಮಶಾಸ್ತ್ರಪರಿಶೀಲನ ಭಾಗದಲ್ಲಿ ವಿವರಿಸಿ) ರುವ ಶಾಸ್ತ್ರವಚನಗಳಿಂದಲೇ ಅದು ಸಿದ್ಧವಾಗುವುದಲ್ಲದೆ, ಶಾಸ್ತ್ರತಃ ಅವುಗಳ ಸ್ವರೂಪವನ್ನು ವಿಚಾರಿಸುವುದರಿಂದಲೂ ಅವುಗಳು ಭಿನ್ನ ವಿಷಯಗಳೆಂದು ತಿಳಿದು ಬರುವುದು. ಹೇಗೆಂದರೆ— ಅಖಂಡವಾಗಿ ನಿತ್ಯವೆನಿಸಿರುವ ಮಹಾಕಾಲದಲ್ಲಿ ಸಂವತ್ಸರ, ಅಯನ, ಋತು, ಮಾಸ, ಪಕ್ಷ, ತಿಥಿ, ನಕ್ಷತ್ರ ಮೊದಲಾದ ವಿಭಾಗಗಳು ಕಲ್ಪಿಸಲ್ಪಟ್ಟಿದ್ದು ಇವುಗಳೆಲ್ಲ ಕರ್ಮಾನುಷ್ಠಾನಾರ್ಥವಾಗಿ ಧರ್ಮಶಾಸ್ತ್ರಗಳಲ್ಲಿ ಪ್ರತ್ಯೇಕವಾಗಿ ನಿರ್ಣಯಿಸಲ್ಪಟ್ಟಿವೆ. ಮತ್ತು ಕಾಲವಿಭಾಗಾತ್ಮಕವಾದ ಈ ತಿಥ್ಯಾದಿಗಳು ಕಾಲದ ಅವಯವಗಳೆಂದು ಪರಿಗಣಿಸಲ್ಪಟ್ಟಿವೆ. ಇವರಂತೆ ಗ್ರಹಣಾದಿಗಳು ಕಾಲ ವಿಭಾಗಗಳಲ್ಲಿ ಸೇರಿದವುಗಳಲ್ಲ. ಆದುದರಿಂದ ಅವು ಕಾಲದ ಅವಯವಗಳೂ ಆಗಿರುವುದಿಲ್ಲ. ಶಾಸ್ತ್ರೀಯವಾದ ಕಾಲ ವಿಭಾಗಗಳು ಶಾಸ್ತ್ರಜ್ಞಾನದಿಂದಲೇ ತಿಳಿಯತಕ್ಕವುಗಳಾಗಿರುವುವಲ್ಲದೆ ಪ್ರತ್ಯಕ್ಷಾದಿಗಳಿಂದ ತಿಳಿಯಲ್ಪಡತಕ್ಕವುಗಳಲ್ಲ. ಇಂದ್ರಿಯಕ್ಕೆ ಗೋಚರಿಸತಕ್ಕ ವಿಷಯಗಳನ್ನು ಮಾತ್ರ ಪ್ರತ್ಯಕ್ಷದಿಂದ ತಿಳಿಯಲಿಕ್ಕೆ ಬರುತ್ತದೆ. "ನ ಚಾಕ್ಷುಷೋ ಬಾಹ್ಯೇಂದ್ರಿಯಕೃತಃ। ಕಾಲಸ್ಯ ರೂಪಾದಿ ಹೀನತ್ವಾತ್" ಅಂದರೆ— ಕಾಲವು ರೂಪಾದಿಗಳಿಲ್ಲದ್ದಾಗಿರುವುದರಿಂದ ಇಂದ್ರಿಯಗಳಿಗೆ ಗೋಚರಿಸತಕ್ಕದ್ದಲ್ಲವೆಂಬ ಕಾಲಮಾಧವೋಕ್ತಿಯಂತೆ ಕಾಲವು ಪ್ರತ್ಯಕ್ಷಕ್ಕೆ ಗೋಚರಿಸತಕ್ಕದ್ದಲ್ಲವೆಂಬುದು ಸಕಲ ಶಾಸ್ತ್ರಗಳಿಗೂ ಸಮ್ಮತವಿರುವ ವಿಷಯವಾಗಿದೆ. ಆದುದರಿಂದ ಕಾಲಾವಯವಗಳಾದ ತಿಥ್ಯಾದಿಗಳಾದರೂ ಪ್ರತ್ಯಕ್ಷ ವಿಷಯಗಳಲ್ಲವೆಂದು ಶಾಸ್ತ್ರದಿಂದಲೇ ಸಿದ್ಧವಾಗುವುದು. ಮತ್ತು ಗ್ರಹಣಾದಿಗಳು ಆಬಾಲವೃದ್ಧರಿಗೆಲ್ಲ ಪ್ರತ್ಯಕ್ಷವಾಗಿ ಗೋಚರಿಸತಕ್ಕದ್ದಾಗಿರುವುದರಿಂದ ಪ್ರತ್ಯಕ್ಷ ವಿಷಯಗಳೆಂದು ಪ್ರಸಿದ್ಧವೇ ಆಗಿರುತ್ತವೆ. ತಿಥ್ಯಾದಿಗಳೂ ಪ್ರತ್ಯಕ್ಷಗಳೇ ಸರಿಯೆಂದು ಛಲದಿಂದ ಅಪಲಾಪ ಮಾಡುವ ವಿಪಕ್ಷಿಗಳಾದವರೂ ಸಹ (ಅವರ ಮತದಂತೆ ಷಷ್ಟ್ಯಂಶಯಂತ್ರಾದಿ ಸಲಕರಣೆಗಳ ಮೂಲಕ ತಿಳಿಯತಕ್ಕ ಸೂರ್ಯ-ಚಂದ್ರಾಂತರದಲ್ಲಿ ಗಣಿತ ಶಾಸ್ತ್ರದ ಸಹಾಯದಿಂದ ಲಂಬನಾದಿಗಳನ್ನು ಕಳೆದು ಕರ್ಮಾರ್ಹ ತಿಥಿಯನ್ನು ತಿಳಿಯಬೇಕಾಗುತ್ತದೆ; ಗ್ರಹಣಾದಿಗಳಾದರೆ ಈ ಶಾಸ್ತ್ರ, ಯಂತ್ರಾದಿ ಉಪಾಧಿಗಳೇನೂ ಇಲ್ಲದೆ ಸಕಲರಿಗೂ ಬರಿಗಣ್ಣಿನಿಂದಲೇ ತಿಳಿಯಲಿಕ್ಕೆ ಬರುತ್ತದೆ. ಈ ಕಾರಣ) ಗ್ರಹಣಾದಿಗಳ ಜ್ಞಾನಕ್ಕೂ, ತಿಥ್ಯಾದಿಗಳ ಜ್ಞಾನಕ್ಕೂ ಇರುವ ಸೋಪಾಧಿಕ ಭೇದವನ್ನಾದರೂ ಒಪ್ಪಿಕೊಳ್ಳದೆ ನಿವೃತ್ತಿಯಿಲ್ಲ. ಆದುದರಿಂದ ಗ್ರಹಣಾದಿಗಳಿಗೂ ತಿಥ್ಯಾದಿಗಳಿಗೂ ಇರುವ ವೈಲಕ್ಷಣ್ಯವು ವಿವಾದಾಸ್ಪದವಾಗಿಲ್ಲ. ಇನ್ನು ಆಚರಿಸತಕ್ಕ ಕರ್ಮಸಂಬಂಧವನ್ನು ವಿಚಾರಿಸಿದರೂ ಕೂಡ ಅವೆರಡೂ ಭಿನ್ನ ವಿಷಯಗಳೆಂದು ತಿಳಿದುಬರುವುದು. ಹೇಗೆಂದರೆ— ತಿಥ್ಯಾದಿಗಳಲ್ಲಿ ಆಚರಿಸತಕ್ಕ ಕರ್ಮಗಳು ಸ್ವತಂತ್ರವಾಗಿದ್ದು ತಿಥ್ಯಾದಿಗಳು ಕರ್ಮಾಚರಣೆಗನುಗುಣವಾಗಿ ಪರಿಗ್ರಹಿಸಲ್ಪಡುವುದರಿಂದ ಕರ್ಮಾಂಗಗಳೆಂದು ಹೇಳಲ್ಪಟ್ಟಿರುವುವು. ಆದುದರಿಂದ ಅವು

ಸ್ವತಂತ್ರಗಳಲ್ಲ. “ ತಿಥಿನಕ್ಷತ್ರವಾರಾದಿ ಸಾಧನಂ ಪುಣ್ಯಪಾಪಯೋಃ | ಪ್ರಧಾನಗುಣಭಾವೇನ ಸ್ವಾತಂತ್ರ್ಯೇಣ ನ ತೇ ಕ್ಷಮಾಃ ॥ ” ಎಂಬ ಗರ್ಗೋಕ್ತಿಯಿಂದಲೂ, ‘ ನ ಚ ಕಾಲಸ್ಯ ಕರ್ಮಾಂಗತ್ವೇ ವಿವದಿತವ್ಯಂ | ’ ಎಂಬ ಕಾಲಮಾಧವೋಕ್ತಿಯಿಂದಲೂ ಈ ವಿಷಯವು ಸ್ಪಷ್ಟವಾಗುವುದು. ಹೀಗೆ ಕರ್ಮವು ಸ್ವತಂತ್ರವೂ, ತಿಥ್ಯಾದಿಗಳು ಅಂಗವೂ ಆಗಿರುವುದರಿಂದಲೇ ಏಕಭಕ್ತ, ನಕ್ತ, ಉಪವಾಸ, ವ್ರತ, ದಾನ, ಶ್ರಾದ್ಧಾದಿ ಸಾಮಾನ್ಯ—ವಿಶೇಷ ಕರ್ಮಗಳಲ್ಲೆಲ್ಲ ತಿಥ್ಯಾದಿಗಳು ಆಯಾ ಕರ್ಮಗಳಿಗೆ ವಿಹಿತವಾಗಿರುವ ಪೂರ್ವಾಹ್ಣ, ಮಧ್ಯಾಹ್ನ, ಅಪರಾಹ್ಣ, ಪ್ರದೋಷಾದಿ ಕರ್ಮಕಾಲವ್ಯಾಪ್ತಿ ಸಹಿತವಾಗಿಯೇ ಸ್ವೀಕರಿಸಲ್ಪಡುತ್ತವಲ್ಲದೆ, ವ್ಯಾಪ್ತಿರಹಿತವಾದ ಕೇವಲ ತಿಥ್ಯಾದಿಗಳನ್ನೇ ಅಧಿಕರಿಸಿ ಕರ್ಮಗಳನ್ನು ಆಚರಿಸತಕ್ಕದ್ದಿಲ್ಲ ಅಪೇಕ್ಷಿತವ್ಯಾಪ್ತಿಯು ಸಿಗದಿರುವ ಸಂದರ್ಭದಲ್ಲಿ ಶಾಸ್ತ್ರನಿರ್ಣಯಾನುಸಾರವಾಗಿ ಬೇರೆ ದಿನಗಳಲ್ಲಾದರೂ ಕರ್ಮವು ಆಚರಿಸಲ್ಪಡುತ್ತದೆ. ಅಂಥಾ ಸಂದರ್ಭಗಳಲ್ಲಿ ಕರ್ಮಕಾಲಕ್ಕೆ ವಿಹಿತತಿಥಿಯು ಸಿಗದೆ ಬೇರೆ ತಿಥಿಯಿದ್ದರೂ ಇರಬಹುದು. ಹೀಗೆ ಕರ್ಮಸ್ವರೂಪಕ್ಕನುಗುಣವಾಗಿ ಗ್ರಾಹ್ಯತಿಥಿಯು ನಿರ್ಣಯಿಸಲ್ಪಡುವುದಲ್ಲದೆ ಖರ್ವ, ದರ್ಪಾದಿ ತಿಥಿಲಕ್ಷಣಕ್ಕನುಗುಣವಾಗಿ ಕರ್ಮಸ್ವರೂಪವು ನಿರ್ಣಯಿಸಲ್ಪಡತಕ್ಕದ್ದಿರುವುದಿಲ್ಲ. ಗ್ರಹಣಾದಿಗಳಲ್ಲಾದರೆ ಹೀಗಲ್ಲ; ಗ್ರಸ್ತೋದಯ, ಗ್ರಸ್ತಾಸ್ತ, ಖಗ್ರಾಸಾದಿ ಗ್ರಹಣಸ್ವರೂಪಾನುಸಾರವಾಗಿ ವೇಧದ ಅವಧಿಯೂ, ಅದರಂತೆ ನಿಯಮವಿಶೇಷಗಳೂ ನಿರ್ಣಯಿಸಲ್ಪಡುತ್ತವೆ. ಮತ್ತು ಸ್ಪರ್ಶ, ಮಧ್ಯ, ಮೋಕ್ಷಾದಿ ಅವಸ್ಥಾವಿಶೇಷಗಳಿಗನುಸಾರವಾಗಿಯೇ ಸ್ನಾನ, ದಾನ, ಜಪ, ಹೋಮಾದಿ ಕರ್ಮಭೇದಗಳು ಪ್ರವರ್ತಿಸುವುವು. ಆದುದರಿಂದ ಗ್ರಹಣಾದಿಗಳಲ್ಲಿ ಅಂಥಾ ವಿಶೇಷಯೋಗವೇ ಪ್ರಧಾನ (ಸ್ವತಂತ್ರ) ವಾಗಿದ್ದು ತನ್ನಿಮಿತ್ತಕ ಕರ್ಮಗಳೆಲ್ಲಾ ಅದರ ಅಧೀನವಾಗಿರುವವು. ಇದೂ ಅಲ್ಲದೆ ಗ್ರಹಣಾದಿಗಳಲ್ಲಿ ಕೇವಲ ಶಾಸ್ತ್ರೀಯಜ್ಞಾನವೇ ಕರ್ಮಾಚರಣೆಗೆ ನಿಮಿತ್ತವಾಗಿರದೆ “ಯಾವಚ್ಚಾಕ್ಷುಷದರ್ಶನಯೋಗ್ಯಂ ತಾವಾನ್ ಪುಣ್ಯಕಾಲಃ ” ಇತ್ಯಾದಿ ವಚನಗಳ ಪ್ರಕಾರ ಚಾಕ್ಷುಷ (ಪ್ರತ್ಯಕ್ಷ) ಜ್ಞಾನಯೋಗ್ಯತೆಯೇ ಕರ್ಮಾಚರಣೆಗೆ ಹೇತುವಾಗಿರುವುದು. ಆದುದರಿಂದಲೇ ದೇಶಾಂತರಗಳಲ್ಲಿ ದೃಶ್ಯವಾಗುವ ಗ್ರಹಣವು ದೃಶ್ಯವಿಲ್ಲದಿರುವ ದೇಶಗಳಲ್ಲಿ ಆಚರಣೀಯವಾಗಿರುವುದಿಲ್ಲ. ಇದರಂತೆ ತಿಥ್ಯಾದಿಗಳಲ್ಲಿ ಕರ್ಮದ ಸಂಬಂಧವುಂಟಾಗಲಿಕ್ಕೆ ಚಾಕ್ಷುಷಜ್ಞಾನಯೋಗ್ಯತೆಯೇ ಬೇಕೆಂದೂ ( ಅದು ಕೇವಲ ಅಸಂಭವವು ) ಮತ್ತು ಅಂತರಾತ್ಮಕವೆಂತಾಗಲೀ, ಕಲಾತ್ಮಕವೆಂತಾಗಲೀ ಕಲ್ಪಿಸಿಕೊಂಡು ಹೇಗಿದ್ದರೂ ತಿಥಿಯು ಪ್ರತ್ಯಕ್ಷವೇ ಸರಿಯೆನ್ನುವ ದೃಕ್ಪಕ್ಷದವರ ಮತದಂತೆಯಾದರೂ ಸೂರ್ಯ-ಚಂದ್ರರು ಅದೃಶ್ಯಾರ್ಧಗೋಲದಲ್ಲಿ (ಅಸ್ತರಾಗಿ) ರುವಾಗ ಯಾವ ರೀತಿಯಿಂದಲೂ ತಿಥಿಯು ದೃಶ್ಯವಾಗುವುದಿಲ್ಲವಾದುದರಿಂದ ಅಂಥಾ ತಿಥಿಯು ಆಚರಣೀಯವಲ್ಲವೆಂದೂ ಎಲ್ಲಿಯೂ ಹೇಳಿಲ್ಲ. ಹೀಗೆ ಆಚರಿಸತಕ್ಕ ಕರ್ಮ

ಸಂಬಂಧವನ್ನು ಪರ್ಯಾಲೋಚಿಸುವಲ್ಲಿಯೂ ಸಹ ತಿಥ್ಯಾದಿಗಳೂ, ಗ್ರಹಣಾದಿಗಳೂ ತೀರಾ ಭಿನ್ನಪ್ರಕಾರದ ವಿಷಯಗಳೆಂದೇ (ಶಾಸ್ತ್ರದ ತಾತ್ಪರ್ಯವೆಂದು) ಸಿದ್ಧವಾಗುವುದು. ಮತ್ತು ದೃಕ್ಪಕ್ಷದ ಪಂಡಿತರು ರಚಿಸುತ್ತಿರುವ ನವೀನ ದೃಕ್ಪಂಚಾಂಗದಲ್ಲಿಯಾದರೂ ಗ್ರಹಣಾದಿಗಳಿಗೂ, ತಿಥ್ಯಾದಿಗಳಿಗೂ ಸಮಾನ ಸಂಸ್ಕಾರಗಳನ್ನು ಮಾಡುತ್ತಿಲ್ಲವಾದುದರಿಂದ ಅವು ಸಮಾನವಿಷಯಗಳಾಗಿಲ್ಲವೆಂದು ಅವರಾದರೂ ಒಪ್ಪಿದಂತೆಯೇ ಸರಿ; ಹೀಗೆ ಯಾವ ರೀತಿಯಿಂದ ವಿಚಾರಿಸಿದರೂ ತಿಥ್ಯಾದಿಗಳೂ, ಗ್ರಹಣಾದಿಗಳೂ ಸ್ವರೂಪತಃ ಭಿನ್ನ ವಿಷಯಗಳಾಗಿರುವವೆಂದೇ ಸಿದ್ಧಾಂತವಾಗುತ್ತದೆ.

೧೧ನೇ ಪ್ರಶ್ನೆ:— ಪ್ರತ್ಯಕ್ಷಸಿದ್ಧ ಬೀಜಾದಿ ಸಂಸ್ಕಾರಗಳನ್ನು ವಿಷಯಭೇದದಿಂದ ವ್ಯವಸ್ಥೆ ಮಾಡಿರುವುದು ಯುಕ್ತವೆಂದು ಸಾಮಾನ್ಯಜನರಿಗೂ ಮನಗಾಣಿಸಿಕೊಡಲಾಗುವುದೋ ?

ಉತ್ತರ:— ಆಗಬಹುದು. ಹೇಗೆಂದರೆ— ಗ್ರಹಣಾದಿ ನಿಮಿತ್ತವಾಗಿ ಆಚರಿಸತಕ್ಕ ಕರ್ಮಗಳಿಗೆ ಪ್ರತ್ಯಕ್ಷಜ್ಞಾನಯೋಗ್ಯತೆಯೇ ಕಾರಣವೆಂದು ಶಾಸ್ತ್ರಗಳಲ್ಲಿ ಉಕ್ತವಾಗಿದೆ. ಮತ್ತು ಶಾಸ್ತ್ರಸಿದ್ಧಕಾಲದಲ್ಲಿ ಗ್ರಹಣಾದಿಗಳು ದೃಗ್ಗೋಚರಾರ್ಹವಾಗದಿದ್ದರೆ ಪುಣ್ಯಕಾಲವನ್ನು ಆಚರಿಸಬೇಕಾಗಿಲ್ಲವೆಂದೂ ಶಾಸ್ತ್ರದಿಂದಲೇ ಸಿದ್ಧವಾಗುತ್ತದೆ. ಆದುದರಿಂದ ಕರ್ಮಕ್ಕೆ ನಿಮಿತ್ತವಾಗಿರುವ ಪ್ರತ್ಯಕ್ಷತೆಯನ್ನು ಸಂಪಾದಿಸಲಿಕ್ಕಾಗಿ ಪ್ರತ್ಯಕ್ಷಸಿದ್ಧ ಬೀಜಾದಿ ಸಂಸ್ಕಾರಗಳನ್ನು ಗ್ರಹಣಾದಿಗಳಲ್ಲಿ ಮಾಡುವುದು ಶಾಸ್ತ್ರಾನುಕೂಲವೇ ಆಗಿರುತ್ತದೆ. ಇದರಂತೆ ತಿಥ್ಯಾದಿಗಳ ಪ್ರತ್ಯಕ್ಷಜ್ಞಾನವೇ ಕರ್ಮಾರ್ಹವೆಂದಾಗಲಿ, ಅದೃಶ್ಯ ತಿಥ್ಯಾದಿಗಳು ಅದೃಶ್ಯಗ್ರಹಣಗಳಂತೆ ಕರ್ಮಾರ್ಹವಲ್ಲವೆಂತಾಗಲಿ ಶಾಸ್ತ್ರಗಳಲ್ಲಿ ಹೇಳಿಲ್ಲ. ಇಷ್ಟೇ ಅಲ್ಲ; ಕಾಲಾತ್ಮಕಗಳಾದ ತಿಥ್ಯಾದಿಗಳು ಸ್ವಭಾವತಃ ಅದೃಶ್ಯಗಳಾಗಿರುವ ಕಾರಣ (ಅಂದರೆ ಬೀಜಾದಿ ಸಂಸ್ಕಾರಗಳನ್ನು ಮಾಡಿದರೂ ಅವುಗಳಿಗೆ ದೃಶ್ಯಯೋಗ್ಯತೆಯುಂಟಾಗುವುದಿಲ್ಲವಾದುದರಿಂದ) ಕೇವಲ ಶಾಸ್ತ್ರಸಿದ್ಧವಾದ ತಿಥ್ಯಾದಿಕಾಲದಲ್ಲಿಯೇ ಕರ್ಮಗಳನ್ನಾಚರಿಸಬೇಕೆಂದು ಶಾಸ್ತ್ರಾಭಿಪ್ರಾಯವಿದೆ. ಹೀಗೆ ಬೀಜಾದಿ ಸಂಸ್ಕಾರಗಳನ್ನು ಮಾಡಿದರೆ ಪ್ರತ್ಯಕ್ಷಸಿದ್ಧಿಯೂ ಆಗದೆ, ಶಾಸ್ತ್ರವಿರೋಧವು ಮಾತ್ರ ಘಟಿಸುವುದರಿಂದ ತಿಥ್ಯಾದಿಗಳಲ್ಲಿ ಅಂಥಾ ಸಂಸ್ಕಾರಗಳನ್ನು ಮಾಡಬಾರದೆಂತಲೂ, ಗ್ರಹಣಾದಿಗಳಲ್ಲಿ ಶಾಸ್ತ್ರಾನುಕೂಲವಾಗಿರುವುದರಿಂದ ಮಾಡಬಹುದೆಂತಲೂ ಶಾಸ್ತ್ರಗಳಲ್ಲಿ ವ್ಯವಸ್ಥೆ ಮಾಡಿದ್ದು ಅತ್ಯಂತ ಯುಕ್ತವಾಗಿರುತ್ತದೆ. ಇನ್ನು ದೃಕ್ಪಕ್ಷದವರ ಹೇಳಿಕೆಯಂತೆ ಬೀಜಾದಿ ಸಂಸ್ಕಾರಗಳಿಂದ ತಿಥ್ಯಾದಿಗಳು ಪ್ರತ್ಯಕ್ಷಯೋಗ್ಯವಾಗುತ್ತವೆಂದು ಭಾವಿಸುವುದಾದರೂ ಶಾಸ್ತ್ರಸಮ್ಮತವಲ್ಲದ ಅಂಥಾ ಸಂಸ್ಕಾರಗಳು ಕರ್ಮಾಂಗತಿಥ್ಯಾದಿಗಳಲ್ಲಿ ಗ್ರಾಹ್ಯವಾಗಿರುವುದಿಲ್ಲ. ಹೇಗೆಂದರೆ— ನಿತ್ಯಸ್ನಾನಗಳಲ್ಲಿ ಶೀಗೆ, ಸಾಬೂನು ಮೊದಲಾದ ಪದಾರ್ಥಗಳಿಂದ ದೇಹದ ಕೊಳೆಯು ಕಳೆದು

ನಿರ್ಮಲವಾಗುವುದು ಪ್ರತ್ಯಕ್ಷಸಿದ್ಧವಾಗಿದ್ದರೂ ಕರ್ಮಾಂಗವಾದ ದೇಹಶುದ್ಧಿಗಾಗಿ ಶಾಸ್ತ್ರಗಳಲ್ಲಿ ಉಕ್ತವಾಗಿರುವ ಪಂಚಗವ್ಯ, ದಶವಿಧಸ್ನಾನಾದಿ ಕರ್ಮಗಳಲ್ಲಿ ಅವುಗಳು ಗ್ರಾಹ್ಯವಾಗಿರುವುದಿಲ್ಲ. ಆದುದರಿಂದ ಅಂಥಾ ಶಾಸ್ತ್ರೋಕ್ತ ದೇಹಶುದ್ಧಿಕರ ಕರ್ಮಗಳಲ್ಲಿ ಅವುಗಳನ್ನು ಕೂಡಿಸುವುದು ಅನಪೇಕ್ಷಿತವಷ್ಟೇ ಅಲ್ಲದೆ, ಅದರಿಂದ ಕರ್ಮಾಂಗದಲ್ಲಿ ವೈಗುಣ್ಯವೂ ಉಂಟಾಗುವುದು. ಹಾಗೆಯೇ ಪ್ರತ್ಯಕ್ಷ ಪ್ರತ್ಯಯಾರ್ಥವಾಗಿರುವ ಬೀಜಾದಿ ಸಂಸ್ಕಾರಗಳನ್ನು ಕರ್ಮಾಂಗತಿಥ್ಯಾದಿಗಳಲ್ಲಿ ಮಾಡುವುದರಿಂದ ವೈಗುಣ್ಯವೂ ವಿಸಂಗತಿಯೂ ಉಂಟಾಗುವುದು.* ಹೀಗೆ ಸಮಂಜಸವಾದ ಯಾವುದೊಂದು ಉದಾಹರಣೆಯನ್ನಿಟ್ಟುಕೊಂಡರೂ ವಿಷಯಭೇದದಿಂದ ಬೀಜಾದಿ ಸಂಸ್ಕಾರಗಳ ವ್ಯವಸ್ಥೆಯನ್ನು ಶಾಸ್ತ್ರಗಳಲ್ಲಿ ಹೇಳಿದ್ದು ಯುಕ್ತವೆಂದು ಸಾಮಾನ್ಯಜನರಿಗೂ ಮನಗಾಣಿಸಬಹುದು.

೧೨ನೇ ಪ್ರಶ್ನೆ:— ನೂತನಸಂಸ್ಕಾರಗಳನ್ನು ಮಾಡಿರುವ ದೃಕ್ಪಂಚಾಂಗದ ತಿಥ್ಯಾದಿಗಳು ಕರ್ಮಾನುಷ್ಠಾನಕ್ಕೆ ಯೋಗ್ಯವಲ್ಲವೆಂದು ಶಾಸ್ತ್ರ, ನ್ಯಾಯ, ಯುಕ್ತಿಗಳಿಂದ ನೀವು ಸಿದ್ಧಮಾಡಿರುವುದು ಸರಿ; ಆದರೆ ದೃಕ್ಪಂಚಾಂಗದ ತಿಥಿಗಳಂತೆಯೇ ಶ್ರಾದ್ಧಾದಿಕರ್ಮಗಳನ್ನಾಚರಿಸಿದರೆ ಬಾಧಕವೇನು?

ಉತ್ತರ:— ಶಾಸ್ತ್ರವಿರುದ್ಧವಾಗಿ ಆಚರಿಸುವುದರಿಂದ ಏನು ಬಾಧಕವಾಗುವುದೆಂಬುದನ್ನು ಎಲ್ಲ ಸಂದರ್ಭಗಳಲ್ಲಿಯೂ ಪ್ರತ್ಯಕ್ಷವಾಗಿಯೇ ತೋರಿಸಿಕೊಡಲಿಕ್ಕಾಗುವುದಿಲ್ಲ. ಬಾಧಕಗಳಲ್ಲಿ ಇಹ, ಪರಗಳೆಂದು ಎರಡು ವಿಧಗಳುಂಟು. ಪಾರಲೌಕಿಕಬಾಧೆಗಳು ಅನುಭವಗಮ್ಯಗಳೇ ಹೊರತು ಪ್ರತ್ಯಕ್ಷದಿಂದ ತಿಳಿಯತಕ್ಕವುಗಳಲ್ಲ. ಐಹಿಕ ಬಾಧೆಗಳಾದರೂ ಅಧರ್ಮಾಚರಣೆ ಮಾಡಿದ ಕೂಡಲೇ ಉಂಟಾಗುತ್ತವೆಂಬ ನಿಯಮವಿಲ್ಲ. ಈ ವಿಷಯದಲ್ಲಿ ಮನುಸ್ಮೃತಿಯಲ್ಲಿ— "ನಾಧರ್ಮಶ್ಚರಿತೋ ಲೋಕೇ ಸದ್ಯಃ ಫಲತಿ ಗೌರಿವ । ಶನೈರಾವರ್ತಮಾನಸ್ತು ಕರ್ತುರ್ಮೂಲಾನಿ ಕೃಂತತಿ ॥" ತಾತ್ಪರ್ಯ:— ಅಧರ್ಮವನ್ನು ಆಚರಿಸಿದ ಕೂಡಲೇ ಅನಿಷ್ಟವುಂಟಾಗುತ್ತದೆಂತಲ್ಲ; ಭೂಮಿಯಲ್ಲಿ ನೆಟ್ಟ ಬೀಜವು ಕಾಲಾಂತರದಲ್ಲಿ ಫಲಿಸುವಂತೆ ಅಧರ್ಮಾಚರಣೆಯು ಕ್ರಮೇಣ ಕರ್ತನನ್ನು ಸಮೂಲವಾಗಿ ನಾಶಮಾಡುತ್ತದೆಂದು ಹೇಳಿದೆ ಮತ್ತು ಗೀತೆಯಲ್ಲಿ "ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ । ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ॥" ಅಂದರೆ ಶಾಸ್ತ್ರಸಿದ್ಧವಾದುದನ್ನು ಬಿಟ್ಟು ತನ್ನ ಇಷ್ಟದಂತೆ ಆಚರಿಸುವವನು ಸಿದ್ಧಿಯನ್ನೂ, ಸುಖವನ್ನೂ,

---

* ಈ ಬಗ್ಗೆ ವಿದ್ಯುದ್ದೀಪ, (Electric Light) ಸ್ವರೋತ್ಪಾದಕ ಯಂತ್ರ, (Phonograph-ಫೋನೋಗ್ರಾಫ್) ಸಿಮೆಂಟ(Cement) ಮೊದಲಾದವುಗಳ ಗ್ರಾಹ್ಯಾಗ್ರಾಹ್ಯತೆಯನ್ನೂ ಇಲ್ಲಿ ಉದಾಹರಿಸಬಹುದು.

ಉತ್ತಮ ಗತಿಯನ್ನೂ ಹೊಂದುವುದಿಲ್ಲವೆಂಬುದಾಗಿ ಭಗವಾನ್ ಶ್ರೀಕೃಷ್ಣನು ಹೇಳಿರುವನು. ದೃಕ್ತಿಥಿಯು ಶಾಸ್ತ್ರಸಮ್ಮತವಾದುದಲ್ಲವಾದ್ದರಿಂದ ಅದರಂತೆ ಕರ್ಮಗಳನ್ನಾಚರಿಸುವುದು ಅಶಾಸ್ತ್ರೀಯವೂ, ಅಧರ್ಮವೂ ಆಗಿದ್ದು ಈ ಮನು ಮತ್ತು ಗೀತಾವಚನಗಳಪ್ರಕಾರ ಬಹು ಅನರ್ಥಗಳಿಗೆ ಕಾರಣವಾಗಿರುವುದು. ಇದೂ ಅಲ್ಲದೆ ದೃಕ್ಪಂಚಾಂಗದ ತಿಥ್ಯಾದಿಗಳು ಯಾವುದೊಂದು ಆರ್ಷಶಾಸ್ತ್ರಕ್ಕೂ ಸಂಗತವಾಗಿಲ್ಲದೆ ಅತ್ಯಂತ ವಿಲಕ್ಷಣವಾಗಿರುವುದರಿಂದ ಅವನ್ನನುಸರಿಸಿ ಶ್ರಾದ್ಧಾದಿ ಕರ್ಮಗಳನ್ನು ಆಚರಿಸುವ ದಿನವು ಹಲವು ಸಂದರ್ಭಗಳಲ್ಲಿ ನಿಜವಾಗಿ ಶ್ರಾದ್ಧಾದಿಗಳನ್ನಾಚರಿಸಬೇಕಾಗಿರುವ ಶಾಸ್ತ್ರಸಿದ್ಧದಿನಕ್ಕಿಂತ ಬೇರೆಯಾಗಿರುತ್ತದೆ. ಅಂಥಾ ದಿನಗಳಲ್ಲಿ ಶ್ರಾದ್ಧಾದಿಗಳನ್ನಾಚರಿಸುವಲ್ಲಿ— "ಮೃತಾಽಹಂ ಸಮತಿಕ್ರಮ್ಯ ಚಾಂಡಾಲಾಃ ಕೋಟಿಜನ್ಮಸು ।" ಈ ಮುಂತಾದ ಶಾಸ್ತ್ರವಚನಗಳಂತೆ ಶಾಸ್ತ್ರಸಿದ್ಧದಿನವನ್ನತಿಕ್ರಮಿಸಿದ ಘೋರ ಪಾತಕವು ಘಟಿಸುವುದು. ಹೀಗೆ ದೃಕ್ತಿಥಿಗಳಿಂದ ಹಲವು ತರದ ಅನಿಷ್ಟಗಳು ಸಂಭವಿಸುತ್ತವೆಂಬುದನ್ನು ಲಕ್ಷಿಸಿಯೇ ಶಿಷ್ಟಜನರ ಅನುಗ್ರಹಕ್ಕಾಗಿ ಸರ್ವಜ್ಞಾನಮಯನಾದ ಪರಶಿವನು ಲೋಕಮಾತೆಯಾದ ಪಾರ್ವತೀದೇವಿಯನ್ನು ಕುರಿತು— "ದೃಕ್ಸಿದ್ಧಖೇಟಗ್ರಹಸಾಧಿತಾಸು ಕುರ್ವಂತಿ ಕೇಚಿತ್ತಿಥಿಷು ಪ್ರಮಾದಾತ್ । ಶ್ರಾದ್ಧಾದಿಕಂ ತತ್ಪಿತೃಶಾಪತಸ್ತೇ ಪುಣ್ಯಕ್ಷಯಾದ್ದುರ್ಗತಿಮಾಪ್ನುವಂತಿ ॥" ತಾತ್ಪರ್ಯ:— ಕಲಿಕಾಲದಲ್ಲಿ ಕೆಲವರು ದೃಕ್ಸಿದ್ಧತಿಥ್ಯಾದಿಗಳಲ್ಲಿ ಶ್ರಾದ್ಧಾದಿಗಳನ್ನು ಆಚರಿಸುವರು. ಅಂಥವರು ಪಿತೃಗಳ ಶಾಪಕ್ಕೆ ಗುರಿಯಾಗಿ ಪುಣ್ಯಕ್ಷಯದಿಂದ ದುರ್ಗತಿಯನ್ನು ಹೊಂದುತ್ತಾರೆಂದು ಹೇಳಿರುವುದಾಗಿ ಸ್ಕಾಂದಪುರಾಣದ ಕಲಿಮಾಹಾತ್ಮ್ಯೆಯಲ್ಲಿ ಭಗವಾನ್ ವೇದವ್ಯಾಸಮಹರ್ಷಿಗಳು ನಿರೂಪಿಸಿರುತ್ತಾರೆ. ಆದುದರಿಂದ ದೃಕ್ಪಂಚಾಂಗದ ತಿಥ್ಯಾದಿಗಳನ್ನನುಸರಿಸಿ ಶ್ರಾದ್ಧಾದಿಗಳನ್ನಾಚರಿಸುವವರು ಸರ್ವವಿಧವಾದ ಅನಿಷ್ಟಗಳಿಗೂ ಗುರಿಯಾಗುವರು.

೧೩ನೇ ಪ್ರಶ್ನೆ:— ಈ ಮುಂಚೆ ದೃಕ್ಪಂಚಾಂಗವನ್ನನುಸರಿಸಿ ಶಾಸ್ತ್ರವಿರುದ್ಧಕಾಲಗಳಲ್ಲಿ ಕರ್ಮಾಚರಣೆಯನ್ನು ಮಾಡಿದವರು ಇನ್ನು ಹೇಗೆ ವರ್ತಿಸಬೇಕು ?

ಉತ್ತರ:— "ಅಕುರ್ವನ್ ವಿಹಿತಂ ಕರ್ಮ ನಿಂದಿತಂ ಚ ಸಮಾಚರನ್ । ಪ್ರಸಕ್ತಶ್ಚೇಂದ್ರಿಯಾರ್ಥೇಷು ಪ್ರಾಯಶ್ಚಿತ್ತೀಯತೇ ನರಃ ॥" ಎಂದು ಮನುವು ಹೇಳಿರುವಂತೆ ಶಾಸ್ತ್ರವಿಹಿತವಾದುದನ್ನು ಬಿಟ್ಟು ವಿಹಿತವಲ್ಲದ್ದನ್ನು ಮಾಡುವವರು ದೋಷಿಗಳಾಗುವರಾದುದರಿಂದ ಕೃಪಾಲುಗಳಾದ ಮಹರ್ಷಿಗಳು ಜನರ ಹಿತಕ್ಕಾಗಿಯೇ ಆಯಾ ದೋಷಗಳಿಗೆಲ್ಲ ಪ್ರತ್ಯೇಕವಾಗಿ ಬೇರೆ ಬೇರೆ ಪ್ರಾಯಶ್ಚಿತ್ತಗಳನ್ನು ವಿಧಿಸಿರುತ್ತಾರೆ. ಆದರೆ ಅವೆಲ್ಲ ಪ್ರಾಯಶ್ಚಿತ್ತಗಳಿಗೂ ಮೂಲವಲ್ಲ— "ಕೃತ್ವಾ ಪಾಪಂ ಹಿ ಸಂತಪ್ಯ ತಸ್ಮಾತ್ಪಾಪಾತ್ಪ್ರ-

ಮುಚ್ಯತೇ । ನೈವಂ ಕುರ್ಯಾಂ ಪುನರಿತಿ ನಿವೃತ್ತ್ಯಾ ಪೂಯತೇ ಹಿ ಸಃ॥" ಎಂಬ ಮನುವಚನದಂತೆ ಕೃತಕರ್ಮಕ್ಕಾಗಿ ಪಶ್ಚಾತ್ತಾಪವನ್ನು ಹೊಂದುವುದೂ, ಮುಂದೆ ಅಂಥ ಪ್ರಮಾದಗಳುಂಟಾಗದಂತೆ ಪ್ರತಿಜ್ಞಾಪೂರ್ವಕವಾಗಿ ಎಚ್ಚರಿಕೆಯಿಂದಿರುವುದೂ ಆವಶ್ಯವಾಗಿರುತ್ತದೆ. ಆದುದರಿಂದ ಈ ವರೆಗೆ ಘಟಿಸಿದ ಕರ್ಮಕಾಲವ್ಯತ್ಯಯಕ್ಕಾಗಿ ಪಶ್ಚಾತ್ತಾಪಪೂರ್ವಕ ಶುದ್ಧರಾಗಿ ಮುಂದೆ ಶಾಸ್ತ್ರಸಿದ್ಧ (ಸಿದ್ಧಾಂತಾನುಸಾರ) ವಾಗಿರುವ ತಿಥ್ಯಾದಿಕಾಲಗಳಲ್ಲಿಯೇ ಕರ್ಮಾಚರಣೆಯನ್ನು ಮಾಡುತ್ತಿರಬೇಕು. ಅದರಿಂದ ಶ್ರೇಯಸ್ಸು ಉಂಟಾಗುವುದು.

---

೧೪ನೇ ಪ್ರಶ್ನೆ:— ಪ್ರತಿಜ್ಞೆಯಲ್ಲಿ (ನಿರಯನ) ಕರ್ಕಟ, ಮಕರಸಂಕ್ರಾಂತಿಗಳಿಂದ ಆರಂಭಿಸತಕ್ಕ ದಕ್ಷಿಣೋತ್ತರಾಯಣಗಳೇ ಕರ್ಮಾನುಷ್ಠಾನಗಳಲ್ಲಿ ಗ್ರಾಹ್ಯವೆಂದು ಹೇಳಿರುವುದರ ಕಾರಣವೇನು ?

ಉತ್ತರ:— ಅಯನದಲ್ಲಿ (ಸಾಯನ – ನಿರಯನವೆಂದು) ಎರಡು ವಿಧವಿರುವುದು. ಭೂಮಧ್ಯ ( ವಿಷುವ ) ರೇಖೆಯಿಂದ ದಕ್ಷಿಣಕ್ಕೂ, ಉತ್ತರಕ್ಕೂ ಸುಮಾರು ೨೪ ಅಂಶಗಳ ದೂರದಲ್ಲಿ ಇರುವ ಅಕ್ಷರೇಖಾವೃತ್ತಗಳಿಗೆ ಸಮಸೂತ್ರದಲ್ಲಿ ಕ್ರಾಂತಿವೃತ್ತದ ಯಾವ ಪ್ರದೇಶವು ಬರುವುದೋ ಅಲ್ಲಿಗೆ ಸೂರ್ಯನು ಬರುವಾಗ ಅಂದರೆ ಈಗಿನ ಪಾಶ್ಚಾತ್ಯಪದ್ಧತಿಯಂತೆ ಜೂನ್ ಮತ್ತು ಡಿಶಂಬರ ತಿಂಗಳಿನ ೨೨ನೇ ತಾರೀಕಿನ ಸುಮಾರಿನಲ್ಲಿ ಭೂಪ್ರದೇಶದ ದೃಙ್ಮಂಡಲಾನುಸಾರವಾಗಿರತಕ್ಕ ಛಾಯಾಪರಿವರ್ತನವೂ, ದಿನಮಾನದ ಪರಮವೃದ್ಧಿ-ಕ್ಷಯಗಳೂ ಸಂಭವಿಸುವುದರಿಂದ ಆ ದಿನಕ್ಕೆ (ಸಾಯನ) ಅಯನದಿನವೆನ್ನುವರು. ಆದರೆ ಕ್ರಾಂತಿವೃತ್ತದಲ್ಲಿ ಸೂರ್ಯನು ಬರತಕ್ಕ ಈ ಪ್ರದೇಶಗಳು ಸ್ಥಿರವಾಗಿರದೆ ಯಾವಾಗಲೂ ಚಲಿಸುತ್ತಲೇ ಇರುವುದರಿಂದ ಇವುಗಳನ್ನು ಗುರುತಿಸತಕ್ಕ ಸ್ಥಿರವಾದ ಯಾವುದೊಂದು ನಕ್ಷತ್ರವಾಗಲೀ, ರಾಶಿವಿಭಾಗವಾಗಲೀ ಏನೊಂದೂ ನಿಯತವಾಗಿ ಇರುವುದಿಲ್ಲ. ಆದುದರಿಂದ ಇದನ್ನು ತಿಳಿದುಕೊಳ್ಳಲಿಕ್ಕೆ ಶಾಸ್ತ್ರಗಳಲ್ಲಿ— "ಪ್ರಾಕ್ಚಕ್ರಂ ಚಲಿತಂ ಹೀನೇ ಛಾಯಾರ್ಕಾತ್ಕರಣಾಗತೇ।" ಇತ್ಯಾದಿ ಕ್ರಮಗಳು ಹೇಳಲ್ಪಟ್ಟಿದ್ದು "ತತ್ಸಂಸ್ಕೃತಾದ್ಗ್ರಹಾತ್ಕ್ರಾಂತಿಛಾಯಾಚರದಲಾದಿಕಂ।" ಎಂಬಂತೆ ಅದರಿಂದ ಭೂಪ್ರದೇಶದ ದೃಙ್ಮಂಡಲವನ್ನೇ ಅವಲಂಬಿಸಿರತಕ್ಕ ಛಾಯಾ, ದಿನಮಾನಾದಿಗಳನ್ನು ನಿಶ್ಚಯಿಸುವ ಕ್ರಮಗಳನ್ನು ಹೇಳಿದೆ. ಹೀಗೆ ನಿರಂತರವಾಗಿ ಚಲಿಸುತ್ತಲೇ ಇದ್ದು ಯಾವಾಗಲೂ ಅನಿಶ್ಚಿತ ( ಅನಿಯಮಿತ ) ವಾಗಿರುವುದರಿಂದ ನಿಶ್ಚಿತವಾದ ಶ್ರೌತ-ಸ್ಮಾರ್ತ ಕರ್ಮಾನುಷ್ಠಾನಗಳಲ್ಲಿ ನಿರ್ಣಾಯಕ (ನಿಯಾಮಕ) ವಾಗಿ ಸ್ವೀಕರಿಸಲಿಕ್ಕೆ ಇದು (ಸಾಯನ ಅಯನವು) ಯೋಗ್ಯವಾಗಿಲ್ಲ.

ಇನ್ನು ಈ ಕ್ರಾಂತಿಮಂಡಲದಲ್ಲಿ ಸ್ಥಿರವಾಗಿ ವಿಭಾಗಿಸಲ್ಪಟ್ಟ ಆಯಾ ವಿಭಾಗಗಳಲ್ಲಿ ಮೇಷಾದಿ ರಾಶಿಗಳೂ, ಅಶ್ವಿನ್ಯಾದಿ ನಕ್ಷತ್ರಗಳೂ ತಮ್ಮ ತಮ್ಮ ಸ್ಥಾನವನ್ನು (ವಿಭಾಗವನ್ನು) ಬಿಡದೆ ಯಾವಾಗಲೂ ಒಂದೇ ಸ್ಥಾನದಲ್ಲಿ ಸ್ಥಿರವಾಗಿರುತ್ತವೆ. ಮತ್ತು ಸೂರ್ಯ-ಚಂದ್ರಾದಿ ಎಲ್ಲ ಗ್ರಹರ ರಾಶಿ-ನಕ್ಷತ್ರಾದಿ ಸ್ಥಿತಿಗಳನ್ನೂ, ಗತಿನಿರ್ಣಯವನ್ನೂ, ಮೇಷ, ಚೈತ್ರಾದಿ ಮಾಸಗಳನ್ನೂ, ಮೇಷಾದಿ ಲಗ್ನಗಳನ್ನೂ, ನಿತ್ಯನಕ್ಷತ್ರಾದಿ ಪಂಚಾಂಗಕಾಲಗಳನ್ನೂ, ಜನ್ಮರಾಶಿ ನಕ್ಷತ್ರಾದಿಗಳನ್ನೂ, ಗ್ರಹಣಾರಿಷ್ಟಾದಿಗಳನ್ನೂ, ಹೀಗೆ ಎಲ್ಲ ತರದ ಶಾಸ್ತ್ರೀಯ ವ್ಯವಹಾರಗಳನ್ನೂ ಈ ಸ್ಥಿರವಾದ ( ನಿರಯನ ) ರಾಶಿವಿಭಾಗವನ್ನನುಸರಿಸಿಯೇ ಶಾಸ್ತ್ರಗಳಲ್ಲಿ ಹೇಳಿದ್ದಾಗಿದೆ. ಈ ಪ್ರಕಾರ ಕ್ರಾಂತಿಮಂಡಲದಲ್ಲಿ ಸ್ವಾಭಾವಿಕವಾಗಿಯೇ ದಕ್ಷಿಣೋತ್ತರ ದಿಕ್ಕುಗಳಲ್ಲಿರತಕ್ಕ ಮಕರ-ಕರ್ಕಟ ಸಂಕ್ರಾಂತಿ ಸ್ಥಾನಗಳು ಸೃಷ್ಟ್ಯಾದಿಯಾಗಿ ಪ್ರಳಯಾಂತದ ವರೆಗೆ ಎಂದಿಗೂ ತಮ್ಮ ಸ್ಥಾನವನ್ನು ಬದಲಾಯಿಸದೆ ಯಾವಾಗಲೂ ಒಂದೇ ಸ್ಥಾನದಲ್ಲಿಯೂ, ಒಂದೇ ದಿಕ್ಕಿನಲ್ಲಿಯೂ ಸ್ಥಿರವಾಗಿರುತ್ತವೆ. ಸನಾತನವಾದ ಶಾಸ್ತ್ರನಿಯತ ಕರ್ಮಾನುಷ್ಠಾನಗಳಲ್ಲಿ ಸನಾತನವೂ, ನಿಯತವೂ ಆಗಿರುವ ಈ ಸ್ಥಿರವಾದ ಕರ್ಕಟ-ಮಕರಸಂಕ್ರಾಂತಿಗಳೇ ಕರ್ಮಕಾಲನಿರ್ಣಯಕ್ಕೆ ಯೋಗ್ಯವಾದವುಗಳೆಂದು ಶಾಸ್ತ್ರಗಳಲ್ಲಿ ಸ್ವೀಕರಿಸಲ್ಪಟ್ಟಿದ್ದು ಅದರಂತೆ ಸ್ಥಿರವಾದ ( ನಿರಯನ ) ಕರ್ಕಟ-ಮಕರಸಂಕ್ರಾಂತಿಸ್ಥಾನಗಳಿಗೆ ಸೂರ್ಯನು ಬರುವಾಗ ಆರಂಭಿಸತಕ್ಕ ದಕ್ಷಿಣೋತ್ತರಾಯಣಗಳೇ ಕರ್ಮಯೋಗ್ಯವಾದವುಗಳೆಂದು ಶಾಸ್ತ್ರಗಳಲ್ಲಿ ನಿರ್ಣಯಿಸಲ್ಪಟ್ಟಿವೆ. ಆದರೂ ಇತ್ತೀಚೆಗೆ ಕೆಲವರು ಅಪೂರ್ವ ದೃಗ್ಯಾದಿಗಳು ಹಿಂದೆ ನಾವು ವಿವರಿಸಿದಂತೆ ದೃಙ್ಮಂಡಲಾನುಸಾರವಾಗಿರತಕ್ಕ ಛಾಯಾಪರಿವರ್ತನಾದಿಗಳನ್ನು ಕಾರಣ ಮಾಡಿಕೊಂಡು ಶಾಸ್ತ್ರ ನಿರ್ಣಯವನ್ನು ಹೇತುವಾದದಿಂದ ನಿರಾಕರಿಸುತ್ತಿರುವರು.

ಈ ವಿಷಯವಾಗಿ ಶಾಸ್ತ್ರಗಳಲ್ಲಿ— " ಪುನರ್ದ್ವಾದಶಧಾತ್ಮಾನಂ ವ್ಯಭಜದ್ರಾಶಿಸಂಜ್ಞಕಂ । ನಕ್ಷತ್ರರೂಪಿಣಂ ಭೂಯಃ ಸಪ್ತವಿಂಶಾತ್ಮಕಂ ವಶೀ । ವಿಭಾಗಂ ಕಲ್ಪಯಾಮಾಸ ಯಥಾ ಸ್ವಂ ವೇದದರ್ಶನಾತ್ ॥" ಅಂದರೆ ಸೃಷ್ಟ್ಯಾದಿಯಲ್ಲಿ ಬ್ರಹ್ಮನು ರಾಶಿಚಕ್ರವನ್ನು ನಿರ್ಮಿಸುವಾಗ ವೇದಗಳಲ್ಲಿ ಹೇಳಿರುವಂತೆ ಮೇಷಾದಿರಾಶಿಗಳನ್ನೂ, ಅಶ್ವಿನ್ಯಾದಿ ನಕ್ಷತ್ರಗಳನ್ನೂ ಆಯಾ ಸ್ಥಾನಗಳಲ್ಲಿ ಸ್ಥಿರವಾಗಿಟ್ಟಿರುವನು. ಮತ್ತು— " ಭಚಕ್ರನಾಭೌ ವಿಷುವದ್ವಿತಯಂ ಸಮಸೂತ್ರಗಂ । ಅಯನದ್ವಿತಯಂ ಚೈವ ಚತಸ್ರಃ ಪ್ರಥಿತಾಸ್ತು ತಾಃ ॥ ತದಂತರೇಷು ಸಂಕ್ರಾಂತಿದ್ವಿತಯಂ ದ್ವಿತಯಂ ಪುನಃ । ನೈರಂತರ್ಯಾತ್ತು ಸಂಕ್ರಾಂತೇರ್ಜ್ಞೇಯಂ ವಿಷ್ಣುಪದೀದ್ವಯಂ ॥" "ತುಲಾದಿ ಷಡಶೀತ್ಯಹ್ನಾಂ ಷಡಶೀತಿಮುಖಂ ಕ್ರಮಾತ್ । ತಚ್ಚತುಷ್ಟಯಮೇವ ಸ್ಯಾತ್ ದ್ವಿಸ್ವಭಾವೇಷು ರಾಶಿಷು ॥ " ಇತ್ಯಾದಿ ... ಈ ರಾಶಿಚಕ್ರದಲ್ಲಿ

ನಾಭಿ ( ಕೇಂದ್ರ ) ಸ್ಥಾನದಿಂದ ಸಮಸೂತ್ರವಾಗಿರತಕ್ಕ ಮೇಷ, ತುಲಾ ಸಂಕ್ರಾಂತಿಗಳೆರಡು ವಿಷುವಸಂಕ್ರಾಂತಿಗಳೆಂದೂ, ಕರ್ಕ, ಮಕರಸಂಕ್ರಾಂತಿಗಳೆರಡು ಅಯನಸಂಕ್ರಾಂತಿಗಳೆಂದೂ, ಈ ವಿಷುವಾಯನ ಸಂಕ್ರಾಂತಿಗಳ ನಡುವೆ ವಿಷ್ಣುಪದಾದಿ ಎರಡೆರಡು ಸಂಕ್ರಾಂತಿಗಳಿರುವವೆಂದೂ, ಆ ಪೈಕಿ ತುಲಾ ಸಂಕ್ರಾಂತಿಯಿಂದ ೮೬—೮೬ ದಿನಗಳ ಷಡಶೀತಿಮುಖವು ದ್ವಿಸ್ವಭಾವರಾಶಿಗಳಲ್ಲಿಯೇ ಸಂಭವಿಸುವುದೆಂದೂ ಹೇಳಿದೆ. ಅಯನಾಂಶರಹಿತ (ಸ್ಥಿರ) ವಾದ ಮೇಷಾದಿ ರಾಶಿಗಳಿಗೇನೇ ಚರ, ಸ್ಥಿರಾದಿ ಸಂಕೇತಗಳಿರುವುದು ಸರ್ವಶಾಸ್ತ್ರ ಪ್ರಸಿದ್ಧವಾಗಿದೆ. ಆದರಂತೆ ದ್ವಿಸ್ವಭಾವಗಳೆಂದರೆ— ಧನು, ಮೀನ, ಮಿಥುನ, ಕನ್ಯಾ ರಾಶಿಗಳಾಗಿರುತ್ತವೆ. ಆದ್ದರಿಂದ ಆ ಸಂಕ್ರಾಂತಿಗಳಿಗೇನೇ ಷಡಶೀತಿಮುಖವೆಂಬ ಹೆಸರು ಶಾಸ್ತ್ರಸಿದ್ಧವೂ ನಿತ್ಯವೂ ಆಗಿರುವುದು. ಅಂದಮೇಲೆ ಉಳಿದ ( ನಿರಯನ ಮೇಷ, ಕರ್ಕಟಾದಿ) ಸಂಕ್ರಾಂತಿಗಳಿಗಾದರೂ ವಿಷುವ, ಅಯನಾದಿ ಸಂಕೇತಗಳು ನಿತ್ಯವಾಗಿರುವುದೆಂದು ಇದರಿಂದಲೇ ಸಿದ್ಧವಾಗುವುದು. ಹೀಗೆ ಸೂರ್ಯಸಿದ್ಧಾಂತದಲ್ಲಿ ಸ್ಪಷ್ಟವಾಗಿ ಹೇಳಿರುವುದಲ್ಲದೆ ಮುಂದೆ ಯಾರಿಗೂ ಸಂಶಯವುಳಿಯದಂತೆ— “ ಭಾನೋರ್ಮಕರಸಂಕ್ರಾಂತೇಃ ಷಣ್ಮಾಸಾ ಉತ್ತರಾಯಣಂ। ಕರ್ಕಾ-ದೇಸ್ತು ತಥೈವ ಸ್ಯಾತ್ । ಷಣ್ಮಾಸಾ ದಕ್ಷಿಣಾಯನಂ ॥ ” ಅಂದರೆ ಮಕರ ಸಂಕ್ರಾಂತಿಯೇ ಆದಿಯಾಗಿ ೬ ಸೌರಮಾಸಗಳು ಉತ್ತರಾಯಣವೆಂದೂ, ಕರ್ಕಟ ಸಂಕ್ರಾಂತಿಯಿಂದ ೬ ಸೌರಮಾಸಗಳು ದಕ್ಷಿಣಾಯನವೆಂದೂ ಹೀಗೆ ಕಂಠೋಕ್ತವಾಗಿ ಕರ್ಕಟ-ಮಕರಸಂಕ್ರಾಂತಿಗಳನ್ನೇ ಹಿಡಿದು ಅಯನಾರಂಭವು ಹೇಳಲ್ಪಟ್ಟಿದೆ. ಇದು ಕಾಲಮಾನಾಧ್ಯಾಯದಲ್ಲಿ ಹೇಳಿದ ವಚನವಾಗಿರುವುದರಿಂದ ಕರ್ಮಾರ್ಹವಾದ ದಕ್ಷಿಣೋತ್ತರಾಯಣಾರಂಭಕಾಲವನ್ನು ಕರ್ಕಟ-ಮಕರಸಂಕ್ರಾಂತಿಗಳಿಂದಲೇ ನಿರ್ಣಯಿಸಬೇಕೆಂಬುದು ನಿರ್ವಿವಾದವಾಗಿ ಸಿದ್ಧವಾಗುತ್ತದೆ.

ಇದಲ್ಲದೆ ವಸಿಷ್ಠಸಂಹಿತೆಯಲ್ಲಿಯೂ ಸಹ ಸಂಕ್ರಾಂತ್ಯಧ್ಯಾಯದಲ್ಲಿ ಮೇಷಾದಿ ೧೨ (ನಿರಯನ) ಸಂಕ್ರಾಂತಿಗಳ ವಾರ, ಕರಣ, ಪೂರ್ವಾಹ್ಣಾದಿ ಕಾಲಫಲಗಳನ್ನೆಲ್ಲ ವಿವರಿಸಿದ ನಂತರ— “ ಸ್ಥಿರರಾಶಿಷು ವಿಷ್ಣುಪದಂ ಷಡ-ಶೀತಿಮುಖಂ ಯದ್ವ್ಯುಭಯಭೇ ಚೈವ । ಮೃಗಕರ್ಕಟಸಂಕ್ರಾಂತೀ ಹ್ಯುದಗಯನಂ ದಕ್ಷಿಣಾಯನಂ ಚೈವ ॥ ಅಜಘಟಸಂಕ್ರಾಂತ್ಯುಭಯಂ ವಿಷುವತ್ಪ್ರಕೀರ್ತಿತಂ ನಿತ್ಯಂ । ದ್ವಾದಶಸಂಕ್ರಾಂತೀನಾಂ ಚತುಷ್ಟಯಂ ತದ್ವಿಶಿಷ್ಟತಮಂ ॥ ” ಅಂದರೆ— ಸ್ಥಿರರಾಶಿಸಂಕ್ರಾಂತಿಗಳು ವಿಷ್ಣುಪದವೆಂದೂ, ಉಭಯರಾಶಿಸಂಕ್ರಾಂತಿಗಳು ಷಡಶೀತಿಮುಖವೆಂದೂ, ಚರರಾಶಿಗಳ ಪೈಕಿ ಮಕರ ರಾಶಿಸಂಕ್ರಾಂತಿಯು ಉತ್ತರಾಯಣ, ಕರ್ಕಟಸಂಕ್ರಾಂತಿಯು ದಕ್ಷಿಣಾಯನ, ಮೇಷ ತುಲಾ ಸಂಕ್ರಾಂತಿಗಳೆರಡು ವಿಷುವತ್ ಎಂಬ ಸಂಕೇತವುಳ್ಳವುಗಳು ಎಂದೂ ಮತ್ತು ಈ ಸಂಕೇತಗಳೆಲ್ಲವೂ ಆಯಾ ಸಂಕ್ರಾಂತಿಗಳಿಗೆ ನಿತ್ಯವಾಗಿರತ

ಕ್ಯವೃಗಳಿಂದೂ, ಹೀಗೆ ೧೨ ಸಂಕ್ರಾಂತಿಗಳ ಪೈಕಿ ಚರರಾಶಿಗಳಲ್ಲಿ ಆಗುವ ಈ ಅಯನ (೨) ವಿಷುವತ್ (೨) ಎಂಬ ೪ ಸಂಕ್ರಾಂತಿಗಳು ವಿಶೇಷ ಪುಣ್ಯತಮವಾಗಿರುವವೆಂದೂ ಸ್ಪಷ್ಟವಾಗಿ ಹೇಳಿದ್ದು, ವೃದ್ಧವಸಿಷ್ಠರು ಹೇಳಿರುವ ಈ ವಚನಗಳಲ್ಲಿ ಸಾಯನ ಸಂಕ್ರಾಂತಿಗಳ ಮತ್ತು ಸಾಯನ ಅಯನಗಳ ಕಲ್ಪನೆಗೂ ಸಹ ಅವಕಾಶವಿಲ್ಲದಿರುವುದರಿಂದ ಕರ್ಮಾಂಗಭೂತವಾದ ಅಯನಾರಂಭವನ್ನು ಕರ್ಕಟ-ಮಕರಸಂಕ್ರಾಂತಿಗಳಿಂದಲೇ ಪರಿಗ್ರಹಿಸಬೇಕೆಂಬುದು ನಿರ್ವಿವಾದವಾಗಿದೆ. ಇದರಂತೆಯೇ ನಾರದ, ಕಶ್ಯಪಾದಿ ಮಹರ್ಷಿಗಳ (ಆರ್ಷ) ಗ್ರಂಥಗಳಲ್ಲಿಯೂ ವರಾಹಮಿಹಿರ, ಭಾಸ್ಕರಾಚಾರ್ಯಾದಿ ಘನಪಂಡಿತರ ನಿಬಂಧಗಳಲ್ಲಿಯೂ, ಕಾಲಮಾಧವ, ವೈದ್ಯನಾಥೀಯ, ನಿರ್ಣಯಸಿಂಧು ಮೊದಲಾದ ಸಮಸ್ತ ಧರ್ಮಶಾಸ್ತ್ರಗ್ರಂಥಗಳಲ್ಲಿಯೂ ಏಕಮುಖವಾಗಿ ನಿರ್ಣಯಿಸಲ್ಪಟ್ಟಿದೆ.* ಮತ್ತು ಈ ವರೆಗೆ ಅನೂಚಾನವಾದ ಶಿಷ್ಟಪರಂಪರೆಯಿಂದ ವೈದಿಕಾಚಾರಬದ್ಧರಾದ ಸರ್ವದೇಶೀಯರೂ ಸರ್ವಮತದವರೂ, ದೇಶಮತಾದಿಭೇದಗಳಿಲ್ಲದೆ ಆಚರಿಸಿ ಬಂದ ಪ್ರಸಿದ್ಧಾಚಾರವೂ ಆಗಿದೆ. ಆದ್ದರಿಂದ ಈ ವಿಷಯದಲ್ಲಿ ಲವಲೇಶವೂ ವಿವಾದಕ್ಕೆ ಕಾರಣವಿಲ್ಲ. ಆದರೂ ಕೆಲವರು ನಾವು ಹಿಂದೆ ಹೇಳಿದಂತೆ ಭೂಪ್ರದೇಶದಲ್ಲಿ ದೃಙ್ಮಂಡಲಾನುಸಾರವಾಗಿ ತೋರತಕ್ಕ (ಸಾಯನ) ಅಯನದಿನವೇ ದಕ್ಷಿಣೋತ್ತರಾಯಣಗಳ ಆರಂಭದಿನವೆಂದೂ, ಕರ್ಮಾನುಷ್ಠಾನಗಳಲ್ಲಿಯೂ ಅದನ್ನೇ ಪರಿಗ್ರಹಿಸಬೇಕೆಂದೂ ವಾದಿಸಹತ್ತಿರುವ ಕಾರಣ ಆ ಸಂಬಂಧವಾಗಿ ಯಾರಿಗೂ ಸಂಶಯವುಂಟಾಗಬಾರದೆಂದು ಪ್ರತಿಜ್ಞೆಯಲ್ಲಿ ಸೂರ್ಯನ (ನಿರಯನ) ಕರ್ಕಟ-ಮಕರ ಸಂಕ್ರಾಂತಿಗಳಿಂದ ಆರಂಭಿಸತಕ್ಕ ದಕ್ಷಿಣೋತ್ತರಾಯಣಗಳೇ ಕರ್ಮಾರ್ಹವೆಂಬುದನ್ನು ಸ್ಪಷ್ಟವಾಗಿ ಹೇಳಿರುವೆವು.



* ಅಂತಹ ಶಾಸ್ತ್ರನಿರ್ಣಯಗಳನ್ನು ಒಟ್ಟಿಗೆ ಸಂಗ್ರಹಿಸಿ ಕೈ. ವಾ. ಶ್ರೀ॥ ಕೆಕ್ಕಾರ ಶಿವಭಟ್ಟರವರು ತಮ್ಮ 'ಆಸ್ತಿಕದಕ್ಷಿಣೋತ್ತರಾಯಣ' ವೆಂಬ ಗ್ರಂಥದಲ್ಲಿಯೂ, ಅವರ ಅನುಜರಾದ ಶ್ರೀ॥ ವೇ॥ ಗಣಪತಿ ರಾಮ ಭಟ್ಟರವರು 'ಅಯನನಿರ್ಣಯಸಂಗ್ರಹ' ವೆಂಬ ನಿರ್ಣಯಪತ್ರಿಕೆಯಲ್ಲಿಯೂ ಪ್ರಕಟಿಸಿ ದೇಶ, ದೇಶಾಂತರದ ವಿದ್ವಜ್ಜನರ ಅವಗಾಹನೆಯ ಬಗ್ಗೆ ಕಳುಹಿಸಿದ್ದು ಈ ಮೊದಲೇ ಅನೇಕ ಕಡೆಗಳಲ್ಲಿ ಪ್ರಚಾರವಾಗಿರುವುದರಿಂದ ಆ ನಿರ್ಣಯ ವಚನಗಳನ್ನೆಲ್ಲ ಪ್ರತ್ಯೇಕವಾಗಿ ಇಲ್ಲಿ ಕೊಟ್ಟಿಲ್ಲ.

## ೨. ದೃಕ್ಪಂಚಾಂಗಖಂಡನೆ.

ನಮ್ಮ ಈ ಭರತಖಂಡದಲ್ಲಿ ಇತ್ತೀಚೆಗೆ ಹುಟ್ಟಿರುವ ನವೀನ ದೃಕ್ಪಂಚಾಂಗದ ಸಮರ್ಥನೆಗಾಗಿ ಆ ಪಕ್ಷದ ಪಂಡಿತರು ಅಲ್ಲಲ್ಲಿ ಲೇಖನ-ಭಾಷಣಾದಿಗಳ ಮೂಲಕ ತಮ್ಮ ಹೇಳಿಕೆಯನ್ನು ಪ್ರಚಾರಪಡಿಸಿರುವರು. ದೃಕ್ಪಕ್ಷದವರ ಅಭಿಮತವನ್ನು ಯುಕ್ತರೀತಿಯಿಂದ ಖಂಡಿಸಬೇಕಾಗಿರುವಲ್ಲಿ ಅವರು ಸ್ವಪಕ್ಷ ಸಾಧನೆಗಾಗಿ ಹೇಳಬಹುದಾದದ್ದನ್ನೆಲ್ಲ ನಾವಾಗಿಯೇ ಕಲ್ಪಿಸಿಕೊಂಡು ಅದನ್ನು ಖಂಡಿಸುವುದಕ್ಕಿಂತ ಸ್ವತಃ ಅವರೇ ಪ್ರಕಟಿಸಿರುವ ವಿಷಯಗಳನ್ನೇ ತೆಗೆದುಕೊಳ್ಳುವುದು ಯುಕ್ತವಾಗಿರುವುದು. ಆದುದರಿಂದ ದೃಕ್ಪಂಚಾಂಗಧ ಖಂಡನೆಗೋಸ್ಕರ ಆ ಪಕ್ಷದ ಪಂಡಿತರ ಹೇಳಿಕೆಗಳನ್ನು ಸಂಗ್ರಹಿಸುವುದು ಆವಶ್ಯಕವಾಗಿದೆ. ಈ ಭಾಗದಲ್ಲಿ ಇತ್ತೀಚೆಗೆ ತಮ್ಮ ಹಿಂದಿನ ಸಿದ್ಧಾಂತಾನುಸಾರಿಪಂಚಾಂಗವನ್ನು ತಯಾರಿಸುತ್ತಿರುವ ಕ್ರಮವನ್ನು ಬಿಟ್ಟು ಶುದ್ಧ ನಿರಯನ-ದೃಕ್ಪಂಚಾಂಗವೆಂಬ ಹೆಸರಿನಿಂದ ತಿಥ್ಯಾದಿಗಳಲ್ಲಿ ೮-೧೦ ಘಟಿಗಳ ವೃದ್ಧಿಕ್ಷಯಗಳೂ, ಕರ್ಕ ಮಕರ ಸಂಕ್ರಾಂತಿಗಳಿಗಿಂತ ೨೩-೨೪ ದಿನಗಳ ಮುಂಚೆಯೇ ಆಯನಾರಂಭವೂ ಆಗುವ ಹೊಸ ಬಗೆಯ ಪಂಚಾಂಗವನ್ನು ತಯಾರಿಸುತ್ತಿರುವ ಬಗ್ಲೋಣ ಶ್ರೀ|| ರಾಮಾ ತಿಮ್ಮಣ್ಣ ಪಂಡಿತರೆಂಬವರು ಸ್ವಪಕ್ಷಸಾಧನೆಗಾಗಿ ಪ್ರಕಟಿಸಿರುವ “ಶಾಸ್ತ್ರಸಿದ್ಧದೃಕ್ಪಂಚಾಂಗಸಮರ್ಥನೆ ಮತ್ತು ಅಯನಸಮರ್ಥನೆ” ಎಂಬ ಹೆಸರಿನ ಗ್ರಂಥದಲ್ಲಿ ನವೀನ ದೃಕ್ಪಂಚಾಂಗವನ್ನು ಶಾಸ್ತ್ರಸಮ್ಮತವೆಂದು ತೋರಿಸಲು ವಿಶೇಷ ಪರಿಶ್ರಮ ವಹಿಸಿದ್ದು ಅದರಲ್ಲಿ ದೃಕ್ಪಕ್ಷದವರ ನಾನಾವಿಧವಾದ ಹೇಳಿಕೆಗಳನ್ನೆಲ್ಲ ವಿಸ್ತಾರವಾಗಿ ವಿವರಿಸಿರುವುದರಿಂದಲೂ, ಮತ್ತು ಈ ಮುಂಚೆಯೇ ಅದು ಜನತೆಯಲ್ಲಿ ಪ್ರಚಾರವಾಗಿರುವುದರಿಂದಲೂ ಸಹ ಅದನ್ನು ಲಕ್ಷ್ಯವಾಗಿಟ್ಟುಕೊಂಡು (ದೃಕ್ಪಕ್ಷವನ್ನು) ಖಂಡಿಸುವಲ್ಲಿ ನವೀನ ದೃಕ್ಪಂಚಾಂಗದ ಖಂಡನೆಯು ಸಂಪೂರ್ಣವೂ, ಸುಗಮವೂ ಆಗುವುದರಿಂದ ಆ ಗ್ರಂಥದಲ್ಲಿ ಹೇಳಿರುವ ವಿಷಯಗಳನ್ನೆಲ್ಲ ಸಾದ್ಯಂತವಾಗಿ ಕ್ರಮಶಃ ಇಲ್ಲಿ ಖಂಡಿಸುವೆವು. ಇದರಿಂದ ನವೀನದೃಕ್ಪಂಚಾಂಗದ ಅಶಾಸ್ತ್ರೀಯತೆಯೂ, ನಿರರ್ಥಕತೆಯೂ ವಾಚಕರಿಗೆ ಸುವೇದ್ಯವಾಗಬಹುದೆಂದು ನಂಬಿರುವೆವು.

### “ದೃಕ್ಪಂಚಾಂಗಸಮರ್ಥನೆ”ಯ ಖಂಡನೆ.

ಇವರ ಆ ಪುಸ್ತಕದ ಮೊದಲನೆಯ ಪುಟದ ಆದಿಯಲ್ಲಿ ಜ್ಯೋತಿಃಶಾಸ್ತ್ರದ ಸ್ವರೂಪ, ಪ್ರಗತಿ ಎಂಬಲ್ಲಿ ಕಾಣಿಸಿರುವ ‘ಅಪ್ರತ್ಯಕ್ಷಾಣಿ ಶಾಸ್ತ್ರಾಣಿ’ ಈ ಶ್ಲೋಕಕ್ಕೆ ಇತರ ಶಾಸ್ತ್ರಗಳು ವ್ಯರ್ಥವೆಂತಾಗಲಿ, ಜ್ಯೋತಿಃಶಾಸ್ತ್ರವು ಪ್ರತ್ಯಕ್ಷದಿಂದಲೇ ಸಿದ್ಧ[illegible] ಜ್ಯೋತಿಃಶಾಸ್ತ್ರದ

ಪ್ರಶಂಸೆಯಷ್ಟೇ ಅದರ ತಾತ್ಪರ್ಯವಿರುವುದೆಂದು ಹಿಂದೆ ೬ನೆಯ ಪ್ರಶ್ನೆಯ ಉತ್ತರದಲ್ಲಿಯೇ ಸಕಾರಣವಾಗಿ ವಿವರಿಸಿದೆ. ಇಂಥಾ ಪ್ರಶಂಸಾವಾಕ್ಯಗಳಿಂದ ಯಾವುದೂ ಸಮರ್ಥಿತವಾಗುವುದಿಲ್ಲ.

ಪುಟ ೨-೩ರಲ್ಲಿ "ಬ್ರಹ್ಮೋಕ್ತಂ ಗ್ರಹಗಣಿತಂ" ಮುಂತಾದ ಬೃಹ್ಮಗುಪ್ತಾದಿ ವಚನಗಳನ್ನು ಮುಂದಿಟ್ಟು ಅವುಗಳ ಮೇಲಿಂದ ಆ ಗ್ರಂಥಕರ್ತರೆಲ್ಲ ದೃಕ್ಪಂಚಾಂಗ ಸಾಧನೆಗಾಗಿಯೇ (ಯಂತ್ರ - ವೇಧಾದಿಗಳಿಂದ ಪರೀಕ್ಷಿಸಿ) ಆಯಾ ಕಾಲದ ದೃಕ್ಸಾಮ್ಯವನ್ನು ಪಡೆದು ಕರಣಗ್ರಂಥಗಳನ್ನು ರಚಿಸಿದರೆಂದು ಸಿದ್ಧಮಾಡಲು ಪ್ರಯತ್ನಿಸಿರುವರು. ಲಘುಮಾನಸಾದಿ ಗಣಕಾನಂದದ ವರೆಗಿನ ಸರ್ವಗ್ರಂಥಗಳೂ ದೃಕ್ಸಾಮ್ಯಕ್ಕಾಗಿಯೇ ಹುಟ್ಟಿದವೆಂದು ಅವರು ಹೇಳುತ್ತಾರೆ. ಇದು ಮರೆ-ಮೋಸದ ಮಾತು. ನಿಜವಾಗಿ ನೋಡಿದರೆ ಆ ಪೂರ್ವ ಮಹನೀಯರು ಗ್ರಹಣ-ಗ್ರಹಾಸ್ತೋದಯಾದಿ ದೃಷ್ಟವಿಷಯಗಳಲ್ಲಿ ದೃಕ್ಸಾಮ್ಯವನ್ನು ಸಾಧಿಸಲಿಕ್ಕಾಗಿಯೂ, ಗಣಿತ-ಗೋಲಗಳಲ್ಲಿ ಹೆಚ್ಚಿನ ಕೌಶಲ್ಯವನ್ನು ತೋರಿಸಿಕೊಡಲಿಕ್ಕಾಗಿಯೂ, ಸುಲಭರೀತಿಯಿಂದ ಪಂಚಾಂಗಗಣಿತವನ್ನು ಸಾಧಿಸಲಿಕ್ಕಾಗಿಯೂ ಆಯಾ ಗ್ರಂಥಗಳನ್ನು ರಚಿಸಿದ್ದರಲ್ಲದೆ ಕರ್ಮಾರ್ಹವಾದ ಪಂಚಾಂಗವನ್ನು ಶಾಸ್ತ್ರವಿರೋಧವಾಗಿ ಸಾಧಿಸಬೇಕೆನ್ನುವದಕ್ಕಲ್ಲ. ಈ ವಿಷಯವು ಈ ಮುಂದಿನ ಶಾಸ್ತ್ರವಚನಗಳಿಂದ ಸಿದ್ಧಾಂತವಾಗುತ್ತದೆ. ವಸಿಷ್ಠಸಿದ್ಧಾಂತದಲ್ಲಿ-- "ಯಂತ್ರವೇಧಾದಿನಾ ಜ್ಞಾತಂ ಯದ್ಬೀಜಂ ಗಣಕೈಸ್ತತಃ। ಗ್ರಹಣಾದಿ ಪರೀಕ್ಷೇತ ನ ತಿಥ್ಯಾದಿ ಕದಾಚನ॥" ಎಂಬುದಾಗಿಯೂ, ಲೋಮಶ ಸಿದ್ಧಾಂತದಲ್ಲಿ— "ಪ್ರತ್ಯಹಂ ತಿಥಿನಕ್ಷತ್ರಯೋಗಾದ್ಯಾನಯನೇ ವಿಧುಃ। ನ ಬೀಜಸಂಸ್ಕೃತೋ ಗ್ರಾಹ್ಯೋ ಗ್ರಹಣಾದೌ ಸಬೀಜಕಃ॥" ಎಂತಲೂ, "ಶೃಂಗೋನ್ನತಿ ಯುತಿಚ್ಛಾಯಾಗ್ರಹಾಸ್ತೋದಯಸಾಧನೇ। ಬೀಜೇನ ಸಂಸ್ಕೃತಾಃ ಖೇಟಾಸ್ತದ್ಧೀನಾಸ್ತ್ವನ್ಯಕರ್ಮಸು॥" ಎಂದು ಗಾರ್ಗ್ಯ ಮಹರ್ಷಿಗಳೂ, ಶಾಕಲ್ಯಸಂಹಿತೆಯಲ್ಲಿ— "ತಿಥ್ಯಾದಿಸಾಧನೇ ಕ್ವಾಪಿ ನಾರ್ಕೇಂದ್ವೋರ್ಬೀಜಯೋಗಿತಾ।" ಎಂತಲೂ ಸ್ಪಷ್ಟವಾಗಿ ಹೇಳುವುದಲ್ಲದೆ, ಲಲ್ಲಾಚಾರ್ಯರು— "ಶೃಂಗೋನ್ನತೌ ಗ್ರಹಯುತೌ ಗ್ರಹಣೇ ತಥಾಸ್ತೇ ಛಾಯಾನಿರೀಕ್ಷಣವಿಧಾವುದಯೇ ಪ್ರದೇಯಂ। ಬೀಜಂ ಫಲಂ ತಿಥಿಭಯೋಗವಿಧೌ ತ್ವದೇಯಂ ಚಂದ್ರೇ ಪ್ರದೇಯಮಖಿಲಂ ಕ್ಷಿತಿಜಾದಿಕೇಷು॥" ಎಂತಲೂ ಖಚರದರ್ಪಣದಲ್ಲಿ— "ಗ್ರಹಣಗ್ರಹೋದಯಾಸ್ತಶೃಂಗೋನ್ನತಿಖಚರಯೋಗಕಾಲೇಷು। ದೃಕ್ಸಿದ್ಧೇಂದುಃ ಸಾಧ್ಯಃ ಸ್ಯಾದೇವಂ ನೇತರಕ್ರಿಯಾಸು ಬುಧೈಃ॥" ಎಂಬುದಾಗಿಯೂ, ಜ್ಯೋತಿಷಸಿದ್ಧಾಂತಸಂಗ್ರಹದಲ್ಲಿ—"ಶೀತಾಂಶುಶ್ಚರಬೀಜೇನ ಸಂಸ್ಕೃತೋ ದೃಕ್ಸಮೋ ಭವೇತ್। ದೃಕ್ಸಿದ್ಧೇನ ಸದಾ ನೇಂದುಂ ತಿಥ್ಯಾದ್ಯರ್ಥಂ ನ್ಯಸೇದ್ ಯುಜ್ಯತೇ॥"

ಎಂಬುದಾಗಿಯೂ ಈ ಪ್ರಕಾರ ಇನ್ನೂ ಅನೇಕ ಮಹರ್ಷಿಗಳ, ಪಂಡಿತೋತ್ತಮರ, ಸಿದ್ಧಾಂತ, ತಂತ್ರ, ಕರಣಗ್ರಂಥಗಳಲ್ಲೆಲ್ಲ ಏಕಾಭಿಪ್ರಾಯದಿಂದ ಪ್ರತ್ಯಕ್ಷತಾ ಸಿದ್ಧಿಗಾಗಿ ಮಾಡತಕ್ಕ ( ಬೀಜಾದಿ ) ಸಂಸ್ಕಾರಗಳು ಶಾಸ್ತ್ರಸಿದ್ಧವಾಗಿರಬೇಕಾದ ತಿಥ್ಯಾದಿಗಳಿಗೆ ಬೇಡವೆಂದೂ, ಗ್ರಹಣಾದಿಗಳಲ್ಲಿ ಮಾತ್ರ ಅವುಗಳ ಪ್ರಯೋಜನ ವೆಂದೂ ಯಾರಿಗೂ ಸಂಶಯವುಳಿಯದಂತೆ (ವಿಷಯಭೇದದಿಂದ ವ್ಯವಸ್ಥೆಯನ್ನು ಸ್ಪಷ್ಟಪಡಿಸಿ) ಹೇಳಿರುವರು. ಆದುದರಿಂದ ಇವರು ಹೇಳಿದ ಗ್ರಂಥಕರ್ತರಾದರೂ ಇದೇ ದೃಷ್ಟಿಯಿಂದಲೇ ತಮ್ಮ ಗ್ರಂಥಗಳನ್ನು ರಚಿಸಿದ್ದಲ್ಲದೆ ದೃಕ್ಪಂಚಾಂಗ ಸಮರ್ಥನೆಗಾಗಿ ಅಲ್ಲವೆಂದು ವಿವೇಕಿಗಳಿಗೆಲ್ಲ ತಿಳಿಯುವಂತಿದೆ ಹಾಗಲ್ಲವೆನ್ನುವು ದಾದರೆ ಅವರೆಲ್ಲ ಅವಿವೇಕಿಗಳೆಂದು ಇವರು ಕಲ್ಪಿಸಿದಂತಾದೀತು. ಇವರು ಕಾಣಿಸಿದ ಬ್ರಹ್ಮಗುಪ್ತಸಿದ್ಧಾಂತವಂತೂ ಬ್ರಹ್ಮನು ಉಪದೇಶಿಸಿರುವ ವಿಸ್ತಾರ ವಾದ ಬ್ರಹ್ಮಸಿದ್ಧಾಂತವನ್ನೇ ಸಂಕ್ಷೇಪಿಸಿ ಹೇಳಿದ್ದೆಂದು— “ ಬ್ರಹ್ಮೋಕ್ತಂ ಗ್ರಹಗಣಿತಂ, ಸಂಕ್ಷಿಪ್ತೀಕರಣಾಯ ಜಿಷ್ಣುತನಯಬ್ರಹ್ಮಗುಪ್ತೇನ ” ಇತ್ಯಾದಿ ವಚನಗಳಿಂದಲೇ ಸ್ಪಷ್ಟವಾಗುತ್ತದೆ. ಮತ್ತು ಇವರು ತಿಥ್ಯಾದಿಗಳಲ್ಲಿ ಬೀಜ ಸಂಸ್ಕಾರಬೇಕೆನ್ನುವ ತಮ್ಮ ವಾದಕ್ಕೆ ಮೂಲಪುರುಷರೆಂದು ಆದರದಿಂದ ಎತ್ತಿ ಹೇಳುವ ಭಾಸ್ಕರಾಚಾರ್ಯರೇ ತಮ್ಮ ಸುಪ್ರಸಿದ್ಧ ‘ ಸಿದ್ಧಾಂತಶಿರೋಮಣಿ ’ ಎಂಬ ಗ್ರಂಥದಲ್ಲಿ “ ನಾಯಮರ್ಥಃ ಪುರುಷಸಾಧ್ಯಃ ಅತಏವ ಪ್ರಾಜ್ಞ- ಗಣಕಾಃ...... ಆಗಮಪ್ರಾಗಮಮಂಗೀಕೃತ್ಯ ಗಣಿತಗೋಲಯೋರ್ನಿರತಿ- ಶಯಂ ಕೌಶಲಂ ಪ್ರದರ್ಶಯಿತುಂ ಅನ್ಯಾನ್ ಗ್ರಂಥಾನ್ ರಚಯಂತಿ| ” ಅಂದರೆ— ಅತಿಪ್ರಾಜ್ಞಗಣಕರೇ ಆದರೂ ಶಾಸ್ತ್ರವನ್ನು ರಚಿಸುವುದು ಪುರುಷ ಮಾತ್ರರಿಗೆ ಶಕ್ಯವಲ್ಲವಾದುದರಿಂದ ಹಿಂದಿನ ಶಾಸ್ತ್ರವನ್ನೇ ಪ್ರಮಾಣೀಕರಿಸಿ ಕೊಂಡು ಗಣಿತ-ಗೋಲಗಳಲ್ಲಿ ಹೆಚ್ಚಿನ ಕೌಶಲ್ಯವನ್ನು ತೋರಿಸಲಿಕ್ಕಾಗಿ ಪಂಡಿತೋತ್ತಮರು ಬೇರೆ ಬೇರೆ ಹೊಸ ಗ್ರಂಥಗಳನ್ನು ರಚಿಸುತ್ತಿರುವರೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಬ್ರಹ್ಮಗುಪ್ತ, ಭಾಸ್ಕರಾಚಾರ್ಯ, ಗಣೇಶ ದೈವಜ್ಞರೇ ಮೊದಲಾದ ಆಯಾ ಕಾಲದ ಪಂಡಿತೋತ್ತಮರು ನಾವು ಮೇಲೆ ಹೇಳಿರುವಂತೆ ದೃಕ್ಪಂಚಾಂಗ ಸಾಧನೆಗಾಗಿ ಗ್ರಂಥಗಳನ್ನು ರಚಿಸಿದ್ದಲ್ಲವೆಂಬುದು ಯಾರಿಗೂ ತಿಳಿಯುವಂತಿದೆ. ಇದೂ ಅಲ್ಲದೆ ಇವರು ಉದಾಹರಿಸಿರುವ ಬ್ರಹ್ಮ ಗುಪ್ತರೇ ಮೊದಲಾದವರ ಗ್ರಂಥಗಳನ್ನನುಸರಿಸಿ ಸಾಧಿಸುವ ಪಂಚಾಂಗಗಳೆಲ್ಲ ತಿಥ್ಯಾದಿಗಳ ವೃದ್ಧಿ-ಕ್ಷಯಾದಿಗಳಲ್ಲಿ ಸಿದ್ಧಾಂತಾನುಸಾರವಾಗಿಯೇ ಬರುತ್ತಿದ್ದು, ಇವರ ನವೀನದೃಕ್ಪಂಚಾಂಗಕ್ಕೆ ಯಾವ ರೀತಿಯಿಂದಲೂ ಹೊಂದುವುದಿಲ್ಲವೆಂಬು ದನ್ನು ಸ್ವತಃ ಇವರೇ ಆದರೂ ಒಪ್ಪಿಕೊಳ್ಳದೆ ನಿವೃತ್ತಿಯಿಲ್ಲ. ಅಂದಮೇಲೆ ಬ್ರಹ್ಮಗುಪ್ತಾದಿ ಪಂಡಿತರೆಲ್ಲರೂ ಇವರ ನವೀನದೃಕ್ಪಂಚಾಂಗದ ಸಮರ್ಥಕರೆಂದು ಹೇಳುವುದು ಕೇವಲ ವಿಸಂಗತವಲ್ಲವೇ? ಸುಲಭವಾಗಿ (ಎಲ್ಲರಿಗೂ) ತಿಳಿಯ ಬಹುದಾದ ಈ ಯಾವ ವಿಷಯಗಳನ್ನೂ ಒಪ್ಪಿಕೊಳ್ಳದೆ ಭಾಸ್ಕರಾಚಾರ್ಯ

(ಮೊದಲಾದವ)ರು ದೃಕ್ಪಂಚಾಂಗದ ಪ್ರವರ್ತಕರೇ ಆಗಿರುವರೆಂದೂ, ಕಲ್ಪಿಸಿಕೊಂಡಂತೆ, ಅವರ ಗ್ರಂಥವು ತಮಗೆ ಪ್ರಮಾಣವೆಂದೂ ಆಗ್ರಹಪಡುವುದಾದರೆ "ತಥೈವ ಲೌಕಿಕಂ ವಾಕ್ಯಂ ಸ್ಮೃತಿಬಾಧೇ ಪರಿತ್ಯಜೇತ್|" ಎಂಬ ಶಾಸ್ತ್ರವಚನದಂತೆ ಶಾಸ್ತ್ರವಿರುದ್ಧವಾದ ಲೌಕಿಕೋಕ್ತಿಯು ಪರಿಗ್ರಹಿಸತಕ್ಕದ್ದಲ್ಲವಾದುದರಿಂದ ಅವೆಲ್ಲ ಶಾಸ್ತ್ರತಃ ಅಪ್ರಮಾಣಗಳೆಂದೇ ಇವರು ಕಲ್ಪಿಸಿದಂತಾಗುವುದಿಲ್ಲವೇ? ಈ ಮೊದಲಾದ ಕಾರಣಗಳಿಂದ ಸಿದ್ಧಾಂತವಾಗುವುದೇನಂದರೆ— "ಕಾಲಭೇದದಿಂದ ಗ್ರಂಥಗಳ ಸಂಸ್ಕಾರವು ಕರ್ಮಾಂಗ ತಿಥ್ಯಾದಿಗಳಲ್ಲಿ ಅಗತ್ಯವಿಲ್ಲ; ಅಷ್ಟೇ ಅಲ್ಲ, ಅದು ಯುಕ್ತವೂ ಅಲ್ಲ."

ಇನ್ನು ಗ್ರಹಲಾಘವ ಮುಂತಾದ ಗಣಿತಗ್ರಂಥಗಳು ಆರ್ಷಶಾಸ್ತ್ರವಲ್ಲದಿದ್ದರೂ ಧರ್ಮ-ಕರ್ಮಗಳಲ್ಲಿ ಸ್ವೀಕರಿಸಲ್ಪಡಲಿಲ್ಲವೋ? ಎಂದರೆ ನಾವು ಹಿಂದೆ ಹೇಳಿದಂತೆ ಅದರಿಂದ ಸಿದ್ಧವಾದ ತಿಥ್ಯಾದಿಗಳು ಬಾಣವೃದ್ಧಿ-ರಸಕ್ಷಯಲಕ್ಷಣಾದಿಗಳಿಂದ ಸೂರ್ಯಸಿದ್ಧಾಂತಕ್ಕೆ ವಿರೋಧವಾಗದೆಯೂ, ಧರ್ಮಶಾಸ್ತ್ರಾದಿಗಳಿಗೆ ಬಾಧಿಸದೆಯೂ ಇರುವುದರಿಂದ ಅದರಲ್ಲಿ ಕಿಂಚಿದ್ವ್ಯತ್ಯಾಸವಿರಬಹುದಾಗಿದ್ದರೂ— "ಅಲ್ಪಾಂತರಂ ನ ದೋಷಾಯ" ಎಂಬ ನ್ಯಾಯದಿಂದ ಅವುಗಳನ್ನು ಸ್ವೀಕರಿಸಿದ್ದೆಂದು ತಿಳಿಯಬಹುದಾಗಿದೆ. ಆ ಕರಣಗ್ರಂಥಕಾರರಾದರೂ ಈ ವಿಚಾರವನ್ನೇ ಮನಸ್ಸಿನಲ್ಲಿಟ್ಟುಕೊಂಡು "ಸರ್ವಧರ್ಮನಯಸತ್ಕ್ರಿಯಾರ್ಹಾದಿಕಂ ತ್ವಾದಿಶೇತ್|" ಇತ್ಯಾದಿಯಾಗಿ ಹೇಳಿರಬಹುದೆಂದು ಎನ್ನಲಿಕ್ಕೆ ಅವಕಾಶವಿದೆ. ಆದರೆ ಈಗಿನ ನವೀನಪದ್ಧತಿಯ ದೃಕ್ಪಂಚಾಂಗಗಳು ಶಾಸ್ತ್ರಸಿದ್ಧ ತಿಥ್ಯಾದಿಗಳ ವೃದ್ಧಿ-ಕ್ಷಯಲಕ್ಷಣವನ್ನು ಸಹ ಬಿಟ್ಟು ಧರ್ಮಶಾಸ್ತ್ರಗಳಿಗೂ ವಿಸಂಗತವಾಗಿ ೮-೧೦ ವೃದ್ಧಿ-ಕ್ಷಯುಳ್ಳ ತಿಥ್ಯಾದಿಗಳನ್ನು ಸಿದ್ಧಪಡಿಸುತ್ತಿರುವುದರಿಂದ ಇದು ಶಾಸ್ತ್ರಕ್ಕೂ ಮತ್ತು ಈ ವರೆಗೆ ಹವ್ಯ-ಕವ್ಯಾದಿಗಳಲ್ಲಿ ಶಿಷ್ಟಪರಂಪರೆಯಿಂದ ಸ್ವೀಕರಿಸುತ್ತ ಬಂದಿರುವ ಸಿದ್ಧಾಂತಾನುಸಾರಿ ಪಂಚಾಂಗಗಳಿಗೆಲ್ಲಕ್ಕೂ ಅತ್ಯಂತ ವಿರುದ್ಧವಾಗಿದ್ದು ಸರ್ವಥಾ ತ್ಯಾಜ್ಯವಾಗಿರುವುದು.

[ ಪುಟ ೩-೪. ] ಪಂಚಾಂಗವಿವರಣೆಯಲ್ಲಿ *ಭಾಸ್ಕರೀಯ ಬೀಜೋಪನಯವೆಂದು ಹೇಳುವ ಗ್ರಂಥದ ವಚನವನ್ನುದಾಹರಿಸಿ ಭೂಮಧ್ಯದೃಕ್ತುಲ್ಯ ತಿಥಿಯಿಂದಲೇ ಶ್ರಾದ್ಧಾದಿಪೈತೃಕಕರ್ಮ ಮಾಡಬೇಕೆಂದು ಹೇಳಿ ಅರ್ಧಾವಗುಂಠನನ್ಯಾಯದಿಂದ ಶ್ರೀನಿವಾಸೀಯ ತಿಥಿನಿರ್ಣಯಕಾರಿಕೆಯ ಶ್ಲೋಕವನ್ನು ಕಾಣಿಸಿದ್ದಾರೆ. ಆದರೆ ಅದೇ ಕಾರಿಕೆಯಲ್ಲಿ— "ಅತಃ ಪೈತೃಕಕರ್ಮಾದೌ ತತ್ಕಾಲಚರಬೀಜಕೈಃ|ಬಾಣವೃದ್ಧ್ಯಾ ರಸಕ್ಷೇಣಾ ಗ್ರಾಹ್ಯಾನ್ಯಾ ತಿಥಿಃ ಕ್ವಚಿತ್||"

* ಇವರು ಆಧರಿಸುವ ಈ ಗ್ರಂಥವು ಪ್ರಾಮಾಣಿಕವಾದುದಲ್ಲ. ಇದನ್ನು ಭಾಸ್ಕರೀಯ ಕೃತಿಯೆಂದು ನಂಬಲಿಕ್ಕೂ ಶಕ್ಯವಿಲ್ಲವೆಂಬುದನ್ನು ಇದೇ ಭಾಗದಲ್ಲಿ ಮುಂದೆ ಸಕಾರಣವಾಗಿ ತೋರಿಸಿದೆ.

ಎಂಬ ಶ್ಲೋಕವಿದ್ದು ಅಥಲ್ಲಿ ಬೀಜಸಂಸ್ಕೃತವೇ ಆದರೂ ಬಾಣವೃದ್ಧಿ-ರಸಕ್ಷಯ ಲಕ್ಷಣವಿರುವ ತಿಥಿಯೇ ಶ್ರಾದ್ಧಾದಿಕರ್ಮಾನುಷ್ಠಾನಗಳಲ್ಲಿ ಗ್ರಾಹ್ಯವೆಂದೂ, ಬೇರೆ ವಿಧದ ತಿಥಿಯು ಯಾವ ಕರ್ಮದಲ್ಲಿಯೂ ಗ್ರಾಹ್ಯವಲ್ಲವೆಂದೂ ಅದೇ ಶ್ರೀನಿವಾಸರೇ ಸ್ಪಷ್ಟವಾಗಿ ಹೇಳಿರುವರು. ಹೀಗಿರಲು ಈ ಅಭಿಪ್ರಾಯವನ್ನು ಮುಚ್ಚಿಡಲಿಕ್ಕೆ ಸಾಹಸಪಡುವ ಪಂಡಿತರು ವಾಚಕರಿಗೆ ಸತ್ಯವನ್ನು ಮರೆಯಿಸಿ ತಪ್ಪುಹಾದಿಗೆಳೆಯಲು ಪ್ರಯತ್ನಿಸಿರುವರೆಂದು ಸಿದ್ಧವಾಗುವುದಿಲ್ಲವೇ ? ಬಟ್ಟೆಸ ಮೇಲೆ ಶ್ರಾದ್ಧಾದಿಕರ್ಮಗಳಿಗೆ ಬೇಕಾಗುವ ಕಾಲಗಳು ಬರಿಯ ದೃಕ್ಕನ್ನು (ಪ್ರತ್ಯಕ್ಷವನ್ನು) ಸರ್ವಥಾ ಆಶ್ರಯಿಸುವದಿಲ್ಲವೆಂಬುದು ಪಂಡಿತರು ಕಾಣಿಸಿದ ಆಧಾರಗ್ರಂಥಗಳಿಂದಲೇ ಸಿದ್ಧವಾಗುವುದು.

[ಪುಟ ೪-೮] ಈ ಮಹಾಶಯರು ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳೆಲ್ಲ ಪ್ರತ್ಯಕ್ಷವೆಂದು ಸಾಧಿಸಲು ಯತ್ನಿಸಿ ಆ ಬಗ್ಗೆ ಕಾಲಮಾಧವ, ಸೂರ್ಯಸಿದ್ಧಾಂತ, ಸಿದ್ಧಾಂತಶಿರೋಮಣಿ ಮುಂತಾದವುಗಳ ವಚನಗಳಿಗೆಲ್ಲ ಅಪ್ರಾಸಂಗಿಕವಾದ ಅರ್ಥವನ್ನು ಕಲ್ಪಿಸಿ ತಿಥ್ಯಾದಿಗಳು ಬರಿಗಣ್ಣಿನಿಂದ ನೋಡಲಿಕ್ಕೆ ಬರುವವೆಂದು ಹೇಳಿದ್ದಾರೆ.

## ತಿಥಿ.

ಆದರೆ ತಿಥಿಯ ಪ್ರತ್ಯಕ್ಷತೆ-ಅಪ್ರತ್ಯಕ್ಷತೆಗಳ ಕುರಿತು ವಿವೇಚಿಸುವ ಮೊದಲು ಶಾಸ್ತ್ರಪ್ರಕಾರ ತಿಥಿಯ ಸ್ವರೂಪವನ್ನು ಅಂದರೆ ಅದು ಕಾಲಾತ್ಮಕವೋ? (ಚಂದ್ರ) ಕಲಾತ್ಮಕವೋ ? ಅಥವಾ (ಸೂರ್ಯ - ಚಂದ್ರಾಂತರ ರೂಪ) ಗೋಲಾತ್ಮಕವೋ ? ಏನೆಂಬುದನ್ನು ತಿಳಿದುಕೊಳ್ಳಬೇಕಾಗುತ್ತದೆ. (ಈ ಪೈಕಿ ತಿಥಿಗೆ ಯಾವ ಸ್ವರೂಪವನ್ನು ಇವರು ಕಲ್ಪಿಸಿದರೂ ಅದರ ಪ್ರತ್ಯಕ್ಷತೆಯು ಸಿದ್ಧವಾಗುವುದಿಲ್ಲವೆಂಬುದನ್ನು ಮುಂದೆ ವಿವರಿಸಿದೆ.) ಇದನ್ನೇನೂ ವಿವೇಚಿಸದೆ, ಪೂರ್ವಾಪರಸಂಬಂಧವಿಲ್ಲದ ಕೆಲವು ವಚನಗಳನ್ನು ಕಾಣಿಸಿದ ಮಾತ್ರದಿಂದ ತಿಥಿಯು ಪ್ರತ್ಯಕ್ಷವೆಂತಾಗುವುದಿಲ್ಲ. ಹೀಗೆ ವಿಸಂಗತವಾಗಿಯೂ, ಪರಸ್ಪರ ವಿರುದ್ಧವಾಗಿಯೂ ಇವರು ಬರೆದಿರುವುದನ್ನು ವಾಚಕರ ಪ್ರತೀತಿಗಾಗಿ ಇಲ್ಲಿ ಸ್ವಲ್ಪದರಲ್ಲಿ ತೋರಿಸಿಕೊಡುವೆವು.

[ಪು. ೫. ಪಂ. ೧]ರಲ್ಲಿ (೧) ಚಂದ್ರನ ಒಂದೊಂದು ಕಲೆಯ ಕಾಲಾವಧಿ (ಘಟಿಕಾದಿಗಳ)ಗೆ ಒಂದೊಂದು ತಿಥಿಯಾಗುತ್ತದೆ. ಎಂಬ ಮಾತಿನಿಂದ ಕಲೆಯ ಪೂರ್ತಿಗೆ ಬೇಕಾಗುವ ಕಾಲಾವಧಿಯೇ (ಘಟಿಕಾದಿಗಳೇ) ತಿಥಿಯೆಂದೂ, ಕಲೆಯೇ ತಿಥಿಯಲ್ಲವೆಂದೂ ಅಭಿಪ್ರಾಯಪಟ್ಟಂತಿರುವುದು. ಇದರಿಂದ ತಿಥಿಯು ಕಾಲಾತ್ಮಕವೆಂದು ಒಪ್ಪಿದಂತಾಗಿದೆ. (೨) ಆದೇ ಪುಟದ ೩-೪ನೆಯ ಪಂಕ್ತಿಗಳಲ್ಲಿ ಸೂರ್ಯನಿಂದ ಚಂದ್ರನು ೧೨ ಅಂಶ ಸರಿದಾಗ ಹೊರಬೀಳುವ ಚಂದ್ರನ ೧ ಕಲೆ

ಯು ಪೂರ್ತಿಯಾಗಿ ಆದು ಒಂದು ತಿಥಿಯೆನಿಸಿಕೊಳ್ಳುತ್ತದೆ. ಎಂದೂ ೧೦-೧೧ ಪಂಕ್ತಿಗಳಲ್ಲಿ ''ಕಲೆಗಳ ವೃದ್ಧಿಕ್ಷಯದಿಂದ ಚಂದ್ರನಿಗುಂಟಾಗುವ ತಿಥ್ಯಾತ್ಮಕವಾದ ಭಿನ್ನ ಭಿನ್ನ ರೂಪಗಳು ಕಣ್ಣಿನಿಂದ ನೋಡಲಿಕ್ಕೆ ಬರುತ್ತವೆ." ಎಂದೂ ಬರೆದಿರುವಲ್ಲಿ ಚಂದ್ರನ ಕಲೆಗಳೇ ತಿಥಿಗಳೆಂದು ಗ್ರಹಿಸಲ್ಪಟ್ಟಿದ್ದು; ಇದರಿಂದ ತಿಥಿಯು ಚಂದ್ರಕಲಾತ್ಮಕವೆಂದೂ, ಹಿಂದೆ ಬರೆದಂತೆ ಕಾಲಾತ್ಮಕವಲ್ಲವೆಂದೂ ಸಾಧಿಸಿದಂತಾಗಿದೆ. (೩) ಮತ್ತು [ ಪುಟ ೬. ಪಂ. ೪-೯ ] ರಲ್ಲಿ ''ಜಾಣಾಕ್ಷರು ಪಂಚಾಂಗವನ್ನು ಸಹ ನೋಡದೆ ಬರಿಗಣ್ಣಿನಿಂದ ಆಕಾಶದಲ್ಲಿರುವ ಚಂದ್ರನನ್ನು ನೋಡಿ ತಿಥಿಜ್ಞಾನಮಾಡಿಕೊಳ್ಳುವರು; ಹಾಗೂ ಸೂರ್ಯಾಸ್ತಮಯಕ್ಕೆ ಸರಿಯಾಗಿ ಚಂದ್ರನು ಉದಯಕ್ಕೆ ಬಂದರೆ ಪೂರ್ಣಿಮೆಯು ಅವಸಾನವಾಯಿತೆಂದೂ, ನಡು ನೆತ್ತಿಗೆ ಬಂದರೆ ಶುಕ್ಲಾಷ್ಟಮಿಯ ಅರ್ಧ, ಅದು ಸೂರ್ಯೋದಯಕಾಲದಲ್ಲಾದರೆ ಕೃಷ್ಣಾಷ್ಟಮಿಯ ಅರ್ಧ ಹೀಗೆಲ್ಲ ನಿರ್ಧರಿಸಲಿಕ್ಕೆ ಬರುವುದೆ"ಂದೂ ಹೇಳಿರುವರು. ಸರಿ; ಆದರೆ ಇವರ ಈ ಹೇಳಿಕೆಯಂತೆ ತಿಥಿ, ಚ್ಯುತಿ, ಪರಿಣತಿ ಮೊದಲಾದ ನವೀನಸಂಸ್ಕಾರಗಳಷ್ಟೇ ಅಲ್ಲದೆ ಅಕ್ಷ, ಅಯನ, ಲಂಬನ, ನತಿ ಮುಂತಾದ ಸಮಸ್ತಸಂಸ್ಕಾರಗಳಿಂದಲೂ ಕೂಡಿ ಅತ್ಯಂತ ಪ್ರತ್ಯಕ್ಷಶುದ್ಧವಾದ ಇಂತಹ ದೃಕ್ಸಿದ್ಧತಿಥಿಗಳೇ ಶ್ರೌತ-ಸ್ಮಾರ್ತ ಕರ್ಮಾನುಷ್ಠಾನಗಳಿಗೆಲ್ಲ ಯೋಗ್ಯವಾದ್ದೆಂದು ಇವರ ಅಭಿಮತವಿರುತ್ತಿದ್ದರೆ ಅದನ್ನು ಸರ್ವರಿಗೂ ತಿಳಿಯುವಂತೆ ಸ್ಪಷ್ಟವಾಗಿ ಪ್ರಕಟಗೊಳಿಸುವುದೂ, ಮತ್ತು ಅದರಂತೆಯೇ ತಮ್ಮ ನವೀನದೃಕ್ಪಂಚಾಂಗದಲ್ಲಾದರೂ ಇಂತಹ ಪ್ರತ್ಯಕ್ಷಶುದ್ಧ ತಿಥ್ಯಾದಿಗಳನ್ನೇ ಸಾಧಿಸಿ ಪ್ರಕಟಿಸುವುದೂ ಅವಶ್ಯಕವಾಗಿರುವುದರಿಂದ ಆ ರೀತಿ ಇವರು ಮಾಡಿದ್ದರೆ ಇವರೊಡನೆ ನಮಗೆ ಈ ತರದ ವಾದವಿವಾದಕ್ಕೆ ಕಾರಣವೇ ಇರುತ್ತಿರಲಿಲ್ಲ. ಮತ್ತು ಇವರ ಪಂಚಾಂಗವನ್ನಾದರೂ ಈ ರೀತಿಯಿಂದ ಖಂಡಿಸತಕ್ಕದ್ದಿರುತ್ತಿದ್ದಿಲ್ಲ. ಇವರ ಮತದಂತೆಯೇ ದೃಕ್ಸಿದ್ಧವಾಗುವ ಇಂಥಾ ಸೂಕ್ಷ್ಮತಿಥಿಯನ್ನಾದರೂ ಇವರು ತಮ್ಮ ಪಂಚಾಂಗದಲ್ಲಿ ಸ್ವೀಕರಿಸದೆ, ಅತ್ತ ಆರ್ಷಶಾಸ್ತ್ರವನ್ನೂ ಪ್ರಮಾಣೀಕರಿಸದೆ ಪ್ರಮಾಣಹೀನವಾದ ನವೀನಮಾರ್ಗವನ್ನು ಹಿಡಿದಿರುವುದಕ್ಕಾಗಿಯೇ ಈ ರೀತಿ ಗೋಳಾಟವಾಗಿರುವದು. ಇನ್ನಾದರೂ ಈ ಮಹಾಶಯರು ಈ ರೀತಿ ಸೂರ್ಯಾಸ್ತಕಾಲದಲ್ಲಿ ಚಂದ್ರೋದಯವಾಗುತ್ತಿರುವಾಗ ಪೂರ್ಣಿಮಾವಸಾನವಾಗುವಂತಹ (ಲಂಬನ, ಅಕ್ಷಾದಿ ಸರ್ವಸಂಸ್ಕಾರ ಸಹಿತವಾಗಿರುವ) ಶುದ್ಧ ದೃಕ್ಸಿದ್ಧ ತಿಥ್ಯಾದಿಗಳೇ ಕರ್ಮಾರ್ಹವೆಂದು (ಮಹಾಜನರ ತಿಳುವಳಿಕೆಯ ಬಗ್ಗೆ) ಪ್ರಕಟಪಡಿಸುವ ಉಪಕಾರಮಾಡುವುದಲ್ಲದೆ, ಆದರಂತೆಯೇ ತಮ್ಮ ನವೀನದೃಕ್ಪಂಚಾಂಗದ ತಿಥ್ಯಾದಿಗಳನ್ನಾದರೂ ತಿದ್ದಿಕೊಳ್ಳಬೇಕಾಗಿ ವಿನಯದಿಂದ ಸೂಚಿಸುವೆವು. ಇದರಿಂದ ಜ್ಯೋತಿಃಶಾಸ್ತ್ರದ ಮರ್ಮವನ್ನರಿಯದ ಬಹುಜನರಿಗೆ ಇವರ ದೃಕ್ಪಂಚಾಂಗದ ಯೋಗ್ಯತೆಯನ್ನು ಸುಲಭವಾಗಿ ತಿಳಿದುಕೊಳ್ಳಲು ಆಸ್ಪದವಾಗಬಹುದು. ಮತ್ತು ಇವರ ಮತದಂತೆಯಾದರೂ [illegible] ಕರ್ಮಾನುಷ್ಠಾನಕ್ಕೆ

ಪ್ರತ್ಯಕ್ಷಪ್ರಮಾಣಸಿದ್ಧವಾದ ಕಾಲವನ್ನು ಸಾಧಿಸಿಕೊಟ್ಟ ಪುಣ್ಯವು ಇವರಿಗೆ ಲಭಿಸಿದಂತಾಗಬಹುದು; ಇರಲಿ! ಇವೆಲ್ಲದರಿಂದ ಮತ್ತು ಮುಂದೆ ಪಂಕ್ತಿ ೯-೧೧ ರಲ್ಲಿ ಇನ್ನೂ ಸೂಕ್ಷ್ಮಬೇಕಾದರೆ ಷಷ್ಠ್ಯಾಂಶಯಂತ್ರದಿಂದ ಸೂರ್ಯ-ಚಂದ್ರರ ಅಂತರವನ್ನು ಪರೀಕ್ಷಿಸಿ ನೋಡಿ ಪ್ರತಿತಿಥಿಯ ಅವಸಾನವನ್ನು ತಿಳಿಯಲಿಕ್ಕೆ ಬರುತ್ತದೆ; ಎಂದಿರುವುದರಿಂದಲೂ ಸಹ ತಿಥಿಯು ಅಂತರಾತ್ಮಕ (ಗೋಲಾತ್ಮಕ) ವೆಂದು ಹೇಳಿದಂತಾಗಿದೆ. ಹೀಗೆ ಇವರ ಹೇಳಿಕೆಯಲ್ಲಿ ತಿಥಿಯ ಸ್ವರೂಪವೇ ನಿಶ್ಚಯವಾಗಿಲ್ಲವಾದ್ದರಿಂದ ಅದು ಪ್ರತ್ಯಕ್ಷವೆಂದು ಸಾಧಿಸಲು ಇವರು ಯತ್ನಿಸಿದ್ದೆಲ್ಲ ವ್ಯರ್ಥಶ್ರಮವೂ ಕೇವಲ ಹವ್ಯಾಸನೂ ಆಗಿದೆ.

## ವಾರ.

'ವಾರವು ಜಗತ್ತಿನಲ್ಲೆಲ್ಲ ಮತಭೇದವಿಲ್ಲದೆ ಪ್ರಚಾರದಲ್ಲಿದೆ;' ಎಂದಿದ್ದಾರೆ. ಆದರೆ ವಾರಗಳು ಜಗತ್ತಿನಲ್ಲೆಲ್ಲ ಪ್ರಚಾರದಲ್ಲಿದ್ದರೂ ಅದರ ಆರಂಭಾವಸಾನ (ಪ್ರವೃತ್ತಿ-ನಿವೃತ್ತಿ) ಗಳಲ್ಲಿ ಮತಭೇದವಿದ್ದೇ ಇದೆ. ಇಂಗ್ಲಿಷಪದ್ಧತಿಯಂತೆ ಅರ್ಧರಾತ್ರಿಯಿಂದ ಆರಂಭಿಸುವುದೂ, ಇಸ್ಲಾಂ ಪದ್ಧತಿಯಂತೆ ಸೂರ್ಯಾಸ್ತಮಯದಿಂದ ಆರಂಭಿಸುವುದೂ, ವೈದಿಕ ಧರ್ಮದಲ್ಲಿಯೂ ಸಹ (ರಜಸ್ವಲಾಶುದ್ಧಿ, ಸೂತಕಶುದ್ಧಿ ಮುಂತಾದ ವಿಷಯವಿಶೇಷಗಳಲ್ಲಿ) ದಿನಾರಂಭವನ್ನು ಬೇರೆ ಬೇರೆ ರೀತಿಯಿಂದ ನಿರ್ಣಯಿಸುವುದೂ ಇರುತ್ತದೆ. ಇದಲ್ಲದೆ ಸೂರ್ಯಸಿದ್ಧಾಂತ, ಸಿದ್ಧಾಂತಶಿರೋಮಣಿ ಮೊದಲಾದ ಗ್ರಂಥಗಳಲ್ಲಿ ವಾರಪ್ರವೃತ್ತಿಯ (ಆರಂಭದ) ಕಾಲವನ್ನು ಬೇರೆಬೇರೆಯಾಗಿ ಹೇಳಿದ್ದು, ಸುಪ್ರಸಿದ್ಧ ವಿದ್ಯಾ (ಮುಹೂರ್ತ) ಮಾಧವೀಯದಲ್ಲಿ ಬೇರೆಬೇರೆ ವಾರಗಳ ಕಾಲಾವಧಿ (ಪರಿಮಿತಿ) ಯನ್ನು ಸಹ ಮತಭೇದದಿಂದ ಕಾಣಿಸಿದೆ. ಹೀಗೆ ಜಗತ್ತಿನಲ್ಲಿ ವಿಷಯಭೇದದಿಂದಲೂ, ಕರ್ಮಭೇದದಿಂದಲೂ, ಮತಭೇದದಿಂದಲೂ ವಾರಪ್ರವೃತ್ತಿಯು ಭಿನ್ನಭಿನ್ನವಾಗಿರುವುದು ಸಕಲರಿಗೂ ಅನುಭವದಲ್ಲಿರುವಾಗ ವಾರವನ್ನಾದರೂ ಶಾಸ್ತ್ರದಿಂದಲೇ ನಿರ್ಣಯಿಸತಕ್ಕದ್ದಾಗಿರುವುದಲ್ಲದೆ ಪ್ರತ್ಯಕ್ಷದಿಂದಲ್ಲ. ಇನ್ನು ವಾರಭೇದವನ್ನು ಸೂಚಿಸತಕ್ಕ ಸೂರ್ಯೋದಯಾದಿಗಳಲ್ಲಿ ಕೆಲವು ವಿಷಯಗಳು ಪ್ರತ್ಯಕ್ಷವೆಂತಾದರೂ ಮುಂಚಿನ ದಿನದ ವಾರದ ನೆನಪಿಲ್ಲದೆ ಕೇವಲ ಸೂರ್ಯೋದಯಾದಿಗಳನ್ನು ನೋಡುವ ಮಾತ್ರದಿಂದಲೇ ಇದು ರವಿವಾರ, ಇದು ಚಂದ್ರವಾರವೆಂಬ ಈ ಮೊದಲಾದ ವಾರಭೇದಗಳು ಎಂದಿಗೂ ಪ್ರತ್ಯಕ್ಷವಾಗತಕ್ಕವುಗಳಲ್ಲ. ಮತ್ತು ಯಾವುದೊಂದು ನಿರ್ದಿಷ್ಟಸಮಯದಲ್ಲಿ ಇಂಥದೇ ವಾರವೆಂದು ಮತಭೇದವೇನೂ ಇಲ್ಲದೆ ಕೇವಲ ಪ್ರತ್ಯಕ್ಷದಿಂದಲೇ ನಿರ್ಣಯಿಸುವುದು ಹೇಗೂ ಸಾಧ್ಯವಿಲ್ಲ. ಈ ಮುಂತಾದ ಕಾರಣಗಳಿಂದ ವಾರವು ಪ್ರತ್ಯಕ್ಷಮಾತ್ರದಿಂದ ಸಿದ್ಧವಾಗತಕ್ಕದ್ದಲ್ಲವೆಂದೂ ಅದರ ಬಗ್ಗೆ ಮತಭೇದಗಳು ಸಹ ಇರುತ್ತವೆಂದೂ ಸಿದ್ಧವಾಗುತ್ತಿರುವಾಗ

ಇದೊಂದನ್ನೂ ಇವರು ಯೋಚಿಸದೆ ವಾಐವು ಮತಭೇದವಿಲ್ಲದ್ದೆಂದೂ, ಪ್ರತ್ಯಕ್ಷ
ವೆಂದೂ ಬರೆದಿರುವುದು ತೀರ ಅಯುಕ್ತವೂ, ಅತಿಸಾಹಸವೂ ಆಗಿರುತ್ತದೆ.

## ನೆಕ್ಷತ್ರ.

[ಪುಟ ೭. ಪಂ. ೧-೩] ರಲ್ಲಿ ' ಷಷ್ಠ್ಯಾಂಶಯಂತ್ರದಿಂದ ಸೂಕ್ಷ್ಮವಾಗಿ
ಚಂದ್ರನನ್ನು ಪರೀಕ್ಷಿಸಿದರೆ ಪಂಚಾಂಗದಲ್ಲಿ ಬರೆದ ನಕ್ಷತ್ರಸಮಾಪ್ತಿಕಾಲವು
ಸರಿಯಿದೆಯೋ? ಎಂಬುದನ್ನು ತಿಳಿಯಲಿಕ್ಕಾಗುವುದು; ' ಎಂದಿದ್ದಾರೆ. ಇದರಿಂದ
ಪಂಚಾಂಗದಲ್ಲಿ ಕಾಣಿಸಿರುವ ನಿತ್ಯನಕ್ಷತ್ರದ ( ಸಮಾಪ್ತಿ ) ಘಟಿಕಾದಿಗಳನ್ನು
ಪಂಚಾಂಗದ ಸಹಾಯವಿಲ್ಲದೆ ಕೇವಲ ಪ್ರತ್ಯಕ್ಷದಿಂದಲೇ ಚಂದ್ರನನ್ನು ನೋಡಿ
ತಿಳಿಯಬಹುದೆಂದು ಇವರು ಹೇಳಿದಂತಾಯಿತು. ಆದರೆ ಅಲ್ಲಿಯೇ ಮುಂದೆ
ಇದಕ್ಕೆ ವಿಪರೀತವಾಗಿ " ಭೂಕೇಂದ್ರದಿಂದ ಕಾಣುವ ಮತ್ತು ಭೂಪೃಷ್ಠದಿಂದ
( ಯಂತ್ರಾದಿಗಳ ಸಹಾಯದಿಂದ ನಮಗೆ ) ಕಾಣುವ ಗ್ರಹಗಳ ಪರಿಸ್ಥಿತಿಗಳೊಳ
ಗೆ ಸ್ವಲ್ಪ ಅಂತರವಿರುತ್ತದೆ; ಆ ಅಂತರಕ್ಕೆ ಲಂಬನವೆಂದು ಹೆಸರು; ಆದು
ಗ್ರಹರು ನಡುನೆತ್ತಿಗೆ ಬಂದಾಗ ಇರುವುದಿಲ್ಲ; ಕಾರಣ ಆ ಕಾಲದಲ್ಲೇ ಗ್ರಹಗಳ
ಪಾರಮಾರ್ಥಿಕ ಸ್ಥಿತಿಯನ್ನು ಪರೀಕ್ಷಿಸಿ ನೋಡಬೇಕು. ಇತರ ಕಾಲದಲ್ಲಿ
ನೋಡುವುದಾದರೆ ಆ ಲಂಬನಾಂಶವನ್ನು ಮಾತ್ರ ಗಣಿತದಿಂದ ತಿಳಿಯಬೇಕಾ
ಗುತ್ತದೆ; " ಎಂದು ಹೇಳಿರುವರು. ಇದರ ಮೇಲಿಂದ ಇವರ ನವೀನಪಂಚಾಂಗ
ದಂತೆಯೇ ಆದರೂ ಎಲ್ಲಾ ನಕ್ಷತ್ರಗಳು ಚಂದ್ರನು ನಡುನೆತ್ತಿಗೆ ಬಂದಾಗಲೇ
ಅವಸಾನವಾಗುವುದಿಲ್ಲವಾದುದರಿಂದ ಮತ್ತು ಶಾಸ್ತ್ರಜ್ಞಾನವಿಲ್ಲದೆ ಕೇವಲ ಪ್ರತ್ಯಕ್ಷ
ದಿಂದ ಲಂಬನಾಂಶವು ತಿಳಿಯತಕ್ಕದ್ದಲ್ಲವಾದುದರಿಂದ ಅವನ್ನೆಲ್ಲ ಕೇವಲ ಪ್ರತ್ಯಕ್ಷ-
ದಿಂದ ತಿಳಿಯುವುದು ಅಶಕ್ಯವೆಂಬುದನ್ನು ಇವರೇ ಒಪ್ಪಿಕೊಂಡಂತಾಗಿದೆ.
ಕೇವಲ ಚಂದ್ರಗತಿಯೊಂದನ್ನೇ ಹೊಂದಿರುವ ನಿತ್ಯನಕ್ಷತ್ರವೇ ಪ್ರತ್ಯಕ್ಷವಲ್ಲವೆಂ
ದಾಗುವಲ್ಲಿ ಚಂದ್ರ-ಸೂರ್ಯರಿಬ್ಬರ ಗತಿಯನ್ನೂ ಅವಲಂಬಿಸಿರುವ ತಿಥಿಯು
ಹೇಗೂ ಪ್ರತ್ಯಕ್ಷವಾಗತಕ್ಕದ್ದಲ್ಲವೆಂದು ಬೇರೆ ಹೇಳಬೇಕಾಗಿಲ್ಲ. ಮತ್ತು ಇವರು
ಇಲ್ಲಿ ಭೂಪೃಷ್ಠದಿಂದ ಕಾಣುವ ಗ್ರಹಸ್ಥಿತಿಗಳೆಲ್ಲವೂ ಪಾರಮಾರ್ಥಿಕವಾಗಿರುವ
ದಿಲ್ಲವೆಂಬ ಅರ್ಥವನ್ನು ಸೂಚಿಸಿರುವುದರಿಂದ ಭೂಪೃಷ್ಠವಾಸಿಗಳಾದ ನಮಗೆ
ಪ್ರತ್ಯಕ್ಷವಾಗಿ ಕಾಣುವ ಗ್ರಹಸ್ಥಿತಿಗಳೆಲ್ಲ ಪಾರಮಾರ್ಥಿಕವಾದವುಗಳಲ್ಲವೆಂತಲೂ,
ನಮಗೆ ಪ್ರತ್ಯಕ್ಷವಾಗಿ ತೋರುವ ಸ್ಥಿತಿಗಿಂತ ಬೇರೆಯಾದ ಪಾರಮಾರ್ಥಿಕ
ಸ್ಥಿತಿಯೊಂದು (ಪ್ರತ್ಯೇಕವಾಗಿ) ಇರುತ್ತದೆಂದೂ (ಸಾರಾಂಶ:— ಕೇವಲ ಪ್ರತ್ಯಕ್ಷ
ವೇ ಪರಮಾರ್ಥವಲ್ಲವೆಂದು) ಸ್ವಲ್ಪ ಮುಚ್ಚುಮರೆಯಿಂದ ಇವರೂ ಒಪ್ಪಿ (ಹೇಳಿ)
ದಂತಾಗಿದೆ. ಇನ್ನು ಈ ಪಾರಮಾರ್ಥಿಕಸ್ಥಿತಿಯು ಗ್ರಹರು ನಡುನೆತ್ತಿಗೆ ಬಂದಾಗ
ಅಂದರೆ— ಲಂಬನಾಂಶವೇ ಇಲ್ಲದಿರುವಾಗ ಪ್ರತ್ಯಕ್ಷವಾಗುವುದೆಂದು ಇವರ

ಅಂಬೋಣ. ಸ್ವಲ್ಪ ವಿಚಾರಮಾಡಿದರೆ ಇದಾದರೂ ನಿಃಸಾರವಾದ ಮಾತೆಂದೇ ಸಿದ್ಧವಾಗುವುದು. ಹೇಗೆಂದರೆ — ನಿತ್ಯದಲ್ಲಿಯೂ ಗ್ರಹರು ನಡುನೆತ್ತಿಗೆ ಬರುವ ಪರಿಸ್ಥಿತಿಯು ಅಸಂಭವವಾಗಿದ್ದು ಯಾಮ್ಯೋತ್ತರರೇಖೆಯನ್ನಷ್ಟೇ ಹಾದು ಹೋಗುವ ಸ್ಥಿತಿಯು ಘಟಿಸುತ್ತಿರುತ್ತದೆ. ಹೆಚ್ಚೆಂದರೆ ವರ್ಷದಲ್ಲಿ ೨ ಸಾರಿ ಸೂರ್ಯನೂ, ತಿಂಗಳಿಗೆ ೨ ಸಾರಿ ಚಂದ್ರನೂ ನಡುನೆತ್ತಿಗೆ ಬರುವ ಸ್ಥಿತಿಯು ಕದಾಚಿತ್ತಾಗಿ ಘಟಿಸಬಹುದಾಗಿದ್ದು ಹಲವು ದೇಶಗಳಲ್ಲಿ ಯಾವ ಕಾಲದಲ್ಲಿಯೂ ನಡುನೆತ್ತಿಗೆ ಬರುವ ಸ್ಥಿತಿಯು ಘಟಿಸುವುದೇ ಇಲ್ಲ. ಮತ್ತು ಲಂಬನಾಂಶವು ಇಲ್ಲದೇ ಹೋಗುವುದು ಯಾಮ್ಯೋತ್ತರ ( ಮಧ್ಯಾಹ್ನ ) ರೇಖಾಸ್ಥಾನದಲ್ಲಾಗಿರದೆ ತ್ರಿಭೋನಲಗ್ನಸ್ಥಾನದಲ್ಲಾಗಿದೆ. ತ್ರಿಭೋನಲಗ್ನವು ಮಧ್ಯಾಹ್ನರೇಖೆಯನ್ನು ಹೊಂದಿರತಕ್ಕದ್ದಲ್ಲವೆಂದೂ, ತ್ರಿಭೋನಲಗ್ನಸ್ಥಾನವೂ, ಮಧ್ಯಾಹ್ನರೇಖೆಯೂ ಬಹಳ ಸಮಯಗಳಲ್ಲಿ ಬೇರೆಬೇರೆಯಾಗಿಯೇ ಇರುತ್ತವೆಂದೂ ಗೋಳಜ್ಞರಿಗೆಲ್ಲ ತಿಳಿದಿರತಕ್ಕದ್ದೇ ಸರಿ. ಅಯಾ ಕಾಲದಲ್ಲಿ ಲಂಬನವು ಶೂನ್ಯವಾಗಿರತಕ್ಕ ತ್ರಿಭೋನಲಗ್ನಸ್ಥಾನವನ್ನು ಕೇವಲ ಪ್ರತ್ಯಕ್ಷದಿಂದ ತಿಳಿಯಲಿಕ್ಕೆ ಹೇಗೂ ಸಾಧ್ಯವಿಲ್ಲ. ಅಂತಮೇಲೆ ಸ್ವಪಕ್ಷಸಮರ್ಥನೆಗಾಗಿ ಇಂಥಾ ದುರ್ಘಟಪ್ರಸಂಗಗಳನ್ನು ಕಲ್ಪಿಸಿಕೊಂಡು ನಿತ್ಯದಲ್ಲಿಯೂ ನಕ್ಷತ್ರ ( ತಿಥಿ ಮುಂತಾದ ಪಂಚಾಂಗ ) ಗಳ ಸಮಾಪ್ತಿಕಾಲವನ್ನು ಪ್ರತ್ಯಕ್ಷದಿಂದಲೇ ಸರಿಯಾಗಿ ತಿಳಿದುಕೊಳ್ಳಬಹುದೆಂದು ವಾದಿಸುವುದು ತೀರ ಅಸಂಗತವೂ, ವಿರುದ್ಧವೂ ಆಗಿದೆ.

ಹೀಗೆ ಪರಸ್ಪರ ವಿರುದ್ಧಾಂಶವನ್ನೂ, ಅಸಮಂಜಸವಾದ ಕ್ಲಿಷ್ಟೋಕ್ತಿಗಳನ್ನೂ ಇವರು ಹೇಳುವುದರ ಮರ್ಮವೇನೆಂದು ವಿಚಾರಿಗಳಿಗೆ ತಿಳಿಯದಿರಲಿಕ್ಕಿಲ್ಲ. ನ್ಯಾಯತಃ ಇವರ ಹೃದಯವು ಜ್ಯೋತಿಷವು ಶಾಸ್ತ್ರಾಧೀನವೇ ಆದದ್ದೆಂದು ಒಪ್ಪಿದರೂ ಸಹ ಮುಂದಿಟ್ಟ ಹೆಜ್ಜೆಯನ್ನು ಹಿಂದೆಳೆಯಬಾರದೆಂಬ ಆಗ್ರಹದಿಂದಲೇ ತಮ್ಮ ಆ ವಿವೇಕಕ್ಕೆ ವಿರುದ್ಧವಾಗಿ ಶಾಸ್ತ್ರಜ್ಞರಲ್ಲದ ಸಾಮಾನ್ಯ ಜನರ ಕಣ್ಣುಕಟ್ಟಲಿಕ್ಕೋಸ್ಕರ ಜ್ಯೋತಿಷವು ಕಣ್ಣಿನಿಂದ ನೋಡಿ ನಿರ್ಣಯಿಸುವಂಥ ಪ್ರತ್ಯಕ್ಷಶಾಸ್ತ್ರವೆಂದೂ, ಪ್ರತ್ಯಕ್ಷವಾದ ಗ್ರಹಗತಿಗನುಸಾರವಾಗಿ ತಾವು ಮಾಡುವ ಪಂಚಾಂಗವು ಕರ್ಮಾನುಷ್ಠಾನಗಳಿಗೆ ಯೋಗ್ಯವಾದುದೆಂದೂ ಸಾರಿದ್ದಾರೆ. ಆದರೆ ಶಾಸ್ತ್ರಜ್ಞರು ತಿರಸ್ಕರಿಸಬಹುದೆಂಬ ಸಂಕೋಚದಿಂದಲೋ ಏನೋ ಈ ಸಂದರ್ಭದಲ್ಲಿ "ಇತರ ಕಾಲದಲ್ಲಿ ನೋಡುವುದಾದರೆ ಆ ಲಂಬನಾಂಶವನ್ನು ಮಾತ್ರ ಗಣಿತದಿಂದ ತಿಳಿಯತಕ್ಕದ್ದೆ"ಂದು ಸಾಮಾನ್ಯರಿಗೆ ಅರ್ಥವಾಗದಂತೆ ಹೇಳಿದ್ದಾರೆ. ಇವರ ಈ ಜಟಿಲವಾದ ಹೇಳಿಕೆಯನ್ನೇ ಸೂಕ್ಷ್ಮವಾಗಿ ವಿವೇಚಿಸುವಲ್ಲಿ ನಾವಿಲ್ಲಿ ವಿವರಿಸಿರುವ ಪ್ರಕಾರ ಮತ್ತು ಮುಂದೆ ವಿವರಿಸುವ ಇನ್ನೂ ಅನೇಕ ಕಾರಣಗಳಿಂದ ಕರ್ಮಾಚರಣೆಗೆ ಯೋಗ್ಯವಾದ ಪಾರಮಾರ್ಥಿಕ ( ಶಾಸ್ತ್ರಶುದ್ಧ ) ನಕ್ಷತ್ರ ( ತಿಥ್ಯಾದಿ ) ಗಳು ಸಹ ಕೇವಲ ಪ್ರತ್ಯಕ್ಷದಿಂದ ತಿಳಿಯತ

ಕ್ಕವುಗಳಲ್ಲವೆಂದೇ ಸಿದ್ಧಾಂತವಾಗುತ್ತದೆ. ಇದನ್ನು ಸ್ವತಃ ಇವರಾದರೂ ಒಪ್ಪಿಕೊಳ್ಳದೆ ನಿರ್ವಾಹವಿಲ್ಲ.

## ಯೋಗ.

ಹೀಗೆ ಸೂರ್ಯ-ಚಂದ್ರರ ಪಾರಮಾರ್ಥಿಕವಾದ ಭೋಗ (ಗತಿ) ಗಳು ಕೇವಲ ಪ್ರತ್ಯಕ್ಷದಿಂದ ತಿಳಿಯತಕ್ಕವುಗಳಲ್ಲವೆಂದು ಸಿದ್ಧವಾದ ಬಳಿಕ ಅವೆರಡರ ಐಕ್ಯರೂಪವಾದ ಯೋಗದ ವಿಷಯದಲ್ಲಿ ಪುಟ ೭ ಪಂ. ೧೪-೧೭ರಲ್ಲಿ ಇವರು ಬರೆದ ನ್ಯಾಯದಂತೆಯೇ ಯೋಗವೂ ಪ್ರತ್ಯಕ್ಷವಲ್ಲವೆಂದೇ ಸಿದ್ಧವಾಗುವುದು. ಎರಡು ಪಾರಮಾರ್ಥಿಕ ಸ್ಥಿತಿಗಳಲ್ಲಿ ಯಾವುದಾದರೊಂದು ಪ್ರತ್ಯಕ್ಷದಿಂದ ತಿಳಿಯತಕ್ಕದ್ದಲ್ಲವೆಂದು ಸಿದ್ಧವಾದರೂ ಅವೆರಡರ ಪಾರಮಾರ್ಥಿಕವಾದ ಯೋಗವೂ (ಅಂತರವೂ) ಸಹ ಪ್ರತ್ಯಕ್ಷವಾಗತಕ್ಕದ್ದಲ್ಲವೆಂಬುದು ತಾನಾಗಿ ಸಿದ್ಧವಾಗುವುದೆಂದು ಪಾರಮಾರ್ಥಿಕರಿಗೆ ಬೇರೆ ಹೇಳಬೇಕಾಗಿಲ್ಲ.

## ಕರಣ.

"ತಿಥ್ಯರ್ಧಂ ಕರಣಂ ಪ್ರೋಕ್ತಂ" ಎಂಬಂತೆ ತಿಥಿಯ ಅರ್ಧವು ಕರಣವೆಂಬುದು ಸರಿ; ಆದುದರಿಂದ ಇಡೀ ತಿಥಿಯೇ ಪ್ರತ್ಯಕ್ಷವೆಂದು ಸಿದ್ಧವಾಗದಿರುವಾಗ ಅದರ ಅರ್ಧವು ಪ್ರತ್ಯಕ್ಷವಲ್ಲವೆಂದು ಬೇರೆ ಸಿದ್ಧಪಡಿಸಬೇಕಾಗಿಲ್ಲ ಯಾವುದೊಂದು ಪದಾರ್ಥದ ಯಾವ ಭಾಗವೂ ಪ್ರತ್ಯಕ್ಷವಲ್ಲದಿರುವಾಗ ಅದರ ಅರ್ಧ ಭಾಗವು ಪ್ರತ್ಯಕ್ಷವಿರುವ ಸಂಭವವೇ ಇಲ್ಲವೆಂಬುದು ವಸ್ತುತತ್ವಜ್ಞರಿಗೆ ತಿಳಿದಿರತಕ್ಕದ್ದೇ ಸರಿ.

ಪುಟ ೮ರಲ್ಲಿ ಸೂರ್ಯ-ಚಂದ್ರರು ಕ್ರಾಂತಿವೃತ್ತದ ೩೬೦ ವಿಭಾಗ, ಅಥವಾ ೨೭ ವಿಭಾಗ, ಯಾ ೧೨ ವಿಭಾಗಗಳಲ್ಲಿರುವ ಸ್ಥಿತಿ ಮತ್ತು ಇವರ ಪೂರ್ವಾಪರಾಂತರ ಸ್ಥಿತಿಗಳು ಇವೆಲ್ಲ ಚಾಣಾಕ್ಷರಾದವರಿಗೆ ಬರಿಗಣ್ಣಿನಿಂದಲೂ ನೋಡಿ ತಿಳಿಯಲಿಕ್ಕೆ ಶಕ್ಯವಿದೆಯೆಂಬ ಭಯಂಕರ ವಿಚಾರವನ್ನು ಕಾಣಿಸಿದ್ದಾರೆ. ಈ ರೀತಿ ಇವರು ಬರೆಯದಿರುತ್ತಿದ್ದರೆ ಇವರ ವಿಚಿತ್ರವಾದ ಕಲ್ಪನಾಶಕ್ತಿಯ ಅರಿವು ಬೇರೆಯವರಿಗಾಗುವ ಸಂಭವವಿದ್ದಿಲ್ಲ. ಕ್ರಾಂತಿವೃತ್ತದ ಆರಂಭಬಿಂದುವಿನಿಂದ ಕಲ್ಪಿಸಿದ ೩೬೦ ವಿಭಾಗಗಳ ಪೈಕಿ ಸೂರ್ಯ-ಚಂದ್ರರು ಇಂತಿಷ್ಟನೆಯ ವಿಭಾಗದಲ್ಲಿಯೇ ಇರುವರೆಂಬದನ್ನು ಬರಿಗಣ್ಣಿನಿಂದ ನೋಡಿ ತಿಳಿಯುವ ಚಾಣಾಕ್ಷರು ಲೋಕದಲ್ಲಿ ಇಂಥವರಿರುವರೆಂಬುದನ್ನು ಇವರು ಕಂಡುದು ಬರಿಗಣ್ಣಿನಿಂದಲೋ ಅಂತರ್ದೃಷ್ಟಿಯಿಂದಲೋ ತಿಳಿಯದು. ಗ್ರಹಭೋಗದ ಭಾಗಾತ್ಮಕ ಸಂಖ್ಯೆಯು ಬರಿಗಣ್ಣಿನಿಂದ ತಿಳಿಯಲಿಕ್ಕೆ ಶಕ್ಯವಾಗಬೇಕಾದರೆ ಕ್ರಾಂತಿವೃತ್ತದ ೩೬೦ ವಿಭಾಗಗಳನ್ನು ಬರಿಗಣ್ಣಿನಿಂದಲೇ ಪ್ರತ್ಯೇಕಿಸಿ ತಿಳಿಯಲು ಬರಬೇಕಷ್ಟೆ.

ಯಾವುದೊಂದು ವರ್ತುಲಖಂಡವು ಇಡೀ ವರ್ತುಲದ ಎಷ್ಟನೆಯ ಅಂಶವೆಂಬು ದನ್ನು (ಬೇರೆ ಸಾಧನೆಗಳೇನೂ ಇಲ್ಲದೆ) ಬರಿಗಣ್ಣಿನಿಂದಲೇ ನೋಡಿ ನಿರ್ಣಯಿಸ ಲಿಕ್ಕೆ ಯಾರಿಗಾದರೂ ಶಕ್ಯವಿದೆಯೇ? ಅಂತಹ ಶಕ್ತಿಯು ತಮಗಾದರೂ ಉಂಟೆಂದು ಇವರು ಸಾಧಿಸುವುದಾಗಿದ್ದರೆ ಇವರ ಕಲ್ಪನಾಶಕ್ತಿಯಂತೆ (ಇವರ) ದೃಕ್‌ಶಕ್ತಿಯಾದರೂ ಅಸಮಾನವಾದುದೆಂದು ತಿಳಿಯುತ್ತಿತ್ತಲ್ಲದೆ ಇವರ ಪಂಚಾಂಗಕ್ಕೆ ಇವರೇ ಆದರೂ ಸಾಕ್ಷಿಯಿದ್ದಂತಾಗುತ್ತಿತ್ತು. ಹಾಗೇನೂ ಇಲ್ಲದೆ ಇಂಥ ಕಲ್ಪನಾಪ್ರಸಂಗವನ್ನು ಬೆಳೆಯಿಸುವುದರಿಂದ ಸ್ವಪಕ್ಷಸಮರ್ಥನೆಯಾಗುವು ದೆಂದು ಯಾರೂ ತಿಳಿಯಲಿಕ್ಕಿಲ್ಲ. ಮತ್ತು ಇದೇ ಪುಟದ ಪಂಕ್ತಿ ೮-೯ರಲ್ಲಿ ಇವರು "ಕರ್ಮಾರ್ಹವಾದ ತಿಥ್ಯಾದಿಗಳು ಇಂಥ ( ಬರಿಗಣ್ಣಿನಿಂದ ನೋಡಿದ ) ಸೂರ್ಯ-ಚಂದ್ರರ ಪರಿಸ್ಥಿತಿಯನ್ನೇ ಅವಲಂಬಿಸಿರುತ್ತವೆ" ಎಂದಿರುವರು. ಹೀಗಿವರು ಬರೆಯುವಾಗ ಹಿಂದೆ ನಕ್ಷತ್ರವಿವರಣೆ (ಪುಟ ೭ ಪಂ. ೪-೯) ಯಲ್ಲಿ "ಭೂಪೃಷ್ಠದಿಂದ ಕಾಣುವ ಗ್ರಹಗಳ ಪರಿಸ್ಥಿತಿಗೂ ಪಾರಮಾರ್ಥಿಕ ಸ್ಥಿತಿಗೂ ಅಂತರವುಂಟೆ"ಂದು ಇವರೇ ಹೇಳಿರುವುದಕ್ಕೆ ಇದು ತೀರಾ ವಿರೋಧವಾಗುವು ದೆಂಬುದನ್ನು ಸಹ ಇವರು ಲಕ್ಷಿಸಲಿಲ್ಲವೆಂಬುದನ್ನು ತಿಳಿದರೆ ಇವರು ಸ್ವಪಕ್ಷ ಸಮರ್ಥನೆಯ ಭರದಲ್ಲಿ ಎಷ್ಟು ವ್ಯಾಹತಿಗೊಳ್ಳುತ್ತಿರುವರೆಂಬುದು ಸ್ಪಷ್ಟವಾಗು ವುದು. ಹೀಗೆ ಪರಸ್ಪರ ಸಂಬಂಧವಿಲ್ಲದ ಅಸಂಬದ್ಧ ವಿಷಯಗಳಿಂದಲೇ ಇವರು ತಮ್ಮ ಪಂಚಾಂಗವನ್ನು ಸಮರ್ಥಿಸಿ(?)ಕೊಂಡದ್ದಾಗಿದೆ. ಆದರೆ ಇವರು ಇಲ್ಲಿ ಹೇಳಿರುವಂತೆ ಬರಿಗಣ್ಣಿನಿಂದ ನೋಡತಕ್ಕ ( ಲಂಬನಾದಿ ಸಂಸ್ಕೃತ ) ಸೂರ್ಯ-ಚಂದ್ರರ ಪರಿಸ್ಥಿತಿಯನ್ನು ಇವರ ನವೀನದೃಕ್ಪಂಚಾಂಗದಲ್ಲಾದರೂ (ಕರ್ಮಾರ್ಹ) ತಿಥ್ಯಾದಿಗಣಿತದಲ್ಲಿ ಯಾಕೆ ಉಪಯೋಗಿಸುವುದಿಲ್ಲವೆಂಬುದನ್ನು ಇವರು ಎಲ್ಲಿಯೂ ಪ್ರಕಟಿಸದಿರುವ- ಸಮರ್ಥಿಸಿಕೊಳ್ಳದಿರುವ- ಕಾರಣವೇನೆಂದು ಸಾಮಾನ್ಯರಿಗೆ ತಿಳಿಯದಂತಾಗಿದೆ. ಹೀಗೆ ಇವರು ತಮ್ಮ ದೃಕ್ಪಂಚಾಂಗದ ಸಮರ್ಥನೆಗೆಂದು ಬರೆದಿರುವುದೆಲ್ಲ ಶಾಸ್ತ್ರಶಿಕ್ಷಾಗಲೀ, ಪ್ರತ್ಯಕ್ಷಶಿಕ್ಷಾಗಲೀ ಇವರು ಪ್ರಕಟಿಸುವ ಪಂಚಾಂಗಕ್ಕಾದರೂ ಸಹ ಸರಿಯಾಗಿಲ್ಲದೆ ತೀರ ವಿಸಂಗತವಾಗಿರು ವುದರಿಂದ ಇವರ ಆ 'ಸಮರ್ಥನೆ' ಎಂಬುದು "ಶಾಸ್ತ್ರಸಿದ್ಧ-ದೃಕ್-ಪಂಚಾಂಗ" ಈ ಯಾವುದನ್ನೂ ಸಮರ್ಥಿಸದೆ ಇದೊಂದು ಇವರ ನವೀನರೀತಿಯ ವಿಡಂಬನೆ ಯೆಂಬುದನ್ನಷ್ಟೇ ಸಮರ್ಥಿಸುವುದಾಗಿದೆ.

## ತಿಥ್ಯಾದಿಗಳ ನಿರ್ಣಯವು ಪ್ರತ್ಯಕ್ಷದಿಂದಾಗತಕ್ಕದ್ದಲ್ಲ.

ಇನ್ನು ನಾವು ಹಿಂದೆ ಪ್ರಸ್ತಾಪಿಸಿರುವಂತೆ ಯಾವ್ಯಾವದರೊಂದು ಪದಾರ್ಥದ ಸ್ವರೂಪವು ನಿಶ್ಚಯವಾಗದೆ ಆದರ ನಿರ್ಣಯವು ಯಾವ ಪ್ರಮಾಣ ದಿಂದ ಆಗತಕ್ಕದ್ದೆಂಬುದು ಸಹ ನಿಶ್ಚಯವಾಗುವುದಿಲ್ಲವಾದುದರಿಂದ ತಿಥಿಯೇ ಬ

ಪದಾರ್ಥದ ಸ್ವರೂಪವೇನೆಂಬುದನ್ನು ಮೊದಲು ತಿಳಿಯಬೇಕಾಗಿದೆ. ಶಾಸ್ತ್ರ ಪ್ರಮಾಣಕ್ಕಿಂತ ಸ್ವಂತ ಕಲ್ಪನೆಗಳಿಗೇನೇ ಮಹತ್ವಕೊಡುವವರು ಶಾಸ್ತ್ರಾಪೇಕ್ಷೆ ಯಿಲ್ಲದೆ ತಿಥಿಯ ಸ್ವರೂಪವನ್ನು ಸ್ವತಂತ್ರವಾಗಿ ಕಲ್ಪಿಸುವಲ್ಲಿಯೂ ಸಹ ಅಥ ಚಂದ್ರನ ಕಲಾಸ್ವರೂಪವೆಂತಾಗಲೀ, ಸೂರ್ಯ-ಚಂದ್ರರ ಅಂತರಸ್ವರೂಪವೆಂತಾ ಗಲೀ, ಕ್ಷಣ-ಘಟಿಕಾದಿ ಕಾಲಸ್ವರೂಪವೆಂತಾಗಲೀ ಅವರು ಹೇಳಬೇಕಲ್ಲದೆ ಈ ಮೂರಕ್ಕಿಂತ ಬೇರೆ ವಿಧವಾಗಿ ಕಲ್ಪಿಸಲು ಯಾರಿಗೂ ಶಕ್ಯವಿಲ್ಲ. ತಿಥಿಯು ಒಂದೇ ಆಗಿರದೆ ಪಾಡ್ಯ, ಬಿದಿಗೆ ಮುಂತಾದ ವಿಶೇಷಣಗಳುಳ್ಳದ್ದಾಗಿ ಬೇರೆಬೇರೆಯಾ ರುವ ಕಾರಣ ಆಯಾ ತಿಥಿಯ ವಿಶೇಷಪ್ರಕಾರವನ್ನು ತಿಳಿಯದೆ ತಿಥಿ ಜ್ಞಾನವಾಗುವುದಿಲ್ಲ. ತಿಥಿವಿಶೇಷದ ಜ್ಞಾನವಾಗಬೇಕಾದರೆ ಆಯಾ ತಿಥಿ ಆರಂಭ ಮತ್ತು ಅವಸಾನಗಳನ್ನು ನಿಶ್ಚಿತವಾಗಿ ತಿಳಿದುಕೊಳ್ಳಬೇಕಾಗುತ್ತದೆ.

(೧) ಚಂದ್ರನಲ್ಲಿ ತೋರುವ ಕಲೆಯೇ ತಿಥಿಯೆನ್ನುವ ಪಕ್ಷದಲ್ಲಿ— ಪ್ರ ಯೊಂದು ತಿಥಿಯ ಆದ್ಯಂತದಲ್ಲಿ ಸಂಭವಿಸತಕ್ಕ ಬಹು ಸೂಕ್ಷ್ಮವಾದ ಕಲಾಪರಿಮಾ ಣದ ಭೇದವು ಬರಿಗಣ್ಣಿನಿಂದಷ್ಟೇ ಅಲ್ಲ, ಸೂಕ್ಷ್ಮಯಂತ್ರಗಳಿಂದ ಸಹ ತಿಳಿಯು ದು ಕಷ್ಟವಿದೆ. ಒಂದುವೇಳೆ ಹಾಗೆ ತಿಳಿಯಬಹುದೆಂದು ವಾದಿಸುವುದಾದರೂ ಚಂದ್ರಾಸ್ತಮಯದ ನಂತರ ಸಂಭವಿಸತಕ್ಕ ಯಾವುದೊಂದು ತಿಥಿಯ ಆದ್ಯಂತ ನ್ನು ಯಾವ ರೀತಿಯಿಂದಲೂ ನೋಡುವುದು ಶಕ್ಯವಲ್ಲವಾದುದರಿಂದಲೂ, ಕೃಷ್ಣ ತ್ರಯೋದಶಿಯ ನಂತರ ಶುಕ್ಲ ತದಿಗೆಯ ವರೆಗೆ ಹಗಲಿನಲ್ಲಿ ಸೂರ್ಯಕಿರಣ ಪ್ರಖರತೆಯಿಂದ ಚಂದ್ರಕಲಾದರ್ಶನವು ದುಃಸಾಧ್ಯವಾಗಿರುವುದರಿಂದ ಆ ಸಂಭವಿಸಬಹುದಾದ ತಿಥಿಯ ಆದ್ಯಂತವನ್ನು ಸಹ ನೋಡುವುದು ಅಶಕ್ಯವಾ ರುವುದರಿಂದಲೂ ಇಂತಹ ತಿಥಿಗಳನ್ನೆಲ್ಲ ಪ್ರತ್ಯಕ್ಷದಿಂದ ತಿಳಿಯಲು ಸಾಧ್ಯವೆ ಇಲ್ಲ. ಇದೂ ಅಲ್ಲದೆ ಚಂದ್ರನ ಕೇವಲ ಕಲಾದರ್ಶನಮಾತ್ರದಿಂದಲೇ ತಿಥಿವಿಶೇಷ ವು ತಿಳಿಯುವುದಿಲ್ಲವೆಂಬುದು ಅಮಾವಾಸ್ಯೆ, ಮತ್ತು ಶುಕ್ಲಪಾಡ್ಯದಲ್ಲಿ ಸಂಭವಿ ತಕ್ಕ ಚಂದ್ರಕಲಾಸ್ಥಿತಿಯ ವ್ಯಭಿಚಾರ (ನಿಯಮವಿಲ್ಲದಿರೋಣ) ದಿಂದ ಯಾ ಗೂ ತಿಳಿಯುವಂತಿದೆ. ಹೇಗಂದರೆ— ಅಮಾವಾಸ್ಯೆಯಲ್ಲಿ ೨ ವಿಧವಾದ ಕಲಾ ಲಕ್ಷಣವು ಸಂಭವಿಸುತ್ತಿದ್ದು "ದೃಷ್ಟಚಂದ್ರಾ ಸಿನೀವಾಲೀ ನಷ್ಟಚಂದ್ರಕಲಾ ಕುಹೂಃ ।" ಎಂಬ ವ್ಯಾಸೋಕ್ತಿಯಂತೆ (ಪ್ರಾತಃಕಾಲದಲ್ಲಿ) ಚಂದ್ರಕಲೆಯಿಂ ಕೂಡಿರುವ ಅಮಾವಾಸ್ಯೆಯು ಸಿನೀವಾಲಿಯೆಂತಲೂ, ಚಂದ್ರಕಲೆಯು ತೋರ ದ್ದುದು ಕುಹೂ ಎಂತಲೂ ಬೇರೆ ಬೇರೆ ಸಂಕೇತವಿರುತ್ತದೆ. ಇಲ್ಲಿ ಕಲೆಯಿರುವು ಮತ್ತು ಇಲ್ಲದಿರುವುದೆಂಬ ಕಲಾಸ್ಥಿತಿಯಲ್ಲಿ ಭೇದವಿದ್ದಾಗ್ಯೂ ಅಮಾವಾಸ್ಯೆಯೆಂ ತಿಥಿಯು ಒಂದೇ ಆಗಿರುವುದರಿಂದ ತಿಥಿಯಲ್ಲಿ ಭೇದವಿರುವುದಿಲ್ಲ. ಇನ್ನು ಶುಕ್ಲ ಪಾಡ್ಯದಲ್ಲಿ (ಪ್ರಾಯಶಃ) ಚಂದ್ರದರ್ಶನವಾಗದಿರುವ ಸಂಭವವೇ ಹೆಚ್ಚಿರುತ್ತದೆ ಆದರಂತೆ ಅಮಾವಾಸ್ಯೆಯ (ದಿನಾಂತದ) ಲ್ಲಿಯೂ ಸಹ ಚಂದ್ರದರ್ಶನವಾಗು

ದಿಲ್ಲವೆಂಬುದು ಎಲ್ಲರಿಗೂ ತಿಳಿದ ಸಂಗತಿಯೇ ಸರಿ. ಇಲ್ಲಿ ಅಮಾವಾಸ್ಯೆ ಮತ್ತು ಶುಕ್ಲ ಪಾಡ್ಯವೆಂಬ ೨ ತಿಥಿಗಳು ಬೇರೆಬೇರೆಯಾಗಿದ್ದಾಗ್ಯೂ ಈ ಎರಡು ತಿಥಿಗಳ ಲ್ಲಿಯೂ (ಚಂದ್ರನು ತೋರದಿದ್ದಾಗ) ಚಂದ್ರಕಲೆಯ "ದರ್ಶನಾಭಾವ" (ತೋರದಿರುವಿಕೆ) ಎಂಬ ಲಕ್ಷಣವು ಒಂದೇ ಆಗಿರುತ್ತದೆ. ಇನ್ನು ಪೂರ್ಣಿಮೆಯಲ್ಲಿ ಸಹ ಪೂರ್ಣಕಲೆಯುಳ್ಳದ್ದು 'ರಾಕಾ' ಎಂದೂ, ನ್ಯೂನಕಲೆಯುಳ್ಳದ್ದು 'ಅನುಮತಿ' ಎಂದೂ ಎರಡು ವಿಧವಿದ್ದು ಅವೆರಡರಲ್ಲಿ ಕಲಾಪರಿಮಾಣಭೇದವಿದ್ದಾಗ್ಯೂ (ಪೂರ್ಣಿಮೆಯೆಂಬ) ತಿಥಿಯು ಒಂದೇ ಆಗಿರುತ್ತದೆ. ಮತ್ತು, ಪ್ರತ್ಯಕ್ಷವಾಗಿ ತೋರುವ ಚಂದ್ರದರ್ಶನವು ಸಂದರ್ಭಾನುಸಾರವಾಗಿ ಶುಕ್ಲಪಕ್ಷದ ಪಾಡ್ಯದ ದಿವಸವಾಗಲಿ,ಬಿದಿಗೆಯ ದಿವಸವಾಗಲಿ ಸಂಭವಿಸುತ್ತಿರುವುದರಿಂದ ಅದಷ್ಟರಿಂದಲೇ (ಅಂದರೆ ಕೇವಲ ಚಂದ್ರದರ್ಶನಮಾತ್ರದಿಂದ ಅವೆರಡು ತಿಥಿಗಳ ಪೈಕಿ) ಆ ದಿನದ ತಿಥಿಯು ಯಾವುದೆಂಬುದನ್ನು ನಿರ್ಣಯಿಸಲಿಕ್ಕೆ ಶಕ್ಯವಿಲ್ಲ. ಹೀಗೆ ಕೆಲವು ಸಂದರ್ಭದಲ್ಲಿ ಚಂದ್ರಕಲೆಯ ಭೇದವಿದ್ದರೂ ತಿಥಿಯು (ನಿಯತವಾಗಿ) ಒಂದೇ ಆಗಿರುವುದರಿಂದಲೂ, ಕೆಲವು ಸಮಯ ತಿಥಿಯ ಭೇದವಿದ್ದರೂ ಕಲಾಭೇದವು ತೋರುವುದಿಲ್ಲವಾದುದರಿಂದಲೂ ಸಹ ಪ್ರತ್ಯಕ್ಷತೋರುವ ಚಂದ್ರಕಲೆ ಮತ್ತು (ಕರ್ಮಾರ್ಹವಾದ) ತಿಥಿಗಳಲ್ಲಿ ಪರಸ್ಪರ ಸಮನ್ವಯವಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಇಷ್ಟೇ ಅಲ್ಲ, ಕೇವಲ ಚಂದ್ರಕಲೆಯನ್ನು ನೋಡಿ ಪ್ರತಿಯೊಂದು ತಿಥಿಯನ್ನು ಸಾದ್ಯಂತವಾಗಿ ತಿಳಿದುಕೊಳ್ಳುವುದು ಯಾರಿಗೂ ಶಕ್ಯವಿಲ್ಲ. ಈ ವಿಚಾರಗಳಿಂದೆಲ್ಲ ಪ್ರತ್ಯಕ್ಷ ತೋರುವ ಚಂದ್ರಕಲೆಯೇ ತಿಥಿಯಲ್ಲವೆಂದೂ, ಚಂದ್ರಕಲೆಯನ್ನು ನೋಡಿ ತಿಥಿಯನ್ನು ನಿರ್ಣಯಿಸಲಿಕ್ಕಾಗುವುದಿಲ್ಲವೆಂದೂ, ಮತ್ತು ಚಂದ್ರಕಲಾಪ್ರತ್ಯಕ್ಷದಿಂದ ತಿಥಿಯು ಪ್ರತ್ಯಕ್ಷವೆಂತಾಗುವುದಿಲ್ಲವೆಂದೂ ಸಿದ್ಧವಾಗುತ್ತದೆ.

(೨) ಇನ್ನು ಸೂರ್ಯಚಂದ್ರಾಂತರವೇ ತಿಥಿಯೆನ್ನುವ ಕಲ್ಪನೆಯಲ್ಲಿಯೂ ಸಹ- ಅಂತಹ ಅಂತರಾತ್ಮಕವಾದ ತಿಥಿಯನ್ನು ಕೇವಲ ಪ್ರತ್ಯಕ್ಷದಿಂದ ತಿಳಿದುಕೊಳ್ಳುವುದು ಅಸಾಧ್ಯವೇ ಸರಿ. ಯಾಕಂದರೆ— ಮೂಲತಃ ಅಂತರವೆಂಬುದೊಂದು ಸ್ವತಂತ್ರವಸ್ತುವಿರದೆ ಸಾಪೇಕ್ಷಶಬ್ದವಾಗಿದ್ದು ಅದು ಎರಡು ವಿಷಯಗಳನ್ನು ಅವಲಂಬಿಸಿರುತ್ತದೆ. ಅದು ಸಂಬಂಧಿಸಿರುವ ವಿಷಯಗಳಲ್ಲಿ ಯಾವುದೇ ಒಂದನ್ನು ತಿಳಿಯದಿದ್ದರೂ ಅವುಗಳ ಅಂತರವು ಸಹ ತಿಳಿಯುವುದಿಲ್ಲವಾದುದರಿಂದ ವಿಷಯಗಳನ್ನು ಬಿಟ್ಟು (ಅವುಗಳ) ಅಂತರವು ಮಾತ್ರವೇ ಹೇಗೂ ಪ್ರತ್ಯಕ್ಷವಾಗುವುದಿಲ್ಲ. ಆದ ಕಾರಣ ಸೂರ್ಯ-ಚಂದ್ರರ ಅಂತರವೆಂದು ಕಲ್ಪಿಸುವ ತಿಥಿಯನ್ನು ತಿಳಿಯಬೇಕಾದಾಗ ಮೊದಲು ಸೂರ್ಯ-ಚಂದ್ರರ ಸ್ಥಾನವನ್ನೂ, ಮತ್ತು ಅದು ಯಾವ ತಿಥಿಯೆಂದು ತಿಳಿಯುವ ಬಗ್ಗೆ ಪ್ರತಿಯೊಂದು ತಿಥಿಯ ಆದ್ಯಂತಸ್ಥಾನಗಳನ್ನು ಸಹ ಪ್ರತ್ಯಕ್ಷವಾಗಿ ತಿಳಿದಿರಬೇಕಾಗುತ್ತದೆ. ಆಯಾ

ತಿಥಿಯ ಆದ್ಯಂತಗಳಲ್ಲಿ ಸೂರ್ಯಚಂದ್ರಾಂತರವು ಎಷ್ಟಿರಬೇಕೆಂದು ತಿಳಿದಿದ್ದ
ಆ ಅಂತರವು ರಾಶಿಚಕ್ರದ ಇಂತಹ ಸ್ಥಾನದಲ್ಲಿಯೇ ಇರಬೇಕೆಂಬ ನಿಯ
ವೇನೂ ಇಲ್ಲವಾದುದರಿಂದ ಅಂದರೆ— ಖಗೋಲದಲ್ಲಿ ಆಯಾ ತಿಥಿಯ ಆದ್ಯಂ
ವನ್ನು ಗುರುತಿಸತಕ್ಕ ಯಾವುದೊಂದು ಪದಾರ್ಥವೂ ಸ್ಥಿರ ( ನಿಯತ ) ವಾಗಿಲ್ಲ
ಕಾರಣ ಆ ಸ್ಥಾನವನ್ನು ಪ್ರತ್ಯಕ್ಷದಿಂದ ತಿಳಿಯಲಿಕ್ಕಾಗುವುದಿಲ್ಲ. ಸೂರ್ಯ-
ಚಂದ್ರರನ್ನೇ ನೋಡಿ ಅದನ್ನು ತಿಳಿದುಕೊಳ್ಳಬಹುದೆಂದರೆ— ಹಾಗೆ ನೋ
ವಾಗ ಅವರು ತಿಥಿಯ ಆದ್ಯಂತಸ್ಥಾನಗಳಲ್ಲಿಯೇ ಇರುತ್ತಾರೆಂಬ ನಿಯಮವಿಲ್ಲ
ಬೇರೆ ಕಡೆಗಳಲ್ಲಿಯೂ ಇರಬಹುದಾದ ಕಾರಣ ಆದರಿಂದಲೂ ಆ ಸ್ಥಾನ
ನಿಶ್ಚಯವಾಗುವುದಿಲ್ಲ. ನಿರಂತರವಾಗಿ ಸೂರ್ಯ-ಚಂದ್ರರ ಸ್ಥಾನವನ್ನು ನಿರೀ
ಸುತ್ತಿದ್ದರೆ ಅದು ಪ್ರತ್ಯಕ್ಷವಾಗುವುದೆಂದು ಕಲ್ಪಿಸುವುದಾದರೆ ಅದೂ ಸರಿಯಾಗ
ಯಾಕಂದರೆ-- ವಸ್ತುತಃ ಸೂರ್ಯ-ಚಂದ್ರರ ಸ್ಥಾನವು ಬೇರೆ ಬೇರೆ ಕಕ್ಷೆಗ
ಳಲ್ಲಿದ್ದು ಅವೆರಡರ ಪಾತ (ಸಂಧಿ) ಗಳೂ, ಆ ಸೂರ್ಯ-ಚಂದ್ರರ ಸ್ಥಾನವೂ ಕ್ಷ
ಕ್ಷಣೇ ಕ್ಷಣೇ ಬೇರಾಗುತ್ತಿರುವುದರಿಂದ ನಿರಂತರವೂ ಚಲಿಸುತ್ತಲೇ ಇರು
ಆ ಎರಡೂ ಸ್ಥಾನಗಳನ್ನು ಯಾರೊಬ್ಬರು - ನಿರಂತರವಾಗಿ - ನಿರೀಕ್ಷಿಸು
ದಾದರೂ ಹೇಗೆ? ಒಂದು ವೇಳೆ ಹಾಗೆ ನಿರೀಕ್ಷಿಸಲಿಕ್ಕೆ ಬರುವುದೆಂದು ಕಲ್ಪಿ
ಕೊಂಡರೂ ಅದರಿಂದ ತಿಳಿಯುವುದೆನ್ನುವ ಅಂತರವು ' ತಿಥಿ ' ಎಂದು ಕಲ್ಪಿಸು
ಅಂತರವಾಗಿರುವುದಿಲ್ಲವೆಂಬುದು ಮುಂದೆ ಕಾಣಿಸಿರುವ ವಿಷಯಗಳಿಂದ ಸ್ಪಷ್ಟವಾ
ಗುವುದರಿಂದ ತಿಥಿಯ ಆದ್ಯಂತವು ಆದರಿಂದಲೂ ಪ್ರತ್ಯಕ್ಷವಾಗುವುದಿಲ್ಲ. ಹೀ
ಆದ್ಯಂತವು ಪ್ರತ್ಯಕ್ಷವಾಗದಿದ್ದ ಪದಾರ್ಥವು ಪ್ರತ್ಯಕ್ಷವೆನ್ನುವುದು ಕೂಡುವುದಿಲ್ಲ
ಇನ್ನು ತಿಥಿಯ ಆದ್ಯಂತವು ಪ್ರತ್ಯಕ್ಷವಾಗದಿದ್ದರೂ ಆಯಾ ತಿಥಿಯ ಅಂಶ
ಸೂರ್ಯ-ಚಂದ್ರಾಂತರದಿಂದ ಪ್ರತ್ಯಕ್ಷವಾಗುವದೆನ್ನುವುದಾದರೆ ಅದು ಕೂಡ ವ್ಯರ್ಥ
ವೇ ಸರಿ. ಹೇಗಂದರೆ— ಮೂಲತಃ ಯಾವುದೊಂದು ಪದಾರ್ಥದ ಆದ್ಯಂತಗಳನ್ನು
ತಿಳಿದ ಹೊರತು ಅದನ್ನು ಸಾಕಲ್ಯವಾಗಿ ತಿಳಿದಂತಾಗುವುದಿಲ್ಲ. ಮೇಲಾ
ರಾತ್ರಿಕಾಲದಲ್ಲಿ ಸೂರ್ಯನೂ, ಚಂದ್ರಾಸ್ತದನಂತರ ಚಂದ್ರೋದಯದ ವರೆ
ಚಂದ್ರನೂ ತೋರದಿರುವ ಕಾರಣ ಅಂಥ ಕಾಲದಲ್ಲಿ ಸೂರ್ಯಚಂದ್ರಾಂತರ
ಹೇಗೂ ಪ್ರತ್ಯಕ್ಷವಾಗುವುದಿಲ್ಲ. ಮತ್ತು ಹಿಂದೆ ನಾವು ಕಲಾತ್ಮಕ ತಿಥಿಯ
ವಿಷಯವಾಗಿ ಹೇಳಿರುವಂತೆ ಕೃಷ್ಣತ್ರಯೋದಶಿಯ ನಂತರ ಶುಕ್ಲ ತದಿಗೆಯ
ವರೆಗೆ ಹಗಲಿನಲ್ಲಿ ಚಂದ್ರನನ್ನು ನೋಡುವುದು ದುಃಸಾಧ್ಯವಾಗುವುದರಿಂ
ಆಗ ಸಹ ಅಂತರವು ಪ್ರತ್ಯಕ್ಷವಾಗುವುದಿಲ್ಲ. ಇನ್ನು ಹಗಲಿನಲ್ಲಿ- ಚಂದ್ರನ
ತೋರುತ್ತಿರುವ ಕಾಲದಲ್ಲಿ- ಸೂರ್ಯಚಂದ್ರಾಂತರವನ್ನು ನೋಡಬಹುದೆಂದರೂ
ನಾವು ಹಿಂದೆ ಪುಟ ೩.೭ರಲ್ಲಿ ಕಾಣಿಸಿರುವಂತೆ ವರ್ತುಲಖಂಡರೂಪವಾದ ಆ
ಅಂತರದ ಅಂಶವನ್ನು ಬರಿಗಣ್ಣಿನಿಂದ ತಿಳಿಯಲಿಕ್ಕಾಗುವುದಿಲ್ಲ. ಆದರೆ ಸೂರ್ಯ-
ಚಂದ್ರಾಂತರವನ್ನು ನೋಡುವ ಮಾತ್ರದಿಂದ ಆಯಾ ತಿಥಿಯ ಅಂಶಗಳನ್ನು

ಕೇವಲ ಪ್ರತ್ಯಕ್ಷದಿಂದಲೇ ಪ್ರತ್ಯೇಕಿಸಿ ತಿಳಿಯಲಿಕ್ಕಾಗುವುದಿಲ್ಲ. ಷಷ್ಠ್ಯಂಶಯಂತ್ರಾದಿಗಳ ಮೂಲಕ ತಿಳಿಯುವುದೆಂದರೆ ಅದು ಕೇವಲ ಪ್ರತ್ಯಕ್ಷವಾಗಿರದೆ ಸೋಪಾಧಿಕವಾಗಿರುವುದು.* ಅಂತಹ ಉಪಾಧಿಗಳಿಂದ ತಿಳಿಯುವುದೆನ್ನುವುದಾದರೂ ಅದು ಸೂರ್ಯಕಕ್ಷೆ, ಚಂದ್ರಕಕ್ಷೆ, ದೃಕ್‌ಕ್ಷೇಪವೃತ್ತ ಮುಂತಾದ ಯಾವುದೇ ಒಂದು ವೃತ್ತಕ್ಕೂ ನಿಯತವಾಗಿ ಸಂಬಂಧಿಸಿಕೊಂಡಿರದ ಕೇವಲ ಗೋಲೀಯ ಕರ್ಣರೂಪವಾದ ಅಂತರವಾಗಿದ್ದು, ಅಂತಹ ಪ್ರತ್ಯಕ್ಷಸಿದ್ಧ ಸೂರ್ಯ-ಚಂದ್ರಾಂತರವು ತಿಥಿಯೆಂದು ಕಲ್ಪಿಸುವ ಅಂತರವಾಗಿರುವುದಿಲ್ಲ. ಅದೇ ತಿಥಿಯೆನ್ನುವುದಾದರೆ—ಅಂತಹ ಅಂತರವು ಒಂದಾನೊಂದು ಸಂಪೂರ್ಣವಾದ ಅಥವಾ ಕಂಕಣಾಕಾರವಾದ ಸೂರ್ಯಗ್ರಹಣದ ಮಧ್ಯಕಾಲದಲ್ಲಿ ಮಾತ್ರವೇ ಹೊರತು ಬೇರೆ ಯಾವ ಕಾಲದಲ್ಲಿಯೂ ಶೂನ್ಯವಾಗುವುದಿಲ್ಲವಾದುದರಿಂದ ಅಷ್ಟರ ವರೆಗೆ (ಅಂದರೆ ಸಾಮಾನ್ಯವಾಗಿ ಪ್ರತಿ ಮಾಸದಲ್ಲಿಯೂ ಸಂಭವಿಸತಕ್ಕ)ಅಮಾವಾಸ್ಯೆಯ ಅಂತ್ಯವು ಸಂಭವಿಸುವುದೇ ಇಲ್ಲವೆಂದು ಹೇಳಬೇಕಾದೀತು. ಯಾಕಂದರೆ ಅಂತರವು ಶೂನ್ಯವಾದಾಗ ದರ್ಶಾಂತವಾಗುವುದು ಅಂತರಾತ್ಮಕವೆಂದು ಕಲ್ಪಿಸುವ ತಿಥಿಯ ಲಕ್ಷಣವಾಗಿದ್ದು ಅಂತಹ ಶೂನ್ಯಸ್ಥಿತಿಯು ಘಟಿಸದಿದ್ದಾಗ ಅಮಾಂತವೂ ಆಗಲಿಲ್ಲವೆಂದು ಕಲ್ಪಿಸಬೇಕಾಗುತ್ತದೆ. ಅಮಾಂತವಾಗದೆ ( ಚಾಂದ್ರ ) ಮಾಸಾಂತವೂ, ಮಾಸಾಂತವಾಗದೆ ವತ್ಸರಾಂತವೂ ಸಂಭವಿಸಲಿಕ್ಕೆ ಶಕ್ಯವಿಲ್ಲವಾದ ಕಾರಣ ಅವು ಸಹ ಸಂಭವಿಸುವುದಿಲ್ಲವೆಂಬ ಅತಿಕಲ್ಪನೆಗಳಿಗೆಲ್ಲ ಇದರಿಂದ ಅವಕಾಶವಾಗುವುದರಿಂದ ಯಂತ್ರಸಾಧನದಿಂದಾದರೂ ಸೂಕ್ಷ್ಮವಾಗಿ ಪ್ರತ್ಯಕ್ಷದಿಂದ ತಿಳಿಯಬಹುದೆನ್ನುವ ಕೇವಲ ಸೂರ್ಯ-ಚಂದ್ರಾಂತರವು ತಿಥಿಯೆಂದು ಕಲ್ಪಿಸಲ್ಪಡತಕ್ಕದ್ದಲ್ಲವೆಂದು ಸರ್ವರೂ ಒಪ್ಪತಕ್ಕದ್ದೇ ಆಗಿದೆ. ಎಂದಾದರೊಮ್ಮೆ ಹಿಂದೆ ಹೇಳಿದ ಸೂರ್ಯ-ಚಂದ್ರಾದಿ ಕಕ್ಷೆಗಳ ಪೈಕಿ ಯಾವುದೊಂದು ನಿಯತವೃತ್ತದಲ್ಲಿ ಸೂರ್ಯ-ಚಂದ್ರಾಂತರವು ಸಂಭವಿಸಬಹುದಾಗಿದ್ದರೂ ಪ್ರತ್ಯಕ್ಷವಾಗಿ ತೋರುವುದೆಲ್ಲ ಯಾವಾಗಲೂ ಭೂಪೃಷ್ಠದಲ್ಲಿಯೇ ಆಗಿರುವುದರಿಂದ ಆಗ ತೋರುವ ಅಂತರವು ಸಹ 'ತಿಥಿ' ಎಂದು ಕಲ್ಪಿಸುವ ಅಂತರವಾಗಿರುವುದಿಲ್ಲ. ಮತ್ತು ಅದು ಪಾರಮಾರ್ಥಿಕ(ಕರ್ಮಯೋಗ್ಯ)

---

* ಕೇವಲ ಯಂತ್ರಾದಿಗಳ ಮೂಲಕವೇ ತಿಳಿಯತಕ್ಕ ವಿಷಯವು ಸೋಪಾಧಿಕವೆನಿಸುವುದು. ಇಂತಹ ಪ್ರತ್ಯಕ್ಷವು ಕರ್ಮಾಚರಣೆಗೆ ಪ್ರಮಾಣವಾಗುವುದಿಲ್ಲ. ಹೇಗೆಂದರೆ:— ಶಾಸ್ತ್ರತಃ ವಿಶಿಷ್ಟಕರ್ಮಗಳಿಗೆ ನಿಷಿದ್ಧವಾಗಿರುವ ಗುರು, ಶುಕ್ರಾದಿಗ್ರಹರ ಅಸ್ತಕಾಲದಲ್ಲಿಯೂ ಸಹ ಯಂತ್ರದ ಮೂಲಕ ಆಯಾ (ಅಸ್ತ) ಗ್ರಹರನ್ನು ನೋಡಲಿಕ್ಕಾಗುತ್ತದೆ. ಆದರೆ ಅದರಿಂದ ಅಂಥ ( ಅಸ್ತ ) ಕಾಲವು ನಿಷಿದ್ಧವಲ್ಲವೆಂದು ಸಿದ್ಧವಾಗುವುದಿಲ್ಲ. ಈ ವರೆಗೆ ಯಾರೂ (ವಿಪಕ್ಷಿಗಳು ಸಹ) ಹಾಗೆ ವಾದಿಸಲೂ ಇಲ್ಲ. ಆದ್ದರಿಂದ ಸೋಪಾಧಿಕಪ್ರತ್ಯಕ್ಷವು ಕರ್ಮಾಚರಣೆಗೆ ಬದ್ಧ (ವಿಹಿತ) ವಾದುದಲ್ಲವೆಂದು ಎಲ್ಲರೂ ಒಪ್ಪತಕ್ಕದ್ದಾಗಿದೆ.

ವಾದ ಸ್ಥಿತಿಯೂ ಅಲ್ಲವೆಂಬುದನ್ನು ವಿಪಕ್ಷಿಗಳು ಸಹ ಒಪ್ಪಿರುವುದರಿಂದ* ವಿಷಯದಲ್ಲಿ ವಿವಾದವೂ ಇರುವುದಿಲ್ಲ. ಇನ್ನು ಅಂತರಾತ್ಮಕವಾದ ತಿಥಿ ಭೂಗರ್ಭದ ಕೇಂದ್ರದಲ್ಲಿ ಪ್ರತ್ಯಕ್ಷವಾಗುತ್ತದೆಂದು ಕಲ್ಪಿಸುವುದಾದರೆ ಅದು ಸ ಸರಿಯಾಗುವುದಿಲ್ಲ. ಯಾಕಂದರೆ— ಭೂಗರ್ಭದ ಕೇಂದ್ರವೆಂಬುದೊಂದು ಆಗ ಸ್ಥಾನವನ್ನು ಆಧಾರ ಮಾಡಿಕೊಂಡ ಮಾತ್ರದಿಂದ ಅಲ್ಲಿಯೂ ಕೂಡ ಚಂದ್ರ ಮುಂತಾದ ಕಾರಣದಿಂದ ಸೂರ್ಯ-ಚಂದ್ರಾಂತರವು ಹಿಂದೆ ಹೇಳಿದಂತೆ ಗೋ ಯ ಕರ್ಣರೂಪವಾಗುವ ಸ್ಥಿತಿಯು ಮಾಯವಾಗುವುದಿಲ್ಲವೆಂದು ಉಪಪತ್ತಿ ದಲೇ ಸಿದ್ಧವಾಗುತ್ತದೆ. ಆ ಅಂತರವೇ ತಿಥಿಯೆಂದು ಕಲ್ಪಿಸಿಕೊಂಡಲ್ಲಿ ಪ್ರ ಮಾಸದಲ್ಲಿ ದರ್ಶಾಂತವೇ ಸಂಭವಿಸದೆ ಅನೇಕ ವಿಪರೀತ ಕಲ್ಪನೆಗಳಿಗೆ ಅವಕಾ ವಾಗುವುದೆಂದೂ, ಆದ್ದರಿಂದ ಅದು ತಿಥಿಯೆಂದು ಕಲ್ಪಿಸತಕ್ಕ ಅಂತರವಲ್ಲವೆಂ ಹಿಂದೆ ಸಕಾರಣವಾಗಿ ವಿವರಿಸಿದೆ. ಅಷ್ಟೇ ಮಾತ್ರವಲ್ಲ; ಮೂಲತಃ ಭೂಕೇಂದ್ರ ಲ್ಲಿ ಪ್ರತ್ಯಕ್ಷವೆನ್ನುವ ಈ ವಿಷಯವೇ 'ಆಕಾಶಕುಸುಮ'ದಂತೆ ಸರ್ವಥಾ ಅಸಂಭ ನೀಯವಾಗಿರುವುದು. ಅಂದರೆ ಈ ವರೆಗೆ ಯಾರೊಬ್ಬರೂ ಭೂಗರ್ಭದ ಕೇಂದ್ರ ಲ್ಲಿದ್ದು ತಿಥಿಯನ್ನು ಪ್ರತ್ಯಕ್ಷವಾಗಿ ನೋಡಿದವರಿಲ್ಲ; ಹಾಗೆ ವಾದಿಸುವವರಾದ ಆ ಪ್ರಕಾರ ತಿಥಿಯನ್ನು ಪ್ರತ್ಯಕ್ಷೀಕರಿಸಿಕೊಂಡವರಲ್ಲ; ಇನ್ನು ಮುಂದೆಯೂ ಸ ಯಾರೊಬ್ಬರಿಗೂ ಹಾಗೆ ಭೂಗರ್ಭದ ಕೇಂದ್ರದಲ್ಲಿ ನಿಂತು ತಿಥಿಯನ್ನು ಪ್ರತ್ಯ ವಾಗಿ ನೋಡಲಿಕ್ಕೆ ಶಕ್ಯವೂ ಇಲ್ಲ. ಆದುದರಿಂದ ಭೂಗರ್ಭದ ಕೇಂದ್ರ ಪ್ರತ್ಯಕ್ಷವಾಗುವುದೆಂಬ ಈ ಕಲ್ಪನೆಯಿಂದಲೂ ಸಹ ತಿಥಿಯ ಪ್ರತ್ಯಕ್ಷತೆ ಸಿದ್ಧವಾಗುವುದಿಲ್ಲ. ಈ ಮುಂತಾದ ಹಲವು ಕಾರಣಗಳಿಂದ ಪ್ರತ್ಯಕ್ಷವಾ ತಿಳಿಯಬಹುದೆಂದು ಕಲ್ಪಿಸುವ ಸೂರ್ಯ-ಚಂದ್ರಾಂತರಕ್ಕೂ ತಿಥಿಯ ಪ್ರಭೇ ಕ್ಕೂ ಸಮನ್ವಯವಿಲ್ಲವೆಂಬುದು ಸ್ಪಷ್ಟವಾಗುತ್ತಿದ್ದು ಇವುಗಳಿಂದೆಲ್ಲ ಪ್ರತ್ಯ ವೆಂದು ಹೇಳುವ ಸೂರ್ಯ-ಚಂದ್ರಾಂತರವೇ ತಿಥಿಯಲ್ಲವೆಂದೂ, ಸೂರ್ಯ-ಚಂದ್ರಾಂತರದ ಪ್ರತ್ಯಕ್ಷದಿಂದ ತಿಥಿಯ ಪ್ರತ್ಯಕ್ಷತೆಯು ಸಿದ್ಧವಾಗುವುದಿಲ್ಲವೆಂದು ಸಿದ್ಧಾಂತವಾಗುತ್ತದೆ.

---

* ಕಳೆದ ವೃಷ ಸಂ॥ದ ಬಗ್ಗೋಣಪಂಚಾಂಗದ ಪ್ರಸ್ತಾವನೆಯಲ್ಲಿ ಇದು ಸ್ಪಷ್ಟವಾ ದೆ. ಪರಂತು ಅದರಲ್ಲಿ "ದಿನಕ್ಕೊಮ್ಮೆ ಗ್ರಹನು ಯಾಮ್ಯೋತ್ತರವೃತ್ತಕ್ಕೆ ಬಂದಾಗ ಭೂಪೃಷ್ಠ ಲ್ಲಿರುವವರಿಗೆ ಭೂಮಧ್ಯದೃಶ್ಯಸ್ಥಿತಿಯು ಯಥಾಸ್ಥಿತವಾಗಿ ತೋರುತ್ತದೆ"ಂತ ಹೇಳಿದ್ದು ತಪ್ಪು ಕಲ್ಪನೆಯೆಂಬುದನ್ನು ಹಿಂದೆ ಪುಟ ೪೪-೪೫ರಲ್ಲಿಯೇ ಸ್ಪಷ್ಟಪಡಿಸಿರುವೆವು. 'ಭೂಪೃಷ್ಠದೃಶ್ಯಸ್ಥಿತಿ ಲಂಬನವನ್ನು (ಮಾತ್ರ) ವಿಲೋಮವಾಗಿ ಸಂಸ್ಕರಿಸಿದರೆ ಭೂಮಧ್ಯದೃಶ್ಯಸ್ಥಿತಿಯು ತಿಳಿಯುತ್ತ ಎನ್ನುವುದೂ ಸರಿಯಾದ ಕಲ್ಪನೆಯಲ್ಲ. ಮತ್ತು ಹಾಗೆ ಪ್ರಕಾರಾಂತರದಿಂದ ಸಾಧಿಸಿದ ಸ್ಥಿತಿ ಪ್ರತ್ಯಕ್ಷಸಿದ್ಧವೆನ್ನುವುದೂ ಯುಕ್ತವಲ್ಲವೆಂದು ತಜ್ಞರಿಗೆಲ್ಲ ತಿಳಿದಿರತಕ್ಕದ್ದೇ ಸರಿ. ತಿಥಿ ಸಾಧನೆಯಲ್ಲಿ ಸ್ವೀಕರಿಸಲ್ಪಡತಕ್ಕ ರವಿ-ಚಂದ್ರರು ಭೂಮಧ್ಯದೃಶ್ಯರಾಗಿಯೇ ಇರಬೇಕೆಂ ಸಿದ್ಧಾಂತಪಕ್ಷದ ನಿಯಮವಿಲ್ಲವಾದ್ದರಿಂದ ಆ ಬಗ್ಗೆ ಆ ಪ್ರಸ್ತಾವನೆಯ ಅಂತ್ಯಭಾಗದಲ್ಲಿ ಬರೆದಿ ದೆಲ್ಲ ಸಿದ್ಧಾಂತಪಕ್ಷಕ್ಕೆ ಸಂಬಂಧಪಡುವುದಿಲ್ಲವೆಂಬುದನ್ನು ವಾಚಕರು ತಿಳಿದಿರತಕ್ಕದ್ದು.

( ೩ ) ಇನ್ನು ತಿಥಿಯು ಕಾಲಸ್ವರೂಪವಾಗಿರುವದೆನ್ನುವಲ್ಲಿ- ಅದು ಪ್ರತ್ಯಕ್ಷ (ಇಂದ್ರಿಯಗಳಿಗೆ ಗೋಚರ)ವಾಗತಕ್ಕದ್ದಲ್ಲವೆಂದು ಬೇರೆ ಹೇಳಬೇಕಾಗಿಲ್ಲ. ಯಾಕೆಂದರೆ— ಇಂದ್ರಿಯಗಳಿಂದ ತಿಳಿಯಲ್ಪಡತಕ್ಕ ಶಬ್ದ-ಸ್ಪರ್ಶಾದಿ ಯಾವುದೊಂದು ಗುಣವೂ ಕಾಲದಲ್ಲಿಲ್ಲ. ಆದಕಾರಣ ಕಾಲವು ಯಾವ ಇಂದ್ರಿಯಕ್ಕೂ ಗೋಚರಿಸತಕ್ಕದ್ದಲ್ಲವೆಂಬುದು ಸರ್ವಸಮ್ಮತವಾಗಿದೆ. ಕಾಲಮಾಧವದಲ್ಲಿಯೂ ಸಹ- "ನಚಾಽಸೌ ಬಾಹ್ಯೇಂದ್ರಿಯಕೃತಃ। ಕಾಲಸ್ಯ ರೂಪಾದಿಹೀನತ್ವಾತ್" ಅಂದರೆ- ಕಾಲವು ರೂಪಾದಿ(ಗುಣ) ಗಳಿಲ್ಲದ್ದಾದುದರಿಂದ ಅದು ಬಾಹ್ಯೇಂದ್ರಿಯಗಳಿಗೆ ಪ್ರತ್ಯಕ್ಷವಾಗತಕ್ಕದ್ದಲ್ಲವೆಂದು ಸ್ಪಷ್ಟವಾಗಿ ಹೇಳಿದೆ. ಇವರಿಂದ ಕಾಲಸ್ವರೂಪವಾದ ತಿಥಿಯಾದರೂ ಪ್ರತ್ಯಕ್ಷವಲ್ಲವೆಂದೂ, ಆದ್ದರಿಂದಲೇ ಪ್ರತ್ಯಕ್ಷದಿಂದ ಅದರ ನಿರ್ಣಯವಾಗುವುದಿಲ್ಲವೆಂದೂ ಸ್ವಯಂ ಸಿದ್ಧವಾಗುವುದು.

ಹೀಗೆ ತಿಥಿಯು ಚಂದ್ರನ ಕಲಾಸ್ವರೂಪವೆಂತಾಗಲಿ, ಸೂರ್ಯ-ಚಂದ್ರರ ಅಂತರರೂಪವೆಂತಾಗಲಿ, ಕ್ಷಣ-ಮುಹೂರ್ತಾದಿ ಕಾಲರೂಪವೆಂತಾಗಲಿ ಯಾವ ವಿಧವಾಗಿ ಕಲ್ಪಿಸಿಕೊಂಡರೂ ಅದು ಸರ್ವಥಾ ಪ್ರತ್ಯಕ್ಷವಾಗತಕ್ಕದ್ದಲ್ಲವೆಂದೇ ಸಿದ್ಧವಾಗುತ್ತದೆ. ಮತ್ತು ಇದರಿಂದ ತಿಥ್ಯರ್ಧರೂಪವಾದ 'ಕರಣ'ವು ಸಹ ಪ್ರತ್ಯಕ್ಷವಲ್ಲವೆಂಬುದು ತಾನಾಗಿ ಸಿದ್ಧವಾಗುವುದರಿಂದ ಅದನ್ನು ಪ್ರತ್ಯೇಕವಾಗಿ ಸಿದ್ಧಪಡಿಸಬೇಕಾಗಿಲ್ಲ. 'ಯೋಗ'ವೆಂಬುದಂತೂ ಕೇವಲ ಸಂಖ್ಯಾಮಾತ್ರವಾಗಿ ತಿಳಿಯಲ್ಪಡತಕ್ಕದ್ದಾಗಿದ್ದು ಅದಕ್ಕೊಂದು ದೃಶ್ಯವೆಂದು ಕಲ್ಪಿಸಬಹುದಾದ ಸ್ಥಾನವೇ ಖಗೋಲದಲ್ಲಿ ಇಲ್ಲದಿರುವಾಗ ಅದು ಪ್ರತ್ಯಕ್ಷವೆನ್ನುವ ಕಲ್ಪನೆಗೂ ಸಹ ಅವಕಾಶವಿಲ್ಲದಿರುವುದರಿಂದ ಅದು ಸಹ ಪ್ರತ್ಯಕ್ಷವಲ್ಲವೆಂಬುದನ್ನು ಬೇರೆ ವಿವರಿಸಬೇಕಾಗಿಲ್ಲ. ಇನ್ನುಳಿದ 'ವಾರ'-'ನಕ್ಷತ್ರ'ಗಳು ಸಹ ಕೇವಲ ಪ್ರತ್ಯಕ್ಷದಿಂದ ಸಿದ್ಧವಾಗತಕ್ಕವುಗಳಲ್ಲವೆಂಬುದನ್ನು ಹಿಂದೆಯೇ ಪುಟ ೩೩—೩೬ರಲ್ಲಿ ಸ್ಪಷ್ಟವಾಗಿ ವಿವರಿಸಿರುವೆವು. ಮತ್ತು ( ನಿತ್ಯ ) ನಕ್ಷತ್ರವು ಚಂದ್ರನಿಗೆ ಲಂಬನವೇನೂ ಇಲ್ಲದಿದ್ದಾಗ- ಅಂದರೆ ತ್ರಿಭೋನಲಗ್ನಸ್ಥಾನದಲ್ಲಿ ಚಂದ್ರನು ಬಂದಾಗ ಪ್ರತ್ಯಕ್ಷವಾಗುತ್ತದೆಂದು ಕಲ್ಪಿಸುವುದಾದರೂ ಆ ತ್ರಿಭೋನಲಗ್ನದ ಸ್ಥಾನವು ಪ್ರತ್ಯಕ್ಷದಮೂಲಕ ತಿಳಿಯತಕ್ಕದ್ದಲ್ಲವಾದುದರಿಂದ ಆ ಕಲ್ಪನೆಯು ಕೂಡ ವ್ಯರ್ಥವೇ ಸರಿ, ಎಂಬುದನ್ನೂ ಅಲ್ಲಿಯೇ ಸೂಚಿಸಿರುವೆವು.

ಇದಲ್ಲದೆ ರಾಶಿಚಕ್ರದ ಆರಂಭಸ್ಥಾನದಿಂದ ಚಂದ್ರನ ವರೆಗೆ ಇರತಕ್ಕ ಅಂತರವೇ ಚಂದ್ರಸ್ಫುಟವೆಂದೂ, ಅದು ಪ್ರತ್ಯಕ್ಷವಾಗುತ್ತದೆಂದೂ, ತನ್ಮೂಲಕ ನಕ್ಷತ್ರವಾದರೂ ಪ್ರತ್ಯಕ್ಷವೇ ಆಗಿರುತ್ತದೆಂದೂ ಹೇಳುವುದಾದರೆ— ಇದು ಸಹ ಸರಿಯಾದುದಲ್ಲ. ಯಾಕೆಂದರೆ— ಆರಂಭಸ್ಥಾನವೂ, ಚಂದ್ರನೂ ಬೇರೆ ಬೇರೆ ಸ್ಥಾನಗಳಲ್ಲಿ ಇರುವ ಕಾರಣ ಅವೆರಡರ ಮಧ್ಯದಲ್ಲಿ ದೃಶ್ಯವಾಗುವ ಅಂತರವೇ ಚಂದ್ರಸ್ಫುಟವಾಗಿರುವುದಿಲ್ಲ. ಅದನ್ನೇ ಚಂದ್ರಸ್ಫುಟವೆಂದು ಕಲ್ಪಿಸಿಕೊಂಡರೆ

ಹಿಂದೆ ನಾವು ಅಂತರಾತ್ಮಕ ತಿಥಿಯ ವಿಷಯವಾಗಿ ಕಾಣಿಸಿರುವಂಥ ಹಲವು ತರದ ಬಾಧಕಗಳು ಈ ವಿಷಯದಲ್ಲಿಯೂ ಸಂಭವಿಸುತ್ತವೆ. ಆದುದರಿಂದ ಈ ಕಲ್ಪನೆಯಿಂದಲೂ ಸಹ ನಕ್ಷತ್ರದ ಪ್ರತ್ಯಕ್ಷತೆಯು ಸಿದ್ಧವಾಗುವುದಿಲ್ಲ. ಮೂಲತಃ ರಾಶಿಚಕ್ರದ ಆರಂಭಸ್ಥಾನವು ಎಲ್ಲಿರಬೇಕೆಂಬುದು ಪ್ರತ್ಯಕ್ಷದಿಂದ ಸಿದ್ಧವಾಗುವ್ವದಾಗಿರದೆ ಶಾಸ್ತ್ರತಃ ಸಿದ್ಧವಾಗತಕ್ಕದ್ದಾದ್ದರಿಂದ ಆ ಆರಂಭಸ್ಥಾನದ- ಆಧಾರದಿಂದಲೇ ಸಿದ್ಧವಾಗತಕ್ಕ ಯಾವುದೊಂದು ವಿಷಯವು ಮೂಲತಃ ಪ್ರತ್ಯಕ್ಷವಾದುದಲ್ಲವೆಂತಲೇ ಸಿದ್ಧವಾಗುತ್ತದೆ. ಹೀಗೆ ಯಾವ ಬಗೆಯಿಂದ ವಿಚಾರಿಸಿದರೂ ಕೇವಲ ಚಂದ್ರನನ್ನು, ಅಥವಾ ಆರಂಭಸ್ಥಾನಕ್ಕೂ ಚಂದ್ರನಿಗೂ ಇರುವ ಅಂತರವನ್ನು ನೋಡುವ ಮಾತ್ರದಿಂದ ನಕ್ಷತ್ರವನ್ನು ನಿರ್ಣಯಿಸಲಿಕ್ಕೆ ಆಗುವುದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಈ ಮೊದಲಾದ ಹಲವು ಕಾರಣಗಳಿಂದ ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳೆಂಬ ಪಂಚಾಂಗ (೫ ವಿಷಯ) ಗಳ ಪೈಕಿ ಯಾವುದೊಂದೂ ಪ್ರತ್ಯಕ್ಷವಾಗಿರದೆ ಅವುಗಳ ನಿರ್ಣಯವು ಸಹ ಪ್ರತ್ಯಕ್ಷದಿಂದ ಆಗತಕ್ಕದ್ದಲ್ಲವೆಂಬುದು ಸಿದ್ಧಾಂತವೇ ಆಗಿರುವಾಗ ಈ ಯಾವುದನ್ನೂ ವಿಚಾರಿಸದೆ ಇವರು (ಪುಟ ೮, ಪಂ. ೭-೯) ತಿಥ್ಯಾದಿಗಳನ್ನೆಲ್ಲ ಬರಿಗಣ್ಣಿನಿಂದ ನೋಡಿ ತಿಳಿಯಲಿಕ್ಕೆ ಬರುತ್ತದೆನ್ನುವುದೂ, ಮತ್ತು ಹಾಗೆ ಬರಿಗಣ್ಣಿನಿಂದ ಕಂಡ ತಿಥ್ಯಾದಿಗಳನ್ನವಲಂಬಿಸಿಯೇ ಶ್ರೌತ-ಸ್ಮಾರ್ತ ಕರ್ಮಾನುಷ್ಠಾನಗಳನ್ನು ಮಾಡಬೇಕೆನ್ನುವುದೂ ಎಷ್ಟು ಅಬದ್ಧವಾಗಿರುವುದೆಂದು ವಾಚಕರಿಗೆ ತಿಳಿಯದಿರಲಿಕ್ಕಿಲ್ಲ.

ಇದೂ ಅಲ್ಲದೆ ಚಂದ್ರನಲ್ಲಿ ತೋರುವ ಕಲೆಯೇ ಆಗಲಿ, ಅಥವಾ ಸೂರ್ಯ-ಚಂದ್ರರ ಅಂತರವೇ ಆಗಲಿ ಅದೇ ತಿಥಿಯೆಂದು ಕಲ್ಪಿಸುವಲ್ಲಿ ಇನ್ನೂ ಕೆಲವು ವಿರೋಧಗಳಿರುವವು. ಏನಂದರೆ— ಚಂದ್ರನ ಕಲೆಯೇ ತಿಥಿಯೆನ್ನುವಲ್ಲಿ ಪ್ರತಿಯೊಂದು ತಿಥಿಯೂ ಚಂದ್ರಬಿಂಬದ ೧೫ನೇ ೧ ಭಾಗದಷ್ಟು ಪರಿಮಿತಿಯುಳ್ಳದ್ದಾಗುವುದು. ಸೂರ್ಯ-ಚಂದ್ರಾಂತರವೇ ತಿಥಿಯೆನ್ನುವಲ್ಲಿ ಪ್ರತಿಯೊಂದು ತಿಥಿಯೂ ೧೨ ಅಂಶಗಳಷ್ಟು ಪರಿಮಿತಿಯುಳ್ಳದ್ದಾಗುವುದು. ಹೀಗೆ ಪ್ರತಿಯೊಂದು ತಿಥಿಯೂ ನಿಯತವಾಗಿ ಸಮಾನಪರಿಮಾಣವುಳ್ಳದ್ದಾಗುವಾಗ ಅಂಥಾ ತಿಥಿಯ (ಕಲಾಸ್ವರೂಪದ, ಅಥವಾ ಅಂತರಸ್ವರೂಪದ) ಮಿತಿಯಲ್ಲಿ ವೃದ್ಧಿ-ಕ್ಷಯಗಳು ಅಂದರೆ ಹೆಚ್ಚು-ಕಡಿಮೆಗಳು ಉಂಟಾಗುವುದು ಹೇಗೆ? ವೃದ್ಧಿ-ಕ್ಷಯಗಳೇ ಇಲ್ಲವಾದ ಮೇಲೆ ಶಾಸ್ತ್ರಗಳಲ್ಲೆಲ್ಲ ತಿಥಿಯ ವೃದ್ಧಿ-ಕ್ಷಯಗಳನ್ನು ಲಕ್ಷಿಸಿ ಹೇಳಿರುವ ವಚನಗಳಿಗೆಲ್ಲ ಸಾರ್ಥಕ್ಯವೇನು? ಮತ್ತು ತಿಥಿಯು ಕರ್ಮಾಂಗತ್ವದ ಕುರಿತು ಹೇಳಿರುವ— "ವಿಧ್ಯುಕ್ತಕರ್ಮಣೋಽಧಿಕರಣತ್ವೇನ ತಿಥಯೋಽಂಗಂ। "ಅಂದರೆ— ''ಶಾಸ್ತ್ರೋಕ್ತಕರ್ಮಾನುಷ್ಠಾನಕ್ಕೆ ಅಧಿಕರಣವಾಗಿರುವುದರಿಂದ ತಿಥಿಗಳು ಕರ್ಮಾಂಗವೆನಿಸುವುವು." ಎಂಬ ಧರ್ಮಶಾಸ್ತ್ರವಚನದಂತೆ ಪ್ರಯೋಗದಲ್ಲಿಯೂ ಸಹ "ಅಮುಕತಿಥೌ ಅಮುಕಕಾಲೇ ಕರ್ಮ

ಕರಿಷ್ಯೇ” ಎಂದಿರುವುದರಿಂದ— ಆ ರೀತಿ ಸಂಕಲ್ಪಿಸಿ ಕರ್ಮಮಾಡುವವನಿಗೆ ಆ ಅಂತರಾತ್ಮಕ, ಅಥವಾ ಕಲಾತ್ಮಕವೆಂದು ಕಲ್ಪಿಸಲ್ಪಡುವ ತಿಥಿಯು ಕರ್ಮಕ್ಕೆ ಅಂಗವಾಗಿ ಸಪ್ತಮ್ಯರ್ಥಸಾಧಕವಾದ ಅಧಿಕರಣವಾಗುವುದು ಹೇಗೆ? ಅಂದರೆ- ತಿಥಿಯೆಂದು ಕಲ್ಪಿಸಲ್ಪಡುವ ಕಲೆಯು ಚಂದ್ರನನ್ನೂ, ಅಂತರವು ಸೂರ್ಯಚಂದ್ರ ಸ್ಥಾನಗಳ ಮಧ್ಯಪ್ರದೇಶವನ್ನೂ ಆಶ್ರಯಿಸಿಕೊಂಡು ಗ್ರಹಗೋಲಗಳಲ್ಲಿ ನಿಷ್ಠವಾಗಿರುವಾಗ ಅದೇ ತಿಥಿಯು ಭೂಮಿಯಲ್ಲಿ ಮನುಷ್ಯನು ಆಚರಿಸತಕ್ಕ ಕರ್ಮಕ್ಕೆ ಅಧಿಕರಣವಾಗಿರುವುದು ತೀರ ಅಸಂಗತವಲ್ಲವೇ? ಇಂತಹ ವಿರೋಧಗಳಿಗೆಲ್ಲ ಪರಿಹಾರವೇನು? ಆದುದರಿಂದ 'ತಿಥ್ಯಾದಿಗಳೆಲ್ಲವೂ ಕಾಲಾತ್ಮಕವಾಗಿವೆ' ಎಂದು ವಿವೇಕವಿದ್ದವರೆಲ್ಲರೂ ನಿರ್ವಿವಾದವಾಗಿ ಒಪ್ಪಲೇಬೇಕಾಗಿದೆ. ಇದನ್ನು ಇವರೂ ಸಹ ಒಂದೆಡೆಯಲ್ಲಿ (ಪುಟ ೫ ಪಂ ೨)ಒಪ್ಪಿದ್ದಾರೆ. ಅಂಥ ತಿಥ್ಯಾದಿಸ್ವರೂಪವಾದ ಕಾಲವು ಅಪ್ರತ್ಯಕ್ಷ (ಇಂದ್ರಿಯಗಳಿಗೆ ಗೋಚರಿಸತಕ್ಕದ್ದಲ್ಲ) ವೆಂಬುದು ಸರ್ವಸಮ್ಮತವಾಗಿದೆ. ಸರ್ವಶಾಸ್ತ್ರಗಳೂ ಹಾಗೆ ಉದ್ಘೋಷಿಸುತ್ತವೆ.

ಇನ್ನು ಈ ತಿಥ್ಯಾದಿಗಳಿಗೆ ಸಂಬಂಧಪಟ್ಟ ಶಾಸ್ತ್ರೋಕ್ತಿಗಳನ್ನು ವಿಚಾರಿಸುವಲ್ಲಿಯೂ ಸಹ- “ಚೈತ್ರೇ ಮಾಸಿ ಜಗದ್ಬ್ರಹ್ಮಾ ಸಸರ್ಜ ಪ್ರಥಮೇಽಹನಿ | ಶುಕ್ಲಪಕ್ಷೇ ಸಮಗ್ರಂ ತತ್ತದಾ ಸೂರ್ಯೋದಯೇ ಸತಿ ॥ ಪ್ರವರ್ತಯಾಮಾಸ ತದಾ ಕಾಲಸ್ಯ ಗಣನಾಮಪಿ | ಗ್ರಹಾನ್ನಾಗಾನೃತೂನ್ಮಾಸಾನ್ ವತ್ಸರಾನ್ವತ್ಸರಾಧಿಪಾನ್ ॥” ತಾತ್ಪರ್ಯ:-ಬ್ರಹ್ಮನು “ಸೃಷ್ಟಿಯ ಆರಂಭದಲ್ಲಿ, ಚೈತ್ರಶುಕ್ಲಪಾಡ್ಯದಲ್ಲಿ ಸೂರ್ಯೋದಯದಲ್ಲಿ ತಿಥಿ,ಪಕ್ಷ,ಮಾಸ,ಋತು,ವತ್ಸರಾದಿ ವಿಶಿಷ್ಟಭೇದಗಳುಳ್ಳ ಕಾಲಗಣನೆಯನ್ನು ಪ್ರವರ್ತಿಸಿದನು; ಎಂಬ ಬ್ರಹ್ಮಪುರಾಣದ ವಚನದಿಂದಲೂ, ಇದರಂತೆ “ಯುಗವರ್ಷಮಾಸದಿವಸಾಃ ಸಮಂ ಪ್ರವೃತ್ತಾಸ್ತು ಚೈತ್ರಶುಕ್ಲಾದೇಃ | ಕಾಲೋಽಯಮನಾದ್ಯಂತೋ ಗ್ರಹಭೈರನುಮೀಯತೇ ಕ್ಷೇತ್ರೇ ॥ ತಾತ್ಪರ್ಯ:—ಆದ್ಯಂತವಿಲ್ಲದ ಕಾಲವು ಸೃಷ್ಟ್ಯಾದಿಯಲ್ಲಿ ಚೈತ್ರಶುಕ್ಲದ ಆದಿಯಿಂದ ಒಟ್ಟಿಗೆ ಆರಂಭಿಸಿರುವ ಯುಗ, ವರ್ಷ, ಮಾಸ, ತಿಥಿಮೊದಲಾದ ಭೇದಗಳುಳ್ಳದ್ದಾಗಿ ಗ್ರಹ-ನಕ್ಷತ್ರಗಳಮೂಲಕ (ಪ್ರತ್ಯಕ್ಷವಲ್ಲವಾದ್ದರಿಂದ ) ಅನುಮಾನಿಸಲ್ಪಡತಕ್ಕದ್ದಾಗಿದೆ. “ತಮಹಮಿಹ ನಿಮಿತ್ತಂ ವಿಶ್ವಜನ್ಮಾತ್ಯಯಾನಾಮನುಮಿತಮಿಹ ವಂದೇ ಭಗ್ರಹೈಃ ಕಾಲರೂಪಂ | ” ತಾತ್ಪರ್ಯ:—ಜಗತ್ತಿನ ಸೃಷ್ಟಿ-ಲಯಗಳಿಗೆಲ್ಲ ಕಾರಣವಾದ ಕಾಲವು ಗ್ರಹ-ನಕ್ಷತ್ರಗಳಿಂದ ಶಾಸ್ತ್ರಾನುಸಾರವಾಗಿ ಅನುಮಾನಿಸಲ್ಪಡತಕ್ಕದ್ದು; ಅರ್ಥಾತ್ ಪ್ರತ್ಯಕ್ಷವಲ್ಲ. ಮತ್ತು “ತತ್ರ ಸಂವತ್ಸರಃ ಅಯನಮೃತುರ್ಮಾಸಃ ಪಕ್ಷಸ್ತಿಥಿರ್ನಕ್ಷತ್ರಮಿತ್ಯೇವಂ ವಿಧಾಃ ಕರ್ಮಕಾಲಾಃ | ’ ತಾತ್ಪರ್ಯ:—ತಿಥ್ಯಾದಿಗಳೆಲ್ಲವೂ ಕರ್ಮಾಚರಣೆಗೋಸ್ಕರ ವಿಧಿಸಲ್ಪಟ್ಟಿರುವ ಕಾಲವಿಶೇಷಗಳಾಗಿವೆ. “ನಿಮೇಷಾದ್ಯಾ ಆಯುಷಪರ್ಯಂತಾಃ ಕಾಲಭೇದಾಃ ಸಂವತ್ಸರಾದಣವಃ |

ಅಣೂನಾಮುಪಯುಕ್ತತ್ವೇನ ಪ್ರವೇಶಃ ॥ " ತಾ :- ನಿಮಿಷಾದಿ ಅಯನದ ವರೆಗಿನ ಕಾಲಭೇದಗಳೆಲ್ಲವೂ ಸಂವತ್ಸರದಲ್ಲಿ ಕೂಡಿಕೊಂಡು ಅದರ ಅವಯವಗಳೆನಿಸುತ್ತವೆ; ಈ ಮುಂತಾದ ಕಾಲಮಾಧವದಲ್ಲಿ ಹೇಳಿರುವ ವಚನಗಳಿಂದಲೂ, 'ಸ ಕಾಲಸ್ತಿಥಿರುಚ್ಯತೇ' ತಾ- ಕಾಲವಿಶೇಷವೇ ತಿಥಿಯೆನಿಸುವುದು; 'ತಿಥ್ಯಾದ್ಯಾಃ ಕಾಲರೂಪಿಣಃ ।' ತಾ- ತಿಥ್ಯಾದಿಗಳೆಲ್ಲವೂ ಕಾಲಸ್ವರೂಪಗಳಾಗಿವೆ; ಎಂಬ ಇಂತಹ ಇನ್ನೂ ಅನೇಕವಚನಗಳಿಂದಲೂ ಸಹ ತಿಥಿ, ನಕ್ಷತ್ರ, ಯೋಗ, ಕರಣ, ಪಕ್ಷ, ಮಾಸ, ಋತು, ಅಯನ, ವತ್ಸರಗಳೆಲ್ಲ ಕರ್ಮಾಚರಣೆಯ ಬಗ್ಗೆ ನಿರೂಪಿಸಲ್ಪಟ್ಟಿರುವ ಕಾಲವಿಶೇಷಗಳೇ ಆಗಿರುತ್ತವೆಂದೂ, ಇವೆಲ್ಲವೂ ಪ್ರತ್ಯಕ್ಷದಿಂದಲೇ ತಿಳಿಯತಕ್ಕವುಗಳಲ್ಲವಾದ್ದರಿಂದ ಶಾಸ್ತ್ರಾನುಸಾರವಾಗಿ ಗ್ರಹ-ನಕ್ಷತ್ರಗಳ ಮೂಲಕ ಅನುಮಾನಿಸಿ ತಿಳಿದುಕೊಳ್ಳತಕ್ಕವುಗಳೆಂದೂ ಸ್ಪಷ್ಟವಾಗುತ್ತದೆ. ಮತ್ತು ಹಾಗೆ ಗ್ರಹ-ನಕ್ಷತ್ರಗಳ ಮೂಲಕ ಅನುಮಾನಿಸಿ ತಿಳಿದುಕೊಳ್ಳುವ ಕ್ರಮವನ್ನು ಸಹ ಆರ್ಷಜ್ಯೋತಿಷಸಿದ್ಧಾಂತಶಾಸ್ತ್ರಗಳಲ್ಲಿಯೇ ಸ್ಪಷ್ಟವಾಗಿ ಹೇಳಿದೆ. ಅದುದರಿಂದಲೇ ವೇದದಲ್ಲಿಯೂ ಸಹ— ಅರುಣಕೇತುಕೇ "ಸ್ಮೃತಿಃ ಪ್ರತ್ಯಕ್ಷಮೈತಿಹ್ಯಮನುಮಾನಶ್ಚತುಷ್ಟಯಂ । ಏತೈರಾದಿತ್ಯಮಂಡಲಂ ಸರ್ವೈರೇವ ವಿಧಾಸ್ಯತೇ ॥" ಇತಿ, ಕಾಲಮಾಧವೇ ಮಂತ್ರಭಾಷ್ಯಂ – "ಸ್ಮೃತಿಃ = ಅನುಮೇಯಶ್ರುತಿಮೂಲಂ ಮನ್ವಾದಿಶಾಸ್ತ್ರಂ । ಪ್ರತ್ಯಕ್ಷಂ = ಶ್ರೋತ್ರಗ್ರಾಹ್ಯೋಽಕೃತ್ರಿಮೋ ವೇದಾಖ್ಯೋಽಕ್ಷರರಾಶಿರ್ಯೋಗಿಪ್ರತ್ಯಕ್ಷಮೌಪನಿಷದಾಭಿಮತಂ ಸಾಕ್ಷಿಪ್ರತ್ಯಕ್ಷಂ ವಾ । ಐತಿಹ್ಯಂ = ಇತಿಹಾಸಪುರಾಣಾದಿಕಂ । ಜ್ಯೋತಿಃಶಾಸ್ತ್ರಸ್ಯಾಪ್ಯತ್ರಾಂತರ್ಭಾವೋ ದ್ರಷ್ಟವ್ಯಃ । ಅನುಮೀಯತೇ ಸ್ವಮೂಲಭೂತಸ್ಮೃತಿವಾಕ್ಯಮನೇನೇತಿ ಅನುಮಾನಃ = ಶಿಷ್ಟಾಚಾರಃ । ತದೇವಂ ಸ್ಮೃತ್ಯಾದೀನಾಂ ಚತುಷ್ಟಯಂ ಸಂಪನ್ನಂ । ಏತೈಶ್ಚತುರ್ಭಿಃ ಸರ್ವೈರಪ್ಯಾದಿತ್ಯಮಂಡಲಂ ಪ್ರಮೀಯತ ಇತಿ ಮಂತ್ರಸ್ಯಾರ್ಥಃ ॥"

ತಾತ್ಪರ್ಯ:— ಶ್ರುತಿ, ಸ್ಮೃತಿ, ಇತಿಹಾಸ, ಪುರಾಣ, ಜ್ಯೋತಿಃಶಾಸ್ತ್ರಾದಿಗಳಿಂದ ಸೂರ್ಯಮಂಡಲವನ್ನೂ, ತನ್ಮೂಲಕ ನಿಮಿಷ, ಮುಹೂರ್ತ, ತಿಥಿ, ನಕ್ಷತ್ರ ಮುಂತಾದ ವಿಶಿಷ್ಟಕಾಲಭೇದಗಳನ್ನೂ ಸಹ ತಿಳಿದುಕೊಳ್ಳಬೇಕೆಂಬ ಅಭಿಪ್ರಾಯವಿದೆ. ಇಲ್ಲಿ 'ಪ್ರತ್ಯಕ್ಷ'ವೆಂದರೆ ವೇದವೆಂದೂ 'ಅನುಮಾನ'ವೆಂದರೆ ಶಿಷ್ಟಾಚಾರವೆಂದೂ ಮೇಲಿನ ಮಂತ್ರಭಾಷ್ಯದಲ್ಲಿ ಹೇಳಿರುವುದನ್ನು ಲಕ್ಷಿಸತಕ್ಕದ್ದು. ಮತ್ತು ಈ ಮಂತ್ರದಲ್ಲಿ ಸೂರ್ಯಮಂಡಲವನ್ನು (ಚಾಕ್ಷುಷ) ಇಂದ್ರಿಯಪ್ರತ್ಯಕ್ಷದಿಂದ ನಿರ್ಣಯಿಸತಕ್ಕದ್ದಾಗಿ ಹೇಳಿಲ್ಲವಾದಕಾರಣ ಕಾಲಾತ್ಮಕನೂ, ವ್ಯಕ್ತನೂ ಆಗಿರುವ ಸೂರ್ಯನೇ ಪ್ರತ್ಯಕ್ಷದಿಂದ ನಿರ್ಣಯಿಸಲ್ಪಡತಕ್ಕವನಲ್ಲವೆಂತಾದಮೇಲೆ ತದಾಶ್ರಿತ ಕಾಲನಿರ್ಣಯವಂತೂ ಹೇಗೂ ಪ್ರತ್ಯಕ್ಷದಿಂದಾಗತಕ್ಕದ್ದಲ್ಲವೆಂದೇ ಶ್ರುತಿಯ ಅಭಿಪ್ರಾಯವಿರುವುದೆಂದು ಸ್ಪಷ್ಟವಾಗುತ್ತದೆ. ಇನ್ನು ವಿಪಕ್ಷಿಗಳು ಕಾಲಪ್ರಭೇದಗಳಾಗಿರುವ ತಿಥ್ಯಾದಿಗಳು ಪ್ರತ್ಯಕ್ಷವಲ್ಲವೆಂತಾದರೂ ಅವನ್ನು ನಿರ್ಣಯಿಸಲು ಉಪಾಧಿಯಾ

ಗಿರುವ ಸೂರ್ಯ-ಚಂದ್ರರ ಗತಿಗಳು ಪ್ರತ್ಯಕ್ಷವಾಗಿವೆ; ಎನ್ನುವುದಾದರೆ ಅದೂ ಸಹ ಸರಿಯಲ್ಲ. ಯಾಕಂದರೆ- ಆ ಗ್ರಹಗತಿಯು ಕೇವಲ ಪ್ರತ್ಯಕ್ಷದಿಂದ ನಿರ್ಧರಿಸುವಂಥಾದ್ದಲ್ಲವೆಂದು ಮಹಾಭಾರತದ ಶಾಂತಿಪರ್ವದಲ್ಲಿ (ಅಧ್ಯಾಯ ೨೦೩, ಶ್ಲೋ. ೯) "ಧಿಯಾ ಸಮನುಪಶ್ಯಂತಿ ತದ್ಗತಾಃ ಸವಿತುರ್ಗತಿಂ । ಟೀಕಾ ತದ್ದರ್ಶಿನಃ ಸವಿತುರ್ಗತಿಂ ದೂರತ್ವದೋಷಾತ್ ಪ್ರತ್ಯಕ್ಷೇಣ ಅಗೃಹ್ಯಮಾಣಾಮಪಿ ದೇಶಾಂತರ ಪ್ರಾಪ್ತಿಲಿಂಗೇನ ಧಿಯಾ ಪಶ್ಯಂತಿ।" ಅಂದರೆ— ಸೂರ್ಯನು ಬಹು ದೂರದಲ್ಲಿರುವಕಾರಣ ಆವನ ಗತಿಯನ್ನು ಪ್ರತ್ಯಕ್ಷವಾಗಿ ತಿಳಿಯಲಾಗುವುದಿಲ್ಲ. ಆದ್ದರಿಂದ ತಜ್ಞರಾದವರು ದೇಶಾಂತರಪ್ರಾಪ್ತಿರೂಪವಾದ ಹೇತುವಿನಿಂದ ಊಹಿಸಿ ತಿಳಿದುಕೊಳ್ಳುತ್ತಾರೆ; ಎಂದಿದೆ. ಸೂರ್ಯಗತಿಯನ್ನು ಕುರಿತು ಹೇಳಿರುವ ಈ ವಚನವು (ಹೇತುಸಾಮ್ಯವಿರುವಮೂಲಕ) ಎಲ್ಲ ಗ್ರಹರಿಗೂ ಅನ್ವಯಿಸುತ್ತದೆ. ಹೀಗೆ ಉಪಾಧಿಯಾವ ಗತಿಯೂ ಸಹ ಪ್ರತ್ಯಕ್ಷವಲ್ಲವೆಂದಿರುವಾಗ ಆ ಗತಿವಶದಿಂದ ನಿರ್ಣಯಿಸಲ್ಪಡತಕ್ಕ ತಿಥ್ಯಾದಿಗಳು ಹೇಗೂ ಪ್ರತ್ಯಕ್ಷವಲ್ಲವೆಂದು ಹೊಸದಾಗಿ ಹೇಳಬೇಕಾಗಿಲ್ಲ. ಹೀಗೆ ವೇದಾದಿಶಾಸ್ತ್ರಗಳಿಂದೆಲ್ಲ ತಿಥ್ಯಾದಿಗಳು (ಪ್ರತ್ಯಕ್ಷವಾಗಿ) ಕಣ್ಣಿನಿಂದ ನೋಡಿ ನಿರ್ಣಯಿಸತಕ್ಕವುಗಳಲ್ಲವೆಂದು ಸಿದ್ಧವಾಗುತ್ತದೆ. ಆದುದರಿಂದಲೇ ಮುನೀಶ್ವರಾಚಾರ್ಯರ್ಃ— "ತಿಥೇಃ ಕಾಲ್ಪನಿಕತ್ವೇನ ಅಪ್ರತ್ಯಕ್ಷತ್ವಾತ್' ಅಂದರೆ-ತಿಥಿಯು ಶಾಸ್ತ್ರದಿಂದ ಕಲ್ಪಿಸಲ್ಪಟ್ಟ ಕಾಲವಿಶೇಷವಾಗಿರುವುದರಿಂದ ಪ್ರತ್ಯಕ್ಷವಾದುದಲ್ಲವೆಂದು ಮುನೀಶ್ವರಾಚಾರ್ಯರು ಸ್ಪಷ್ಟವಾಗಿ ಹೇಳಿರುವರು. ಶ್ರೀಭಗವತ್ಪೂಜ್ಯಪಾದ ಶ್ರೀಮಚ್ಛಂಕರಾಚಾರ್ಯರು ಸಹ ತಮ್ಮ ಪ್ರಕರಣಗ್ರಂಥದಲ್ಲಿ "ಅದ್ಯಾಷ್ಟಮೀತ್ಯದ್ಯ ಚತುರ್ದಶೀತಿ ಜ್ಯೋತಿಷ್ಕವಾಚೋಪವಸಂತಿ ಭಕ್ತ್ಯಾ। ಅಹೋ! ಶ್ರುತೇಸ್ತತ್ತ್ವಮಸೀತಿ ವಾಕ್ಯಂ ನ ವಿಶ್ವಸಂತ್ಯದ್ಭುತಮೇತದೇವ ||" ತಾತ್ಪರ್ಯ:— ತಿಥಿಯು ಕಪ್ಪು,ಕೆಂಪು, ಮುಂತಾದ ವರ್ಣ,ಆಕಾರಗಳೇನೂ ಇಲ್ಲದ್ದಾದ್ದರಿಂದ ಕಣ್ಣಿಗೆ ಕಾಣಿಸತಕ್ಕದ್ದಲ್ಲ. ಹೀಗಿದ್ದರೂ ಜ್ಯೋತಿಷಿಗಳ ಮಾತನ್ನು ಕೇಳಿ ಇಂದು ಅಷ್ಟಮಿ ಇಂದು ಚತುರ್ದಶೀ ಎಂದು ನಂಬಿ ಭಕ್ತಿಯಿಂದ ಉಪವಾಸಾದಿಗಳನ್ನು ಆಚರಿಸುವರು. ಆದರೆ ಇವರಂತೆ ಶ್ರುತಿಯಲ್ಲಿ ಹೇಳಿರುವ ತತ್ತ್ವಮಸ್ಯಾದಿ ವಾಕ್ಯಾರ್ಥವನ್ನು ಕಿವಿಯಿಂದ ಕೇಳಿದರೂ ಆವರಲ್ಲಿ ವಿಶ್ವಾಸವಿಲ್ಲದೆ ಇರುವುದು ಬಹು ಆಶ್ಚರ್ಯವು; ಎಂದಿರುವರು. ಇದರಿಂದ ತಿಥಿಯು ಜ್ಯೋತಿಷಜ್ಞರಮೂಲಕ ತಿಳಿಯತಕ್ಕದ್ದಲ್ಲದೆ ಪ್ರತ್ಯಕ್ಷದಿಂದಲ್ಲವೆಂದು ಆಚಾರ್ಯರ ಅಭಿಪ್ರಾಯವಿರುವುದು ಸ್ಪಷ್ಟವಾಗುತ್ತದೆ. ಮತ್ತು ತಿಥಿಯಂತೆ ನಕ್ಷತ್ರಾದಿಗಳು ಸಹ ಕಾಲವಿಶೇಷಗಳೇ ಆಗಿರುವುದರಿಂದ ತಿಥಿಯನ್ನು ಕುರಿತು ಹೇಳುವ ಈ ವಚನಗಳೆಲ್ಲ ಅವುಗಳಿಗೂ ಅನ್ವಯಿಸುತ್ತವೆ. ಹೀಗೆ ಶ್ರುತಿ, ಸ್ಮೃತಿ, ಪುರಾಣ, ಆಗಮ, ಅಭಿಯುಕ್ತರ ವಚನಗಳಿಂದೆಲ್ಲ ತಿಥ್ಯಾದಿಗಳು ಕಾಲಸ್ವರೂಪಗಳಾಗಿರುವುವೆಂದೂ, (ಆದ್ದರಿಂದ) ಅಪ್ರತ್ಯಕ್ಷವಾಗಿರುವುವೆಂದೂ ಸ್ಪಷ್ಟವಾಗುತ್ತದೆ. ಈ ಪ್ರಕಾರ ನಾವು ಹಿಂದೆ ಕಾಣಿಸಿರುವ ಗೋಲಗತ

ವಿಚಾರಗಳಿಂದಲೂ, ಶಾಸ್ತ್ರವಚನಗಳಿಂದಲೂ ಸಹ ಸರ್ವಥಾ "ತಿಥ್ಯಾದಿಗಳ ನಿರ್ಣಯವು ಪ್ರತ್ಯಕ್ಷದಿಂದಾಗತಕ್ಕದ್ದಲ್ಲ"ವೆಂಬುದು ಸಿದ್ಧಾಂತವಾಗಿರುವುದು. ಇನ್ನು ಇವರು ೮ನೇ ಪುಟದ ಅಂತ್ಯದಲ್ಲಿ ಬರೆದಿರುವ ವಾಕ್ಯದಲ್ಲಿ ಈ ಹಿಂದೆ ನಾವು ಪುಟ ೧೨ರಲ್ಲಿ ಕಾಣಿಸಿರುವಂತೆ ಹವ್ಯಕವ್ಯಾದಿ ಧರ್ಮಕಾರ್ಯಗಳಿಗೂ, ತಿಥ್ಯಾದಿಗಳಿಗೂ ಪರಸ್ಪರ ನಿಕಟಸಂಬಂಧವಿದೆ; ಎಂಬಷ್ಟು ಅಂಶವನ್ನು ಒಪ್ಪಿಕೊಂಡಿದ್ದು ಅದು ನಮ್ಮ ಸಿದ್ಧಾಂತಪಕ್ಷವನ್ನೇ ಸಮರ್ಥಿಸುವುದಲ್ಲದೆ ಇವರ ದೃಕ್ಪಂಚಾಂಗದ ಸಮರ್ಥನೆಯು ಅದರಿಂದ ಹೇಗೂ ಆಗುವುದಿಲ್ಲ.

## "ಆಕ್ಷೇಪನಿರಾಸಪೂರ್ವಕ ದೃಕ್ಪಂಚಾಂಗ ಸಮರ್ಥನೆ"ಯ ಖಂಡನೆ.

ಈ ಭಾಗದಲ್ಲಿ ಇವರು ಶಾಸ್ತ್ರವಿಹಿತಪಂಚಾಂಗನಿರ್ಣಯದಲ್ಲಿ ಕೊಟ್ಟಿರುವ ಪ್ರಮಾಣವಚನಗಳನ್ನು ತಮ್ಮ ಮೇಲಿನ ಆಕ್ಷೇಪವೆಂದು ಗ್ರಹಿಸಿಕೊಂಡು ಅದರ ನಿರಾಸಮಾಡಿದ ಸೋಗು ತೋರಿಸಿದ್ದಾರೆ. ಆದರೆ ಇದು ಕೇವಲ ನಟನೆಯೇ ಹೊರತು ಸತ್ಯವಲ್ಲ. ಉದಾಹರಣೆಗೆ – ಶಾ. ವಿ. ಪಂ. ನಿರ್ಣಯದೊಳಗಿನ ಬೊಪ್ಪದೇವೀಯದ ಹಾಗೂ ಖಚರದರ್ಪಣದ 'ದೃಕ್ಸಿದ್ಧಗ್ರಹಚಾರೇಣ' ಗ್ರಹಣಗ್ರಹೋಡಯಾಸ್ತ' ಎಂಬ ವಚನಗಳ ನಿರಾಸಮಾಡುವ ಭರದಲ್ಲಿ ದಾರಿಯನ್ನೇ ತಪ್ಪಿಬಿಟ್ಟಿದ್ದಾರೆ. ನೋಡಿರಿ! ಪುಟ ೯ರಲ್ಲಿ ಮೇಲಿನ ಶ್ಲೋಕಗಳನ್ನು ಉದಾಹರಿಸಿದ ನಂತರ ಇವರು ಪುಟ ೧೦ ಪಂ.೬-೯ ರಲ್ಲಿ 'ದೃಕ್ಸಿದ್ಧ'ಎಂಬ ಶಬ್ದಕ್ಕೆ 'ದೃಕ್ಕರ್ಮಸಂಸ್ಕೃತ' ಎಂದು ಅರ್ಥಮಾಡುವುದೇ ಸಮಂಜಸವಾಗುತ್ತದೆ; ಆಕ್ಷಾಯನಾದಿದೃಕ್ಕರ್ಮಗಳು ಗ್ರಹಣಾದಿಗಳಲ್ಲಿ ಮಾತ್ರ ಗ್ರಾಹ್ಯವು; ಮುಂತಾದ ಸಂಬಂಧವಿಲ್ಲದ ಮಾತುಗಳನ್ನು ಹೇಳಿ ವಾಚಕರನ್ನು ಅಡ್ಡಹಾದಿಗೆ ಎಳೆದಿದ್ದಾರೆ. ಗ್ರಹಣಗಣಿತದಲ್ಲಿ ಸೂರ್ಯ–ಚಂದ್ರರ ಸ್ಫುಟವನ್ನು ಸಾಧಿಸುವಾಗ ಆಕ್ಷಾಯನದೃಕ್ಕರ್ಮವನ್ನು ಮಾಡಬೇಕೆಂದು ಯಾವ ಗ್ರಂಥದಲ್ಲಿಯೂ ಹೇಳಲಿಲ್ಲ ; ಮತ್ತು ಅಲ್ಲಿ ಅದರ ಆವಶ್ಯಕತೆಯೂ ಇಲ್ಲ. ಹೀಗಿರುವಲ್ಲಿ ತಮ್ಮ ದೃಕ್ಪಂಚಾಂಗವನ್ನು ಖಂಡಿಸುವ ಕುಠಾರದಂತಿರುವ ಇಂತಹ ಸ್ಪಷ್ಟವಚನಗಳಿಗೂ ಸಹ ಇವರು ಹೇಗೆ ಅಪಾರ್ಥವನ್ನು ಕಲ್ಪಿಸಿ ವಾಚಕರನ್ನು ವಂಚಿಸುತ್ತಾರೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಮತ್ತು ಇವರು ಆಕ್ಷೇಪವೆಂದು ಗ್ರಹಿಸಿದ "ಗ್ರಹಣಗ್ರಹೋದಯಾಸ್ತಶೃಂಗೋನ್ನತಿಖಚರಯೋಗಕಾಲೇಷು । ದೃಕ್ಸಿದ್ಧೇಂದುಃ ಸಾಧ್ಯಃ ಸ್ಯಾದೇವಂ ನೇತರಕ್ರಿಯಾಸು ಬುಧೈಃ ॥ "ಎಂಬುದರ ಅರ್ಥವು ಗ್ರಹಣಾದಿಗಳಲ್ಲಿ ಹೊರತು ಅನ್ಯತ್ರ ತಿಥ್ಯಾದಿಗಣಿತಗಳಲ್ಲಿ ಯಾವ ತರದ ದೃಕ್ಸಿದ್ಧಸಂಸ್ಕಾರವೂ ಬೇಡವೆಂದು ಸ್ಪಷ್ಟವಾಗಿದ್ದು ಮೇಲಾಗಿ ಅದೇ ಗ್ರಂಥದಲ್ಲಿಯೇ –"ಮಾಂದ್ಯೈಕಕರ್ಮಸಂಸ್ಕೃತಚಂದ್ರಾರ್ಕೌ ತಿಥಿಭಯೋಗಕರಣಾನಾಂ । ಯೋಗ್ಯೌ ಸ್ಯಾತಾಂ ಗ್ರಹಣೇ ಚಂದ್ರೋಽನ್ಯೈಃ ಸಂಸ್ಕೃತೋ ಗ್ರಾಹ್ಯಃ॥ ಎಂಬ ಶ್ಲೋಕದಲ್ಲಿ

ಮಂದಸಂಸ್ಕಾರವೊಂದರಿಂದ ಸಂಸ್ಕೃತರಾದ ಸೂರ್ಯಚಂದ್ರರಿಂದ ತಿಥಿ, ನಕ್ಷತ್ರ, ಯೋಗ, ಕರಣಗಳನ್ನು ಮಾಡಬೇಕೆಂದೂ, ತದಿತರ (ಬೇರೆ ಹೆಚ್ಚಿನ) ಸಂಸ್ಕಾರಗಳನ್ನು ಗ್ರಹಣಗಣಿತದಲ್ಲಿ ಮಾಡತಕ್ಕದ್ದೆಂತಲೂ ಎಲ್ಲರಿಗೂ ತಿಳಿಯುವಂತೆ ಸ್ಪಷ್ಟವಾಗಿ ಹೇಳಿದ್ದಾರೆ. ಅನ್ಯಸಂಸ್ಕಾರಗಳೆಂದರೆ- ಪಾತೋನಚಂದ್ರಸಂಸ್ಕಾರ, ಸತಿಥಿವ್ಯರ್ಕಚಂದ್ರೋಚ್ಚಸಂಸ್ಕಾರ, ವ್ಯರ್ಕೇಂದುಫಲಸಂಸ್ಕಾರ ಮೊದಲಾದವುಗಳು. (ಅಂದರೆ- ಇವರು ತಮ್ಮ ಈಗಿನ ನವೀನದೃಕ್ಪಂಚಾಂಗದ ನಿತ್ಯತಿಥ್ಯಾದಿಗಳಲ್ಲಿ ಮಾಡುವಂತಹ ಸಂಸ್ಕಾರಗಳು;) ಎಂದು ಆ ಗ್ರಂಥಕರ್ತರೇ ಹೇಳಿದ್ದಾರೆ. ಆದ್ದರಿಂದ ಈ ವಚನಗಳೆಲ್ಲ ಇವರ ದೃಕ್ಪಕ್ಷವನ್ನು ಬಲವಾಗಿ ಖಂಡಿಸುತ್ತವೆ. ಹೀಗಿರಲು ಇವರ ಈ ಆಕ್ಷೇಪನಿರಾಸವು ತೀರ ವಿಪರ್ಯಸ್ತವಾದುದೆಂದೂ, ನಿರರ್ಥಕವೆಂದೂ ಇದರಿಂದ ಸ್ಪಷ್ಟವಾಗುವುದಿಲ್ಲವೇ ?

ಇನ್ನಿವರು ಪುಟ ೯ ರಲ್ಲಿ "ತತ್ತದ್ಗತಿವಶಾನ್ನಿತ್ಯಂ·······।" ಮತ್ತು "ಸ್ಫುಟೀಕ್ರಿಯಾ ದೃಗ್ಗಣಿತೈಕ್ಯಕೃದ್ಯಾ।" ಎಂಬ ವಚನಗಳನ್ನು ಎತ್ತಿ ಅದರಿಂದ ತಮ್ಮ ದೃಕ್ಪಂಚಾಂಗವನ್ನು ಸಮರ್ಥಿಸಿಕೊಳ್ಳಲಿಕ್ಕೆ ಯತ್ನಿಸಿದ್ದಾರೆ. ಆದರೆ ಆ ಎರಡು ಶ್ಲೋಕಗಳಲ್ಲಿಯೂ ಸೂರ್ಯ-ಚಂದ್ರರಿಗೆ ಮಂದಸಂಸ್ಕಾರದಿಂದ ಮಾತ್ರವೇ ದೃಕ್ತುಲ್ಯತೆಯನ್ನು ವಿಶೇಷಿಸಿದ್ದು ಅದೇ ಅಧ್ಯಾಯದ ಮುಂದಿನ ಭಾಗಗಳಿಂದ ಸ್ಪಷ್ಟವಾಗುತ್ತಿರುವಾಗ ತಿಥ್ಯಾದಿಗಳಿಗೆ ನಿಷೇಧಿಸಲ್ಪಟ್ಟಿರುವ ಬೀಜಾದಿಸಂಸ್ಕಾರಗಳನ್ನು ಮಾಡಿಯೂ ದೃಕ್ (ಪ್ರತ್ಯಕ್ಷ) ತುಲ್ಯವಾಗದೆ ಇರುವ ಇವರ ನವೀನ-ದೃಕ್ಪಂಚಾಂಗದ ಸಮರ್ಥನೆಯು ಆ ವಚನಗಳಿಂದ ಹೇಗೂ ಆಗಲಾರದೆಂಬುದು ಸ್ಪಷ್ಟವಿದೆ.

ಪುಟ ೧೦ರಲ್ಲಿ—'ಸೂರ್ಯಸಿದ್ಧಾಂತವು ದೃಕ್ತುಲ್ಯವಾಗದ್ದರಿಂದ ತಿಥ್ಯಾದಿಗಳಿಗೆ ಅದನ್ನೇ ಉಪಯೋಗಿಸಬೇಕೆಂದು ಹೇಳುವುದೂ, ತಿಥ್ಯಾದಿಸಾಧನೆಗೆ ದೃಕ್ತುಲ್ಯವಾಗದ ಗ್ರಂಥವನ್ನೇ ಸ್ವೀಕರಿಸುತ್ತಹೋದರೆ ಅನವಸ್ಥೆಯುಂಟಾಗುವುದರಿಂದ ತಿಥ್ಯಾದಿಗಳಿಗೆ ಒಂದು ಗ್ರಂಥ, ಗ್ರಹಣಾದಿಗಳಿಗೆ ಮತ್ತೊಂದು ಗ್ರಂಥ ಗ್ರಾಹ್ಯವೆಂತ ಹೇಳುವುದೂ ಸಮಂಜಸವಾಗಲಾರದು,' ಎಂದಿದ್ದಾರೆ. ಆದರೆ ಈ ಹೇಳಿಕೆಗಳೆಲ್ಲ ಇವರೇ ಕಲ್ಪಿಸಿಕೊಂಡ ಕಲ್ಪನೆಗಳಲ್ಲದೆ ಬೇರೆ ಯಾರೂ ಹೇಳಿದ್ದಲ್ಲ. ಯಾವುದೊಂದು ಗ್ರಂಥವು ದೃಕ್ತುಲ್ಯವಾಗಿಲ್ಲವೆಂಬ ಕಾರಣದಿಂದಲೇ ತಿಥ್ಯಾದಿಸಾಧನೆಗೆ ಯೋಗ್ಯವಾಗುತ್ತದೆಂತಾಗಲಿ, ಸೂರ್ಯಸಿದ್ಧಾಂತವು ದೃಕ್ತುಲ್ಯವಾಗದ್ದರಿಂದಲೇ ಗ್ರಾಹ್ಯವಾಗಿರುವುದೆಂತಾಗಲಿ ಎಲ್ಲಿಯೂ ಹೇಳಿಲ್ಲ. ದೃಕ್ತುಲ್ಯವಾಗಿರಲಿ, ಇಲ್ಲದಿರಲಿ ಆರ್ಷಶಾಸ್ತ್ರಾನುಸಾರವಾಗಿ ತಿಥ್ಯಾದ್ಯದೃಷ್ಟವಿಷಯಗಳನ್ನೂ, ದೃಕ್ಪ್ರತ್ಯಯಕ್ಕೆ ಸರಿಬರುವಂತೆ ಗ್ರಹಣಾದಿದೃಷ್ಟವಿಷಯಗಳನ್ನೂ ಸಾಧಿಸಬೇಕೆಂಬುದೇ ಶಾಸ್ತ್ರದ ತಾತ್ಪರ್ಯವಾಗಿದ್ದು ಆವೆರಡು ವಿಷಯಗಳನ್ನೂ ಬೇರೆ ಬೇರೆ ಗ್ರಂಥಗಳಿಂದಲೇ ಸಾಧಿಸಬೇಕೆಂತಾಗಲಿ, ಅಥವಾ ಆವೆರಡೂ ಒಂದೇ ಗ್ರಂಥದಿಂದಲೇ ಸಾಧ್ಯವಾಗು

ತ್ರಿರುವಲ್ಲಿ ಅದನ್ನು ಗ್ರಹಸಂಚಾರದಂತೆ ಆಗಲಿ ನಿಯಮವೇನೂ ಇರುವುದಿಲ್ಲ. ಇಷ್ಟೇ ಅಲ್ಲ; ಇದರಂತೆ ಆರ್ಷಶಾಸ್ತ್ರಾನುಸಾರವಾಗಿ ( ಬಾಣವೃದ್ಧಿ-ರಸಕ್ಷಯ) ಬರುವ ತಿಥ್ಯಾದಿಗಳನ್ನೂ, ಆಯಾ ಕಾಲದಲ್ಲಿ ದೃಕ್ಪ್ರತ್ಯಯಕ್ಕೆ ಸರಿಬರುವಂತೆ ಗ್ರಹಣಾದಿಗಳನ್ನೂ ಸಹ ಸಾಧಿಸತಕ್ಕ ಗಣಿತಕ್ರಮಗಳನ್ನು ಬ್ರಾಹ್ಮಸಿದ್ಧಾಂತ, ವಟೇಶ್ವರಸಿದ್ಧಾಂತ, ಲಘುಮಾನಸ, ಸಿದ್ಧಾಂತಶೇಖರ, ಸಿದ್ಧಾಂತಶಿರೋಮಣಿ, ಕರಣಕುತೂಹಲ, ಖಚರದರ್ಪಣ, ದೃಗ್ಗಣಿತಪ್ರಭೆ, ಸಿದ್ಧಾಂತಸಂಗ್ರಹ ಮೊದಲಾದ ಅನೇಕ ಗಣಿತಗ್ರಂಥಗಳಲ್ಲಿಯೇ ಪ್ರತ್ಯೇಕವಾಗಿ ಹೇಳಿದ್ದು, ಈ ಪ್ರತಿಯೊಂದು ಗ್ರಂಥದಲ್ಲಿ ಆ ಎರಡು ವಿಷಯಗಳೂ ಶಾಸ್ತ್ರಾನುಸಾರವಾಗಿ ಸರಿಯಾಗಿಯೇ ಸಾಧಿಸಲ್ಪಟ್ಟಿರುತ್ತವೆ. ಹೀಗಿರುವಾಗ ಇದೊಂದನ್ನೂ ಇವರು ವಿಚಾರಿಸದೆ ತಮ್ಮ ವಿಪಕ್ಷದವರ ಹೇಳಿಕೆಯೆಂದು ಆಭಾಸವಾಗುವಂತೆ ಕೇವಲ ಅಸಂಬದ್ಧವಾದ ರೀತಿಯಲ್ಲಿ ಅಬದ್ಧವಾದ ಹೇಳಿಕೆಗಳನ್ನು ತಾವಾಗಿಯೇ ಕಲ್ಪಿಸಿಕೊಂಡು, ಅದನ್ನು ನಿರಾಸಮಾಡಲಿಕ್ಕೆ ಯತ್ನಿಸಿದ್ದು ಇವರ ಅಜ್ಞತೆಯನ್ನಷ್ಟೇ ವ್ಯಕ್ತಪಡಿಸುವುದಲ್ಲದೆ ಬೇರೆ ಯಾವುದನ್ನೂ ಸಮರ್ಥಿಸುವುದಿಲ್ಲ.

ಪುಟ ೧೦-೧೨ ರಲ್ಲಿ ಶಾಕಲ್ಯಸಂಹಿತೆಯ— "ತಿಥ್ಯಾದಿಸಾಧನೇ ಕ್ವಾಽಪಿ ನಾಽರ್ಕೇಂದ್ವೋರ್ಬೀಜಯೋಗಿತಾ ।" ಎಂಬ ಶ್ಲೋಕದಲ್ಲಿ ತಿಥ್ಯಾದಿಗಳಿಗೆ ಬೀಜಸಂಸ್ಕಾರವು ಬೇಡವೆಂದು ಸ್ಪಷ್ಟವಾಗಿ ಹೇಳಿರುವುದನ್ನು ನಿರಾಸಮಾಡಲಿಕ್ಕಾಗಿ 'ಇದು ಸಹ ಸೂರ್ಯಸಿದ್ಧಾಂತಾದಿಗ್ರಂಥಗಳಿಗೆ ವಿರುದ್ಧವೂ, ಅಸಮಂಜಸವೂ ಆಗುತ್ತದೆ.' ಎಂದು ಹೇಳಿ ಸೂರ್ಯಸಿದ್ಧಾಂತದ " ಶಾಸ್ತ್ರಮಾದ್ಯಂ ತದೇವೇದಂ ಯತ್ಪೂರ್ವಂ ಪ್ರಾಹ ಭಾಸ್ಕರಃ। ಯುಗಾನಾಂ ಪರಿವರ್ತೇನ ಕಾಲಭೇದೋಽತ್ರ ಕೇವಲಂ ॥" ಎಂಬ ಶ್ಲೋಕವನ್ನೂ, ಅದರ ( ಟೀಕಾಗ್ರಂಥಗಳ ಪೈಕಿ ) ಗೂಢಾರ್ಥಪ್ರಕಾಶಿಕೆಯೊಳಗಿನ "ಮಹಾಯುಗಾನಾಂ ಪರಿವರ್ತೇನ ......... ತದಿದಮಂತರಂ ಪೂರ್ವಗ್ರಂಥೇ ಬೀಜಮಿತ್ಯಾಮನಂತಿ ।" ಈ ವಾಕ್ಯಗಳನ್ನೂ ಉದಾಹರಿಸಿ ಮೇಲಿನ ಶಾಕಲ್ಯಸಂಹಿತಾವಚನಕ್ಕೆ ಏನೊಂದೂ ವ್ಯವಸ್ಥೆಯನ್ನು ಹೇಳದೆ ತಿಥ್ಯಾದಿಗಳಿಗೆ ಬೀಜಸಂಸ್ಕಾರವು ಯೋಗ್ಯವೆಂದೂ, ಈಗಿನ ಮಯಪ್ರೋಕ್ತಸೂರ್ಯಸಿದ್ಧಾಂತವು ಜನ್ಮತಃ ಬೀಜಸಂಸ್ಕೃತವಾಗಿರುವುದೆಂದೂ ಪ್ರಕಟಿಸಿದ್ದಾರೆ. ಆದರೆ ಆ ( ಟೀಕಾಕರ್ತರ ) ವಚನದಲ್ಲಿ —' ಯುಗಮಧ್ಯದಲ್ಲಿಯೂ ಕಾಲಕಾಲಕ್ಕೆ ಗ್ರಹಚಾರಗಳಲ್ಲಿ ಅಂತರ ತೋರಿದರೆ ಅದನ್ನು ಸಾಧಿಸಿ ಅಭಿಯುಕ್ತರು ಗ್ರಂಥಗಳನ್ನು ಬರೆಯುವರು; ಈ ಅಂತರವನ್ನೇ ಪೂರ್ವಾಚಾರ್ಯರು ಬೀಜವೆಂದು ಹೇಳುವರು; ಎಂದಿಷ್ಟೇ ಹೇಳಿದ್ದು ಆ ಬೀಜಸಂಸ್ಕಾರದ ವಿನಿಯೋಗವನ್ನೇನೂ ಹೇಳದೇ ಇರುವುದರಿಂದ -"ಗ್ರಹಣೇ ಗ್ರಹಯೋಗೇ ಚ ಕಾಲಭಾಲ್ಲಗ್ನಸಾಧನೇ । ಶೃಂಗೋನ್ನತ್ಯುದಯಾಸ್ತಾದೌ ಗ್ರಹೇ ಬೀಜಂ ವಿಧೀಯತೇ । ತಿಥ್ಯಾದಿಸಾಧನೇ ಕ್ವಾಽಪಿ ನಾರ್ಕೇಂದ್ವೋರ್ಬೀಜಯೋಗಿತಾ ॥" ಅಂದರೆ— ಗ್ರಹಣಾದಿಗಳಿಗೆ ಬೀಜಸಂಸ್ಕಾರವು ಬೇಕು; ತಿಥ್ಯಾದಿಗಳಿಗೆ

ಆದು ಸರ್ವಥಾ ಬೇಡ; ಎಂದು ಕಂಠೋಕ್ತವಾಗಿ ಹೇಳಿರುವ ಶಾಕಲ್ಯರಂಥ ಪೂರ್ವಾಚಾರ್ಯರ ವಚನಗಳಿಗೆ ಅದು ಪುಷ್ಟಿಯನ್ನೇ ಕೊಡುವುದಲ್ಲದೆ, ನಿರಾಸ ರೂಪವಾದ ದ್ರೋಹವನ್ನು ಸರ್ವಥಾ ಮಾಡಲಾರದು.

ಮೇಲಾಗಿ ಮುಂದೆ ಅದೇ (ಸೂ.ಸಿ.೧೪ನೇ ಅಧ್ಯಾಯದ ೨೩ನೇ ಶ್ಲೋಕದ) ಟೀಕೆಯಲ್ಲಿ – "ಚಕ್ರಾನುಪಾತಜೋ ಮಧ್ಯೋ ಮಧ್ಯವೃತ್ತಾಂಶಜಃ ಸ್ಫುಟಃ | ಕಾಲೇನ ದೃಕ್ಸಮೋ ನ ಸ್ಯಾತ್ತತೋ ಬೀಜಕ್ರಿಯೋಚ್ಯತೇ || ಇತ್ಯಾದಿ ಯಾತ್ರಾಪಾಣಿಗ್ರಹಾದೀನಾಂ ಕಾರ್ಯಾಣಾಂ ಶುಭಸಿದ್ಧಿದಂ |" ಎಂಬ ವರೆಗಿನ ಬೀಜೋಪನಯದ ಶ್ಲೋಕಗಳಿಗೆಲ್ಲ – 'ಇತ್ಯಾದಿವಿಚಾರೇಣ ಕೇನಚಿದ್ಧೃಷ್ಟೇನ ಬೀಜಸ್ಯ ಆರ್ಷಮೂಲಕತ್ವಜ್ಞಾಪನಾಯಾಂತೇ ಅತ್ರ ಬೀಜೋಪನಯಾಧ್ಯಾಯಃ ಪ್ರಕ್ಷಿಪ್ತ ಇತ್ಯವಗಮ್ಯ ನ ವ್ಯಾಖ್ಯಾತ ಇತಿ ಮಂತವ್ಯಂ" ಅಂದರೆ—ಹೀಗೆ ಬಗೆ ಬಗೆಯಿಂದ ವಿಚಾರಿಸಿದರೂ ಈ ಬೀಜೋಪನಯವು ಸೂರ್ಯನು ಮಯನಿಗೆ ಹೇಳಿದ್ದಲ್ಲವೆಂದೇ ಸಿದ್ಧವಾಗುವುದರಿಂದ ಇದು ಸಿದ್ಧಾಂತದಲ್ಲಿ ಸೇರಿದ್ದಲ್ಲ. ಯಾರೋ ಮುಟ್ಠಾಳತನದಿಂದ ಬೀಜೋಪನಯವು ಆರ್ಷಮೂಲವಾದುದೆಂದು ಭ್ರಮೆಯನ್ನುಂಟುಮಾಡುವುದಕ್ಕಾಗಿ ಇದನ್ನು ಸಿದ್ಧಾಂತದಲ್ಲಿ ಸೇರಿಸಿದ್ದಾರೆ.' ಎಂದು ಟೀಕಿಸಿ ಬೀಜೋಪನಯವನ್ನು ಸೂಕ್ತವಾಗಿ ಖಂಡಿಸಿರುವುದರಿಂದ ಆ ಟೀಕಾಕರ್ತರಾದ ರಂಗನಾಥರಿಗೆ ಬೀಜೋಪನಯವು ಸರ್ವಥಾ ಮಾನ್ಯವಾಗಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಇದಲ್ಲದೆ ಪ್ರಚಾರದಲ್ಲಿರುವ ಸೂರ್ಯಸಿದ್ಧಾಂತದ ಯಾವ ಪ್ರತಿಯಲ್ಲಾಗಲಿ, ಕಾಮದೋಗ್ಧ್ರೀ, ಕಲ್ಪವಲ್ಲೀ ಮುಂತಾದ ಅನೇಕಟೀಕೆಗಳಲ್ಲಾಗಲಿ ಯಾವುದರಲ್ಲಿಯೂ ಈ ಬೀಜೋಪನಯವು ಸೂರ್ಯಸಿದ್ಧಾಂತದೊಳಗೆ ಸೇರಿದ್ದೆಂತ ಹೇಳಿರುವುದಿಲ್ಲ. ಮತ್ತು ಹಾಗೆ ಹೇಳಲಿಕ್ಕೆ ಕಾರಣವೂ ಇಲ್ಲ. ಹೀಗಿರುವಾಗ ತಿಥ್ಯಾದಿಗಳಿಗೆ ಬೀಜಸಂಸ್ಕಾರವನ್ನು ನಿಷೇಧಿಸಿರುವ ಪೂರ್ವೋಕ್ತಶಾಕಲ್ಯವಚನದಿಂದ ಬೀಜಸಂಸ್ಕಾರವನ್ನು ಪುರಸ್ಕರಿಸತಕ್ಕ ತಮ್ಮ ಪಕ್ಷಕ್ಕೆ ಬಂದಿರುವ ಬಾಧೆಯನ್ನು ಬೀಜಸಂಸ್ಕಾರವು ನಿರ್ಮೂಲವೆಂದು ಟೀಕಿಸಿರುವ ರಂಗನಾಥರ ಹವಾಲೆಯನ್ನು ಕೊಟ್ಟು ನಿರಾಸಮಾಡಲಿಕ್ಕೆ ಇವರು ಯತ್ನಿಸಿದ್ದು ತೀರ ಅನುಚಿತವೂ ವ್ಯರ್ಥವೂ ಆಗಿರುತ್ತದೆ. ಇದರಿಂದ ಇವರ ಅವಿವೇಕವಷ್ಟೇ ವ್ಯಕ್ತವಾಗುವುದಲ್ಲದೆ ದೃಕ್ಪಂಚಾಂಗದ ಸಮರ್ಥನೆಯು ಹೇಗೂ ಆಗುವುದಿಲ್ಲ.

ಇನ್ನು (ಪುಟ ೧೨ ರಲ್ಲಿ) ಆದ್ಯಸೂರ್ಯಸಿದ್ಧಾಂತವೊಂದಿತ್ತು; ಮಯಪ್ರೋಕ್ತವಾದ ಸೂರ್ಯಸಿದ್ಧಾಂತವು ಬೀಜಸಂಸ್ಕೃತವಾದದ್ದು; ಎಂಬ ಈ ತರದ ಇವರ ಮಾತುಗಳು ನೆಲೆ - ನೇಸರು ಇಲ್ಲದ ಗಲಭೆಯೇ ಹೊರತು ಬೇರೆ ಏನೂ ಹುರುಳಿಲ್ಲದ್ದೆಂದು ಎಲ್ಲರಿಗೂ ತಿಳಿಯುವಂತಿದೆ. ಇವರು ಏನೇ ಹೇಳಿಕೊಂಡರೂ 'ಮಯಾಯ ಪರಿಪೃಚ್ಛತೇ' 'ಸೂರ್ಯಾಂಶಪುರುಷಪ್ರೋಕ್ತಂ ತಂತ್ರಂ ತಿಥ್ಯಾದಿಸಂಮತಂ' ಇತ್ಯಾದಿ ಆರ್ಷವಚನಗಳ ಮೂಲಕ ಕರ್ಮಾರ್ಹ ತಿಥ್ಯಾದಿ

ನಿರ್ಣಯದಲ್ಲಿ ಮಯ-ಸೂರ್ಯ-ಸಂವಾದಾತ್ಮಕವಾದ ಸುಪ್ರಸಿದ್ಧ ಸೂರ್ಯಸಿದ್ಧಾಂತವು ಪ್ರಮಾಣತರವಾಗಿರಲಿಕ್ಕೆ ಯಾವ ಬಾಧಕವೂ ಇರುವುದಿಲ್ಲ.

ಪುಟ ೧೨-೧ಳ ರಲ್ಲಿ ಇವರು ತಮ್ಮ ದೃಕ್ಪಂಚಾಂಗದ ೮-೧೦ ಘಟಿಗಳ ವೃದ್ಧಿಕ್ಷಯದ ತಿಥ್ಯಾದಿಗಳು ಕರ್ಮಾರ್ಹವೆಂದು ತೋರಿಸುವುದಕ್ಕಾಗಿ ಭಾಸ್ಕರೀಯಬೀಜೋಪನಯವೆಂಬ ಗ್ರಂಥದ ಕೆಲವು ಮಾತುಗಳನ್ನು ಎತ್ತಿಕೊಂಡಿದ್ದಾರೆ. ಇದೊಂದು ಗ್ರಂಥವು ಇವರ ಪ್ರಲಾಪಕ್ಕೆ ಪುಷ್ಟಿಕೊಡುವಂತೆ ಸಕೃದ್ದರ್ಶನಕ್ಕೆ ತೋರುವಂತಿದ್ದರೂ ಈ ಗ್ರಂಥವು ಮೂಲತಃ ಭಾಸ್ಕರಾಚಾರ್ಯರ ಕೃತಿಯೆನ್ನುವುದೇ ತೀರ ವಿಸಂಗತವಾಗಿದೆ. ಅದು ಹೇಗಂದರೆ —

(೧) ಶ್ರೀನಿವಾಸದೀಕ್ಷಿತರೆಂಬವರು ಶ್ರಾದ್ಧತಿಥಿನಿರ್ಣಯಕ್ಕೆಂದು "ತಿಥಿನಿರ್ಣಯಕಾರಿಕಾ" ಎಂಬ ಗ್ರಂಥವನ್ನು ಬರೆದಿದ್ದಾರೆ. ಅದರಲ್ಲಿ:— ರಾಹುದರ್ಶನತೋಽನ್ಯತ್ರ ದೃಕ್ಸಿದ್ಧಾ ನೇಷ್ಯತೇ ತಿಥಿಃ ।, ಸೂಕ್ಷ್ಮತಾರಾದಿಕೇ ಯಸ್ಮಾದತಿವೃದ್ಧಿರತಿಕ್ಷಯಃ । ತತಸ್ತಾನಿ ಫಲಾಯೈವ ನ ವ್ರತಾಯೇತಿ ನಿಶ್ಚಿತಂ ॥, ಸರ್ವತ್ರಾತ್ರ ಭವೇನ್ಮಾನಂ ಬೀಜೋಪನಯವಾಸನಾ । ತಸ್ಮಾತ್ಕೇವಲದೃಕ್ಸಿದ್ಧೇ ನೈವ ಶ್ರಾದ್ಧಾದಿಕಂ ಚರೇತ್ ॥ ರವೀಂದುಮಂದಸಂಸಿದ್ಧಾತ್ತತ್ತತ್ತಿಥ್ಯಾದಿಭೋಗತಃ । ಸ್ಯಾತಾಂ ತತ್ಕಾಲಬೀಜೋತ್ಥೌ ಬಾಣವೃದ್ಧಿರಸಕ್ಷಯೌ ॥, ಅತಃ ಪೈತೃಕಕರ್ಮಾದೌ ತತ್ಕಾಲಜಬೀಜಜೈಃ । ಬಾಣವೃದ್ಧಾ ರಸಕ್ಷೀಣಾ ಗ್ರಾಹ್ಯಾ ನಾಽನ್ಯಾ ತಿಥಿಃ ಕ್ವಚಿತ್ ।, ಯದ್ಯೇವಂಭೂತಪಂಚಾಂಗಂ ಸಮೀಪೇ ನೈವ ಲಭ್ಯತೇ । ತದಾ ದೂರಾದ್ಭವಂ ವಾಽಪಿ ಗೃಹ್ಣೀಯಾಚ್ಛ್ರಾದ್ಧಕರ್ಮಣಿ ॥ " ಅಂದರೆ:— ಗ್ರಹಣದ ಹೊರತು ಬೇರೆ ವಿಷಯಗಳಲ್ಲಿ ದೃಕ್ಸಿದ್ಧತಿಥಿಯು ವಿಹಿತವಾದುದಲ್ಲ. ಸೂಕ್ಷ್ಮ (ದೃಕ್ಸಿದ್ಧ) ನಕ್ಷತ್ರ, ತಿಥ್ಯಾದಿಗಳಲ್ಲಿ ಅತಿವೃದ್ಧಿಕ್ಷಯಗಳು ಸಂಭವಿಸುವುದರಿಂದ ಅವುಗಳು ಫಲಾದೇಶಕ್ಕಲ್ಲದೆ ವ್ರತಾದಿಕರ್ಮಾಚರಣೆಗೆ ಯುಕ್ತವಾದವುಗಳಲ್ಲವೆಂದು ನಿರ್ಣಯಿಸಲ್ಪಟ್ಟಿವೆ; ಈ ವಿಷಯದಲ್ಲೆಲ್ಲ ಭಾಸ್ಕರೀಯಬೀಜೋಪನಯವೇ ಸಾಕ್ಷಿಯು; ಆದ್ದರಿಂದ ಕೇವಲ ದೃಕ್ಸಿದ್ಧತಿಥಿಯಲ್ಲಿ ಶ್ರಾದ್ಧಾದಿಗಳನ್ನು ಮಾಡಕೂಡದು; ತಾತ್ಕಾಲಿಕಬೀಜಸಂಸ್ಕೃತಮಂದಸ್ಪಷ್ಟಸೂರ್ಯಚಂದ್ರರಿಂದ ಸಾಧಿಸಿದ ತಿಥಿಗಳಲ್ಲಿ ಬಾಣವೃದ್ಧಿ-ರಸಕ್ಷಯಲಕ್ಷಣಗಳುಂಟಾಗುವುವು. ಪಿತೃಕರ್ಮಾದಿಗಳಲ್ಲಿ ಅಂಥ ಬಾಣವೃದ್ಧಿರಸಕ್ಷಯಲಕ್ಷಣದ ತಿಥಿಯನ್ನೇ ಸ್ವೀಕರಿಸತಕ್ಕದ್ದು. ಬೇರೆ ತರದ (ಅದಕ್ಕೂ ಹೆಚ್ಚಿನ) ವೃದ್ಧಿಕ್ಷಯದ ತಿಥಿಯನ್ನು ಸ್ವೀಕರಿಸಬಾರದು. ಈ ಪ್ರಕಾರ ವಿಹಿತವಾದ ಲಕ್ಷಣದ ತಿಥ್ಯಾದಿಗಳುಳ್ಳ ಪಂಚಾಂಗವು ಸಮೀಪದಲ್ಲಿ ಸಿಗದಿದ್ದರೆ ದೂರದೇಶದಿಂದ ತಂದಾದರೂ ಉಪಯೋಗಿಸಿಕೊಳ್ಳತಕ್ಕದ್ದು, ಎಂದಿರುವದು. ಈ ಶ್ರೀನಿವಾಸರು ಭಾಸ್ಕರೀಯಬೀಜೋಪನಯವನ್ನು ಮನನಮಾಡಿದವರಾಗಿದ್ದು, ಆದರತಾತ್ಪರ್ಯವನ್ನು ತಮ್ಮ ಕಾರಿಕೆಯಲ್ಲಿ ಮೇಲೆ ಕಾಣಿಸಿದಂತೆ ಹೇಳಿದ್ದಾ

ಮೇಲಿಂದ ಇವರು ಲಕ್ಷಿಸಿರುವ ಬೀಜೋಪನಯವು ಬಃಣವೃದ್ಧಿಕ್ಷಯಲಕ್ಷಣ ದ ತಿಥಿಗಳನ್ನೇ ತರುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ. ಆದರೆ ಈಗ ಈ ನವೀನದೃ ಕ್ಪಕ್ಷೀಯರು ಎತ್ತಿಕೊಂಡಿರುವ ಬೀಜೋಪನಯವು ಯಾವ ರೀತಿಯಿಂದಲೂ ಆ ವೃದ್ಧಿಕ್ಷಯಗಳಿಗೆ ಹೊಂದದೆ ಅತ್ಯಂತವಿರುದ್ಧವಾಗಿರುತ್ತದೆ. ಆದ್ದರಿಂದ ಶ್ರೀನಿವಾಸ ರು ಆಧರಿಸಿದ ಬೀಜೋಪನಯವು ಇದಲ್ಲವೆಂಬುದು ತಾನೇ ಸಿದ್ಧವಾಗುವುದಲ್ಲದೆ ಇವರು ಆಧರಿಸುವ ಈ ಗ್ರಂಥವು ತೀರ ವಿಪರ್ಯಸ್ತವಾದುದೆಂದು ವಿಚಾರವಂತ ರಿಗೆಲ್ಲ ತಾನಾಗಿ ತಿಳಿಯುವಂತಿದೆ. ಆದರೂ ಸ್ವಪಕ್ಷಸಮರ್ಥನೆಯ ಬಗ್ಗೆ ಇವರು ಈ ವಿಸಂಗತಗ್ರಂಥವನ್ನೇ ಬಲವಾಗಿ ಹಿಡಿದುಕೊಂಡಿರುತ್ತಾರೆ.

( ೨ ) ಅಂದಮೇಲೆ ಭಾಸ್ಕರಾಚಾರ್ಯರಿಂದ ರಚಿತವಾದ್ದೆನ್ನುವ ಈ ಗ್ರಂಥವು ಎಷ್ಟು ಅಸ್ತ-ವ್ಯಸ್ತವಾಗಿದೆಯೆಂಬುದನ್ನಾದರೂ ಇವರು ನೋಡಬಾರ ದೇ ? ಈ ಗ್ರಂಥವು ಪ್ರಕಟವಾಗುವುದಕ್ಕಿಂತ ಬಹು ಕಾಲದ ಮುಂಚೆಯೇ ಮುದ್ರಿ ತವಾಗಿ ಪ್ರಚಾರದಲ್ಲಿರುವ ' ಜ್ಯೋತಿಃಸಿದ್ಧಾಂತಸಂಗ್ರಹ ' ವೆಂಬ ಗಣಿತಗ್ರಂಥ ದಲ್ಲಿ ಭಾಸ್ಕರೀಯಬೀಜೋಪನಯದ ಶ್ಲೋಕವು ಉದ್ಧರಿಸಲ್ಪಟ್ಟಿದ್ದು, ಆದರಲ್ಲಿ- " ಕರ್ಮಾರ್ಹಕಾಲಾನಯನೇಷ್ವಯೋಗ್ಯಃ " ಅಂದರೆ — ಅಂತಹ ಸಂಸ್ಕಾರ ಗಳಿಂದ ಕೂಡಿದ ಚಂದ್ರನಿಂದ ಕರ್ಮಾರ್ಹವಾದ ತಿಥ್ಯಾದಿಗಳನ್ನು ಸಾಧಿಸುವುದು ಅಯೋಗ್ಯವು; ಎಂದು ಭಾಸ್ಕರಾಚಾರ್ಯರೇ ಹೇಳಿದ್ದನ್ನು ಕಾಣಿಸಿರುವುದಲ್ಲದೆ, ಅದರ ಮೇಲೆ - " ಇತ್ಯುಕ್ತಂ ಭಾಸ್ಕರಾಚಾರ್ಯವಚನಂ ಶಿಷ್ಟಸಂಮತಂ" ಅಂದರೆ — 'ಹೀಗೆ ಕರ್ಮಾರ್ಹತಿಥ್ಯಾದಿಗಳಿಗೆ ಅಂಥ ಸಂಸ್ಕಾರಗಳು ಯುಕ್ತವಲ್ಲ ವೆಂದು ಹೇಳಿರುವ ಭಾಸ್ಕರಾಚಾರ್ಯರ ವಚನವು ಶಿಷ್ಟಸಂಮತವಾಗಿದೆ; ' ಎಂದು ಗ್ರಂಥಕರ್ತರು ತಮ್ಮ ಸ್ವಾಭಿಪ್ರಾಯವನ್ನು ಕೂಡಾ ಸ್ಪಷ್ಟಪಡಿಸಿರುತ್ತಾರೆ. ಈಗ ಇವರು ತೋರಿಸುವ ಇತ್ತೀಚೆಗೆ ಪ್ರಕಟವಾದ ಗ್ರಂಥದಲ್ಲಿ ಅವಕ್ಕೆಲ್ಲ ವಿರೋಧವಾ ಗಿ " ಕರ್ಮಾರ್ಹಕಾಲಾನಯನೇಷು ಯೋಗ್ಯಃ ' ಎಂದು ಮೂಲಾರ್ಥವು ತೀರ ವಿಪರ್ಯಾಸಮಾಡಲ್ಪಟ್ಟಿದೆ.

( ೩ ) ಇದೂ ಅಲ್ಲದೆ ಈ ಗ್ರಂಥದಲ್ಲಿ ಗ್ರಂಥಕರ್ತರಿಗೆ ಸಮ್ಮತವಾದ ಚರಬೀಜಸಂಸ್ಕಾರದ ಏರ್ಪಾಡಿಗೆ ಆಧಾರವಾಗಿ ಸ್ವೋಪಲಬ್ಧಿಯನ್ನು ( ಅಂದರೆ- ತಮಗೆ ಪ್ರತ್ಯಕ್ಷಕಂಡದ್ದನ್ನು ) ಹೇಳುವ ಶ್ಲೋಕಗಳಲ್ಲಿ ' ಓಜಾಂತಯೋರ್ವಿ- ಧೋಸ್ತುಂಗಾಚ್ಛಶಾಂಕಾತ್ಕರ್ಗ್ರಹೌ ಯದಿ | ಚತುಸ್ತ್ರಿಂಶತ್ಕಲಾಹೀನಂ ವೈಷಮ್ಯಂ ತು ಸಮೀಕ್ಷ್ಯತೇ || ' ಎಂದರೆ — ಚಂದ್ರೋಚ್ಚದ ದೆಸೆಯಿಂದ ಓಜಪದಾಂತಗಳಲ್ಲಿ ಸೂರ್ಯ-ಚಂದ್ರರಿದ್ದಾಗ ೩೪ ಕಲೆಗಳ (ಪರಮ)ವೈಷಮ್ಯವು ಕಂಡುಬರುತ್ತದೆ; ಎಂದಿದ್ದು ಅಲ್ಲಿಯೇ ಮುಂದೆ ಚರಬೀಜಫಲಗಳನ್ನು ಹೇಳುವಾ ಗ - " ಗಜಾದ್ರಯಶ್ಚೇತಿ ಫಲಂ ಋಣೇ ಋಣಂ ' ಎಂದು ೭೮ ಲಿಪ್ತಿಗಳ ವೈಷಮ್ಯವನ್ನು ಹೇಳಿರುವುದು ಮತ್ತೊಂದು ವಿಪರೀತವಾಗಿದೆ. ಈ ಮೊದಲಾದ

ಇನ್ನೂ ಅನೇಕ ವಿಸಂಗತಿಗಳು ಇದರಲ್ಲಿರುವುದರಿಂದ ಈ ಗ್ರಂಥವು ಪೂರ್ವಾಪರ ಸಂಬಂಧವಿಲ್ಲದ ನವೀನಕಲ್ಪನೆಯೆಂಬುದು ಸ್ಪಷ್ಟವಾಗುತ್ತದೆ.

( ೪ ) ಮತ್ತು ಭಾಸ್ಕರಾಚಾರ್ಯರು ' ತಮ್ಮ ಸುಪ್ರಸಿದ್ಧವಾದ " ಸಿದ್ಧಾಂತಶಿರೋಮಣಿ ' ಯನ್ನು ರಚಿಸಿದ ಮೂರನೆ ವರ್ಷವೂ, ' ಕರಣಕುತೂಹಲ 'ವೆಂಬ ಪಂಚಾಂಗಸಾಧಕವಾದ ಕರಣಗ್ರಂಥವನ್ನು ರಚಿಸುವುದಕ್ಕಿಂತ ಬಹು ವರ್ಷಗಳ ಮುಂಚೆಯೂ ಈ ಬೀಜೋಪನಯವು ರಚಿತವಾದದ್ದೆಂದು ಇದರಲ್ಲಿ ಹೇಳಿರುವ ಕಾಲದ ಮೇಲಿಂದಲೇ ನಿರ್ವಿವಾದವಾಗಿ ಸಿದ್ಧವಾಗುತ್ತಿರುವಾಗ ಈ ಬೀಜೋಪನಯದಲ್ಲಿ ಹೇಳಿರುವ ಹಲವು ವಿಷಯಗಳು ಅ.ರ ಆ ಎರಡು ಗ್ರಂಥಗಳಿಗೂ ತೀರಾ ವಿರೋಧವಾಗಿರಲಿಕ್ಕೆ ಕಾರಣವಿದ್ದಿಲ್ಲ.

( ೫ ) ಈ ಪ್ರಕಾರ ಈ ಗ್ರಂಥದಲ್ಲಿ ಅನೇಕ ವಿರುದ್ಧಾಂಶಗಳೂ ವಿಪರ್ಯಾಸಗಳೂ, ವಿಸಂಗತಿಗಳೂ ಸೇರಿರುವುವಲ್ಲದೆ ಹಲವು ತರದ ಅಶುದ್ಧಿಗಳೂ, ಅಬದ್ಧಗಳೂ ಸಹ ತೋರಿಬರುತ್ತವೆ.

( ೬ ) ಮೇಲಾಗಿ ಭಾಸ್ಕರಾಚಾರ್ಯರ ನಂತರ ಈ ವರೆಗೆ ಆಗಿ ಹೋದ ಅಸಂಖ್ಯಾತವಿದ್ವಜ್ಜನರ ಪೈಕಿ ಯಾವ ( ಗಣಿತ-ಕರಣ ) ಗ್ರಂಥಕರ್ತರಾಗಲೀ, ಪಂಚಾಂಗಕರ್ತರಾಗಲಿ ಯಾರೊಬ್ಬರೂ ಈ ಗ್ರಂಥವಲ್ಲಿ ಹೇಳಿರುವ ವಿಶೇಷ ಸಂಸ್ಕಾರಗಳನ್ನು ತಿಥ್ಯಾದಿ ಪಂಚಾಂಗಗಣಿತದಲ್ಲಿ ಉಪಯೋಗಿಸಿಕೊಂಡದ್ದು ಎಲ್ಲಿಯೂ ಕಂಡುಬರುವುದಿಲ್ಲ. ಇಷ್ಟೇ ಅಲ್ಲ. —

( ೭ ) ಈ (ಮುದ್ರಿತ) ಗ್ರಂಥದ ಆದಿಯಲ್ಲಿ ಏಕೇಂದ್ರನಾಥಘೋಷವರು ಬರೆದಿರುವ ( ಆಂಗ್ಲಭಾಷೆಯ ) ಪ್ರಸ್ತಾವನೆಯಲ್ಲಿ ಪ್ರಕಟಿಸಲ್ಪಟ್ಟಿರುವ ವಿಷಯಗಳ ಮೇಲಿಂದ ಇದೊಂದು ಪ್ರಚ್ಛನ್ನವಾಗಿ ತಯಾರಿಸಲ್ಪಟ್ಟ ಕೃತ್ರಿಮಗ್ರಂಥವೆಂದು ಊಹಿಸಲಿಕ್ಕೆ ಸಾಕಷ್ಟು ಅವಕಾಶವಿದೆ. ಈ ವಿಷಯಗಳನ್ನೆಲ್ಲ ಕೂಲಂಕಷವಾಗಿ ವಿವೇಚಿಸುವಲ್ಲಿ ಹಲವು ತರದ ದೋಷಗಳಿಂದ ಕೂಡಿರುವ ಇಂಥ ನಿಕೃಷ್ಟ ಗ್ರಂಥವನ್ನು ಭಾಸ್ಕರಾಚಾರ್ಯರಂತಹ ಸುಪ್ರಸಿದ್ಧ ವಿದ್ವನ್ಮಣಿಗಳು ರಚಿಸಿರುವುದು ತೀರ ಅಸಂಭವವಾಗಿರುವುದರಿಂದ ಇದು ಭಾಸ್ಕರಾಚಾರ್ಯರ ಕೃತಿಯೆನ್ನುವುದು ತೀರ ವಿಸಂಗತವಾಗಿದೆ*. ಈ ಯಾವುದೊಂದು ವಿಷಯುವನ್ನೂ ಇವರು ವಿವೇಚಿಸದೇ, ( ಈ ಕಡೆ ಏನೂ ಲಕ್ಷ್ಯವಿಡದೆ ) ಕೇವಲ ಸ್ವಮತೋತ್ಥಾಪನೆಗಾಗಿ ಇದು ಭಾಸ್ಕರೀಯಕೃತಿಯೇ ಸರಿಯೆಂದೂ, ಈಗಿರುವ ರೂಪದಲ್ಲಿಯೇ ಇದು

* ದಿವಂಗತರಾದ ಮಹಾಮಹೋಪಾಧ್ಯಾಯ ಶ್ರೀ ಸುಧಾಕರ ದ್ವಿವೇದಿಗಳು ಸಹ ತಮ್ಮ ಸುಧಾವರ್ಷಿಣಿಯೆಂಬ ಹೆಸರಿನ ಸೂರ್ಯಸಿದ್ಧಾಂತದ ಟೀಕೆಯಲ್ಲಿ ಇದರಂತೆಯೇ ಅಭಿಪ್ರಾಯಪಟ್ಟಿರುವರು. ಮತ್ತು ಮುದ್ರಿತವಾಗಿರುವ ಈ ಬೀಜೋಪನಯವು ಭಾಸ್ಕರಾಚಾರ್ಯರ ಕೃತಿಯಲ್ಲವೆಂಬುದನ್ನು ಸಕಾರಣವಾಗಿ ನಿರೂಪಿಸಿರುವ ಪ್ರತ್ಯೇಕ ಗ್ರಂಥವೊಂದು ಸದ್ಯದಲ್ಲಿ ಪ್ರಕಟವಾಗಲಿಕ್ಕಿರುವುದು. ಆದ್ದರಿಂದ ಈ ವಿಷಯುವು ಇನ್ನಷ್ಟು ಸ್ಪಷ್ಟವಾಗುವದು.

ಭಾಸ್ಕರಾಚಾರ್ಯರಿಂದ ರಚಿತವಾಗಿರುವುದೆಂದೂ ಆಗ್ರಹದಿಂದ ಛಲಿಸುವುದಾದರೆ ಇಂಥ ಲೌಕಿಕ ( ಅನಾರ್ಷ ) ಕೃತಿಯು ತಿಥ್ಯಾದಿಗಳಲ್ಲಿ ಬೀಜಸಂಸ್ಕಾರವು ಬೇಡ ವೆಂಬ ಆರ್ಷವಚನವನ್ನೇನೂ ಬಾಧಿಸಲಾರದಾದ್ದರಿಂದ ಇಂಥ ನಿರ್ಮೂಲಗ್ರಂಥ ದ ಆಧಾರದಿಂದ ಇವರು ಹೇಳಿರುವ ಮತ್ತು ಹೇಳಬಹುದಾದ ಮಾತುಗಳೆಲ್ಲವೂ ಸಹಜವಾಗಿ ಅಪ್ರಮಾಣವೆಂದಾಗುವುವು.

ಮುಂದೆ ತಮ್ಮ ಪೂರ್ವಾಚಾರದ ಗ್ರಂಥಗಳನ್ನೆಲ್ಲ ಅಲ್ಲಗಳೆದು ಪಾಶ್ಚಾತ್ಯಪದ್ಧತಿಯನ್ನು ಸ್ವೀಕರಿಸಿದ್ದು ತಮ್ಮ ಮನಸ್ಸಿನಲ್ಲಿಯೇ ಕಲಂಕವಾಗಿ ತೋರಿಯೋ ಏನೋ ಪುಟ ೧೪ ರಲ್ಲಿ 'ಮ್ಲೇಚ್ಛಾ ಹಿ ಯವನಾಸ್ತೇಷು ' ಎಂಬ ಶ್ಲೋಕವನ್ನುದಾಹರಿಸಿ ಈ ಶಾಸ್ತ್ರದ ವಿಷಯದಲ್ಲಿ ಅವರಾದರೂ ಮಾನ್ಯರೆಂದು ಹೇಳಿಕೊಂಡು ತಮ್ಮ ಕೃತಿಗೆ ತಾವಾಗಿಯೇ ಆಕ್ಷೇಪ-ನಿರಾಸಗಳನ್ನು ಕಲ್ಪಿಸಿಕೊಂ ಡಿದ್ದಾರೆ. ಈ ವಿಷಯವಾಗಿ ನಾವು ಏನೂ ಹೇಳಬೇಕಾಗಿಲ್ಲ. ಶಿಷ್ಟ ಜನರ ಆಚರಣೆ ಗೆ ಶಾಸ್ತ್ರವೇ ಪರಮಪ್ರಮಾಣವೆಂಬುದು ಲೋಕಪ್ರಸಿದ್ಧವಾಗಿದೆ. ಹಿಂದೆ ನಾವು ವಿವರಿಸಿರುವ ಅನೇಕ (ಶಾಸ್ತ್ರೀಯ ) ವಿಷಯಗಳಿಂದ ಪಾಶ್ಚಾತ್ಯರು ಹೇಳುವ ಆ ಜ್ಯೋತಿಷಸಂಸ್ಕಾರಗಳು ಶಾಸ್ತ್ರದಂತೆ ಗ್ರಹಣಾದಿಗಳಿಗೆ ಮಾತ್ರ ಗ್ರಾಹ್ಯವಾದಂಥ ವುಗಳೆಂದೂ, ಪಂಡಿತರೇ ಹೇಳಿದರೂ ಅವು ತಿಥ್ಯಾದಿಗಳಿಗೆ ಗಾಹ್ಯವಲ್ಲವೆಂದೂ ( ಶಾಸ್ತ್ರ ) ಸಿದ್ಧಾಂತವಾಗಿರುವುದರಿಂದ, ಇವರ ನವೀನ ದೃಕ್ಪಂಚಾಂಗದ ೮-೧೦ ವೃದ್ಧಿಕ್ಷಯ ಬರುವ ತಿಥಿಗಳು ಆದರಿಂದ ಹೇಗೂ ಗ್ರಾಹ್ಯವೆಂತಾಗುವುದಿಲ್ಲ.

ಅಲ್ಲಿಯೇ ಮುಂದೆ ಪ್ರಳಯದವರೆಗೂ ಬಾಣವೃದ್ಧಿ-ರಸಕ್ಷಯವೇ ಇರುವುದು ಶಕ್ಯವಿಲ್ಲವೆಂದೂ, ಈಗಿನ ತಮ್ಮ ೮-೧೦ ವೃದ್ಧಿ-ಕ್ಷಯದ ತಿಥಿಯೇ ಕರ್ಮಾರ್ಹವೆಂದೂ ಸಾಧಿಸುವುದಕ್ಕಾಗಿ ' ಷಟ್‌ಷಷ್ಟಿದಂಡಾಭ್ಯಧಿಕಾ' 'ತಚ್ಚ ತ್ರಿಮುಹೂರ್ತವೃದ್ಧ್ಯಾ ಸಂಪದ್ಯತೇ ' 'ಷಣ್ಮುಹೂರ್ತಕ್ಷಯಪ್ರಸಂಗಾತ್' ಎಂಬೀ ವಚನಗಳನ್ನು ಉದಾಹರಿಸಿದ್ದಾರೆ. ಸರಿಯಾಗಿ ವಿಚಾರಿಸಿದಲ್ಲಿ ಈ ವಚ ನಗಳು ಬಾಣವೃದ್ಧಿರಸಕ್ಷಯದ ಪಕ್ಷಕ್ಕೆ ಬಾಧಕವೂ ಅಲ್ಲ; ೮-೧೦ ವೃದ್ಧಿಕ್ಷಯಕ್ಕೆ ಸಾಧಕವೂ ಅಲ್ಲ. ವಾಚಕರ ಕಣ್ಣು ಕಟ್ಟುವುದಕ್ಕಾಗಿ ಪೂರ್ವಾಪರ ಸಂದರ್ಭಗಳ ನ್ನು ಮುಚ್ಚಿಟ್ಟು ಅಲ್ಲಲ್ಲಿ ಒಂದೊಂದು ತುಂಡು ವಚನವನ್ನು ಎತ್ತಿ ತೋರಿಸಿ ಮಾಡಿದ ಇಂದ್ರಜಾಲವಿದು. ನೋಡಿರಿ! ಈ ತುಂಡು ವಚನಗಳಲ್ಲಿ ಮೊದಲನೆಯ ತುಂಡಿನ ಇಡೀ ಶ್ಲೋಕವು — " ಷಟ್‌ಷಷ್ಟಿದಂಡಾಭ್ಯಧಿಕಾ ತಿಥಿರ್ಯಾ ಕೃತ್ಸ್ನಾಪರಾಹ್ಣದ್ವಯಮಶ್ನುತೇ ಸಾ | ಸೂಕ್ಷ್ಮೈವ ನಾನ್ಯಾ ತು ತಥಾ ವಿಧಾ ಸ್ಯಾತ್ ಷೋಢಾ ಭಿಧಾ ಹಿ ಸ್ಮೃತಿಷು ಪ್ರಸಿದ್ಧಾ ‖ " ಎಂತ ಇರು ತ್ತದೆ. ಅಂದರೆ:— ಸ್ಮೃತಿಗಳಲ್ಲಿ ತಿಥಿವ್ಯಾಪ್ತಿಯ ಭೇದವು ಆರು ಪ್ರಕಾರವೆಂದು ಪ್ರಸಿದ್ಧವಾಗಿರುವುದು. ಆ ಪೈಕಿ ಎರಡು ದಿನಗಳಲ್ಲಿಯೂ ಅಪರಾಹ್ಣದಲ್ಲಿ ಸಂಪೂ ರ್ಣವ್ಯಾಪ್ತಿಯು ಇರುವುದು ಒಂದು ಬಗೆ; ಅದು ಆರು ಘಟಿಗಿಂತ ಹೆಚ್ಚು ವೃದ್ಧಿ

ಹೊಂದುವಂಥ ಸೂಕ್ಷ್ಮತಿಥಿಯಿಂದಲೇ ಸಿದ್ಧವಾಗುತ್ತದಲ್ಲದೆ ಬೇರೆ ತರದ ತಿಥಿಯಿಂದ ಆಗುವದಿಲ್ಲವೆಂಬ ಅರ್ಥವನ್ನು ಈ ಶ್ಲೋಕದಲ್ಲಿ ಹೇಳಿದೆ. ಇದರಿಂದಲೇ ಈ ಶ್ಲೋಕಕರ್ತರು ಸಾಕಷ್ಟು ಶಾಸ್ತ್ರಪರಿಶೀಲನೆಯನ್ನು ಮಾಡಿಲ್ಲವೆಂದು ಸಿದ್ಧವಾಗುವದು. ಯಾಕಂದರೆ— ೬ ಘಟಿ ವೃದ್ಧಿಯಾದ ಹೊರತು ಉಭಯಾಪರಾಹ್ಣಗಳ ಪೂರ್ಣ ವ್ಯಾಪ್ತಿಯು ಹೊಂದುವದಿಲ್ಲವೆಂಬುದೇ ಧರ್ಮಶಾಸ್ತ್ರಜ್ಞಾನವಿಲ್ಲದವರ ಮಾತು. ದಿವಾ ಪ್ರಮಾಣವು ೩೦ ಘಟಿಗಿಂತ ಕಡಿಮೆಯಾಗಿದ್ದಾಗ ಅಪರಾಹ್ಣದ ಮಾನವೂ ಕಡಿಮೆಯಾಗುವದರಿಂದ ಆಗ ತಿಥಿವೃದ್ಧಿಯು ೬ ಘಟಿಗಿಂತ ಕಡಿಮೆಯಾಗಿದ್ದರೂ ಉಭಯಾಪರಾಹ್ಣಗಳ ಪೂರ್ಣವ್ಯಾಪ್ತಿಯನ್ನು ಹೊಂದಿರುವ ಸಂಭವವು ಇದ್ದೇ ಇದೆ. ಇವರಂತೆ ಸಿದ್ಧಾಂತಗಣಿತಾನುಸಾರಿಯಾದ ಬಾಣವೃದ್ಧಿ, ರಸಕ್ಷಯ ಲಕ್ಷಣದ ತಿಥಿಯಾದರೂ ಹಲವು ಕಡೆಗಳಲ್ಲಿ ಉಭಯಾಪರಾಹ್ಣಗಳ ಸಂಪೂರ್ಣ ವ್ಯಾಪ್ತಿಯನ್ನು ಹೊಂದಿಯೇ ಹೊಂದುವದು. ಈ ವಿಷಯವು ಈ ಶ್ಲೋಕಕರ್ತರ ಕಲ್ಪನೆಗೆ ಬರಲಿಲ್ಲವೆಂದು ತೋರುತ್ತದೆ. ಮೇಲಾಗಿ ಈ ಶ್ಲೋಕವನ್ನು ರಚಿಸಿದ ಚಂದ್ರಶೇಖರಸಿದ್ಧಾಂತಿಗಳೆಂಬವರು ಆಧುನಿಕ (ನವೀನ) ದೃಗ್ಗಣಿತಾಭಿಮಾನಿಗಳಲ್ಲೊಬ್ಬರಾಗಿರುವರು. ದೃಗ್ಗಣಿತದ ಪಕ್ಷಪಾತಿಗಳೇ ತಮಗೆ ಅನುಕೂಲವಾಗಿ ಒಂದು ಹೊಸ ಧರ್ಮಶಾಸ್ತ್ರಗ್ರಂಥವನ್ನು ಬರೆದುಕೊಂಡರೆ, ಅದು ಸರ್ವಜನಸಮ್ಮತವಾದ ಪ್ರಮಾಣವೆಂದಾದೀತೋ ? ಇರಲಿ ! ಹೀಗೆ ಉಭಯಾಪರಾಹ್ಣವ್ಯಾಪ್ತಿಯು ದಿವಾಪ್ರಮಾಣವು ಕಡಿಮೆಯಾಗಿದ್ದಾಗ ಬಾಣವೃದ್ಧಿ ರಸಕ್ಷಯ ಲಕ್ಷಣದ ತಿಥಿಗಳಿಗೂ ಹೊಂದುವುದೆಂದು ತೋರಿಸಿದ್ದರಿಂದಲೇ ಮುಂದಿನ ' ತಚ್ಚ ತ್ರಿಮುಹೂರ್ತವೃದ್ಧೌ ಸಂಪದ್ಯತೇ ' ಎಂಬ ವಚನಕ್ಕೂ ಅವಕಾಶವನ್ನು ತೋರಿಸಿದಂತಾಯಿತು. ಹೇಗಂದರೆ — ಮುಹೂರ್ತವೆಂಬುದು ದಿವಾಪ್ರಮಾಣದ ಅಂಶವಾಗಿರುವದರಿಂದ ದಿವಾಮಾನವು ಕಡಿಮೆಯಿದ್ದಾಗ ಮುಹೂರ್ತದ ಪ್ರಮಾಣವೂ ಕಡಿಮೆಯಾಗುವದು. ಆಗ ೬ ಘಟಿಗಳಿಗಿಂತ ಕಡಿಮೆ ವೃದ್ಧಿ ಬರುವ ಶಾಸ್ತ್ರಸಿದ್ಧತಿಥಿಗಳಿಗೂ ಮೂರು ಮುಹೂರ್ತಗಳಷ್ಟು ವೃದ್ಧಿಯು ಸಂಭವಿಸುವದು. ಇದು ಧರ್ಮಶಾಸ್ತ್ರಜ್ಞರಿಗೆಲ್ಲ ತಿಳಿದ ಸಂಗತಿಯೇ ಸರಿ.

ಇನ್ನು ೩ ನೆಯದಾದ " ಷಣ್ಮುಹೂರ್ತಕ್ಷಯಪ್ರಸಂಗಾತ್ " ಎಂಬ ಕಾಲಮಾಧವದ ವಚನಖಂಡವು ಅದರ ಹಿಂದಿನ ಖಂಡ ಸಹಿತವಾಗಿ ಒಟ್ಟಿಗೆ — " ಅಪರೇದ್ಯುರಪರಾಹ್ಣಸ್ಪರ್ಶಹೀನಸ್ಯ ಪೂರ್ವದಿನೇ ಸಾಯಂವ್ಯಾಪ್ತೇಃ ಅವಶ್ಯಂ ಭಾವಾತ್ | ಅನ್ಯಥಾ ಷಣ್ಮುಹೂರ್ತಕ್ಷಯಪ್ರಸಂಗಾತ್" ಎಂದಿದ್ದು, ಇದರ ತಾತ್ಪರ್ಯವು:— ಪರದಿನದಲ್ಲಿ ಅಪರಾಹ್ಣಕ್ಕೆ ಮುಟ್ಟದಿರುವ ತಿಥಿಯು ಪೂರ್ವದಿನದ ಸಾಯಾಹ್ನದಲ್ಲಾದರೂ ಅವಶ್ಯವಾಗಿ ಇದ್ದೇ ಇರುವುದು ಹಾಗಿಲ್ಲವಾಗಬೇಕಾದರೆ, ೬ ಮುಹೂರ್ತಗಳಷ್ಟು ತಿಥಿಕ್ಷಯವಾಗುವ ಪ್ರಸಂಗವು ಬರಬೇಕಾಗಿದ್ದು ಹಾಗೆಂದಿಗೂ ಬರುವದಿಲ್ಲವಾದ ಕಾರಣ ಅಪೇಕ್ಷಿತ ತಿಥಿಯು

ಅಪರಾಹ್ಣ, ಸಾಯಾಹ್ನಗಳ ಪೈಕಿ ಒಂದು ಕಾಲಕ್ಕಾದರೂ ನಿಯತವಾಗಿ ಹೊಂದಿಕೊಂಡೇ ಇರುವದು." ಎಂದಿದೆ. ಅಪರಾಹ್ಣ, ಸಾಯಾಹ್ನಗಳೆರಡೂ ಕೂಡಿ ಆರು ಮುಹೂರ್ತಗಳಷ್ಟು ಕಾಲವಾಗುವದು ನಿಯತವಾಗಿರುವದರಿಂದ ಆವೆರಡರ ಪೈಕಿ ಒಂದಕ್ಕಾದರೂ ನಿರ್ದಿಷ್ಟ ತಿಥಿಯು ಸ್ಪರ್ಶವಾಗದೆ ಇರುವದಿಲ್ಲವೆಂಬುದನ್ನು ಸಕಾರಣವಾಗಿ ದೃಢೀಕರಿಸಲಿಕ್ಕಾಗಿ ಇಲ್ಲಿ "ಷಣ್ಮುಹೂರ್ತ" ವೆಂದು ಹೇಳಿರುವುದೆಂದು ಸಹಜವಾಗಿ ಎಲ್ಲರಿಗೂ ತಿಳಿಯುವಂತಿದೆ. ಮತ್ತು ಈ ನಿಯಮವು ಸಿದ್ಧಾಂತ ಗಣಿತಾನುಸಾರವಾಗಿ ಬರುವ ತಿಥಿಕ್ಷಯಕ್ಕೆ ಸರಿಯಾಗಿ ಕೂಡುತ್ತದೆ. [ ಇನ್ನು ಷಣ್ಮುಹೂರ್ತವೆಂದರೆ ( ನಿಯತವಾಗಿ ) ೧೫ ಘಟಿಗಳೆಂತಲೂ, ಅಷ್ಟರ ಮಟ್ಟಿಗೆ ತಿಥಿಕ್ಷಯು ಬರುವದು ಅಸಂಭವವೆಂದು ಹೇಳಿರುವ ಈ ವಚನದಿಂದ ಅಷ್ಟರವರೆಗೆ ಅಂದರೆ ಸುಮಾರು ೧೧॥ ಘಟಿಗಳ ವರೆಗೆ ತಿಥಿಕ್ಷಯ ಬಂದರೂ ಅದು ಗ್ರಾಹ್ಯವೆಂದಂತಾಯಿತು; ಎಂತಲೂ ಕೆಲವರು ಅಪಲಾಪಮಾಡುವದು ಈ ಮೂಲವಚನದ ತಾತ್ಪರ್ಯಕ್ಕೆ ತೀರ ವಿರುದ್ಧವಾಗಿರುವದಲ್ಲದೆ ದಿವಾ-ರಾತ್ರಿಗಳ ಪ್ರಮಾಣಾನುಸಾರವಾಗಿ ಆಯಾ ಮುಹೂರ್ತದ ಪ್ರಮಾಣದಲ್ಲಿಯೂ ಹೆಚ್ಚು-ಕಡಿಮೆಯಾಗುವದೆಂಬ ಜ್ಞಾನವು ಅವರಿಗಿಲ್ಲವೆಂಬುದನ್ನು ಪ್ರಕಟಗೊಳಿಸುತ್ತದೆ ] ಇದಲ್ಲದೆ ಕರ್ಮಭೂಮಿಯಾದ ನಮ್ಮ ಈ ಭರತಖಂಡದಲ್ಲಿಯೇ ೨೫ ಘಟಿಯು (ಅದಕ್ಕಿಂತ ಕಡಿಮೆಯಾಗಿಯೂ ಸಹ ) ದಿನಮಾನವು ಸಂಭವಿಸುತ್ತಿದ್ದು ಆಗ ೬ ಮುಹೂರ್ತಗಳೆಂದರೆ ೧೦ ಘಟಿಗಳಾಗುವದರಿಂದ ಅಷ್ಟು ತಿಥಿಕ್ಷಯು ಬರುವ ಇವರ ನವೀನ ದೃಕ್ಪಂಚಾಂಗವು ಇವರೇ ಉದಾಹರಿಸಿರುವ ಈ ಕಾಲಮಾಧವ ವಚನದಿಂದಲೇ ಕಂಠೋಕ್ತವಾಗಿ ನಿಷೇಧಿಸಲ್ಪಟ್ಟಿರುವದೆಂದು ಅಭಿಜ್ಞರಿಗೆ ತಿಳಿಯದಿರಲಿಕ್ಕಿಲ್ಲ. ಆದ್ದರಿಂದ ಈ ವಚನವು ಇವರ ಪಂಚಾಂಗವು ಶಾಸ್ತ್ರವಿರುದ್ಧವೆಂದು ನಿಷ್ಕರ್ಷಿಸಲಿಕ್ಕೆ ಸಾಧಕವಾಗಿರುವ ಪ್ರಬಲವಾದ ಪ್ರಮಾಣವಚನವಾಗಿದೆ. ಇಷ್ಟು ವಿಚಾರವನ್ನು ಸಹ ಮಾಡದೆ ಸಾಕ್ಷಾತ್ತಾಗಿ ತಮ್ಮ ಪಕ್ಷಕ್ಕೆ ಬಾಧಕವಾಗಿರುವ ಇಂಥ ವಿರೋಧ ವಚನಗಳಿಂದೆಲ್ಲ ಇವರು ತಮ್ಮ ಪಂಚಾಂಗದ ಸಮರ್ಥನೆಯಾಗುವದೆಂದು ಕಲ್ಪಿಸಿಕೊಂಡಿರುವದು ಎಷ್ಟು ಅವಿವೇಕವೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಪುಟ ೧೫ ರಲ್ಲಿ ' ಉದ್ಯಾಹೋಪನಯ ' ಇತ್ಯಾದಿ ವಚನಗಳನ್ನು ತಾವೇ ಉದಾಹರಿಸಿ ' ಕರ್ಮಭೇದದಿಂದ ಗ್ರಾಹ್ಯತಿಥಿಯ ಭೇದವನ್ನು ಹೇಳುವ ಆ ವಚನಗಳಲ್ಲಿ ಪ್ರಬಲತತ್ವವೇನೂ ಕಾಣುವದಿಲ್ಲವೆಂದೂ, ಅವುಗಳು ಅವಿಚಾರಮೂಲಕಗಳೇ ಆಗಿವೆ. ' ಎಂದೂ ಹೇಳಿ ತಮ್ಮ ದೃಕ್ಪಂಚಾಂಗದ ಸಮರ್ಥನೆಯನ್ನು ಕಲ್ಪಿಸಿಕೊಂಡಿದ್ದಾರೆ. ಆದರೆ ಶಾಸ್ತ್ರಾನುಸಾರವಾಗಿ ಹೇಳುವ ವ್ಯವಸ್ಥೆಗೆ ಪ್ರತ್ಯೇಕಕಾರಣವನ್ನು ಕಲ್ಪಿಸಬೇಕಾಗಿಲ್ಲವೆಂದು ಹಿಂದೆ ನಾವು ೯ ನೆಯ ಪ್ರಶ್ನೆಯ ಉತ್ತರದಲ್ಲಿ ದೃಷ್ಟಾಂತಪೂರ್ವಕ ವಿವರಿಸಿರುವದನ್ನು ಲಕ್ಷ್ಯಕ್ಕೆ ತಂದುಕೊಂಡರೆ ಇವರ ಸ್ವಪಕ್ಷಸಾಧನೆಯ ಕ್ರಮವು ಎಷ್ಟು ಅಯುಕ್ತವಾಗಿರುವದೆಂಬುದು ವಾಚಕರಿಗೆ ತಿಳಿಯದಿರದು. ಮತ್ತು ಇಲ್ಲಿ ' ಸೂರ್ಯಸಿದ್ಧಾಂತಾದಿ ಗ್ರಂಥಗಳು ದೃಕ್ತುಲ್ಯ

ವಾಗಿರುವಾಗ ಅವುಗಳಿಂದ ಸಾಧಿಸಿದ ತಿಥಿಗಳಲ್ಲಿ ಶ್ರಾದ್ಧಮಾಡಿದವರು ಶಿಷ್ಟರಾಗಲಿಲ್ಲವೋ?' ಎಂದು ವಿಸಂಗತವಾಗಿ ಆಕ್ಷೇಪಿಸಿದ್ದಾರೆ. ಆದರೆ ಆ ಗ್ರಂಥಗಳೆಲ್ಲವು ಆರ್ಷ ಅಥವಾ ಆರ್ಷತುಲ್ಯವಾಗಿರುವದರಿಂದಲೇ ಅವುಗಳನ್ನು ಅನುಸರಿಸಿದವರು ಶಿಷ್ಟರಾದುದಲ್ಲದೆ ಇವರು ದೃಕ್ಪಂಚಾಂಗವನ್ನು ಸ್ವೀಕರಿಸಿದವರೆಂದು ಶಿಷ್ಟರಾದ್ದಲ್ಲವೆಂಬುದನ್ನು ಇನ್ನಾದರೂ ಇವರು ತಿಳಿದಿರಬೇಕಾಗಿದೆ. ಅಲ್ಲದೆ ಈ ಹಿಂದೆ ಸೂರ್ಯಸಿದ್ಧಾಂತದ ಗ್ರಾಹ್ಯತೆಯನ್ನು ಕುರಿತು ಇವರ ಆಕ್ಷೇಪವನ್ನು ಖಂಡಿಸುವಾಗ ಪುಟ ೪೯-೫೦ ರಲ್ಲಿಯೇ ಈ ವಿಷಯವನ್ನು ನಾವು ವಿಶದಪಡಿಸಿರುವದರಿಂದ ಇವರ ಈ ಆಕ್ಷೇಪವು ಸ್ವಯಂ ನಷ್ಟವಾಗಿರುತ್ತದೆ.

ಇದೇ ಪುಟ ೧೫-೧೬ ರಲ್ಲಿ ಇವರು ತಮ್ಮ ದೃಕ್ಪಂಚಾಂಗದ ತಿಥಿಗೆ ಆಧರಿಸಿದ ಪ್ರಮಾಣವೆಂದರೆ ಭಾಸ್ಕರೀಯವೆಂದು ಹೇಳಿಕೊಳ್ಳುವ ಆ ಬೀಜೋಪನಯ, ಹಾಗೂ ತಿಥಿನಿರ್ಣಯಕಾರಿಕೆ ಇವುಗಳೇ ಸರಿ. ಇವುಗಳಲ್ಲಿ ಆ ಬೀಜೋಪನಯವು ಕೇವಲ ಅಸಂಬದ್ಧವಾದ ಅಪ್ರಮಾಣಕೃತಿಯೆಂದೂ, ತಿಥಿನಿರ್ಣಯಕಾರಿಕೆಯು ಬಾಣವೃದ್ಧಿ-ರಸಕ್ಷಯ ಪಕ್ಷಕ್ಕೇನೇ ಅತ್ಯಂತಪುಷ್ಟಿಕೊಡುತ್ತದೆಂದೂ ಈ ಹಿಂದೆಯೇ ಪುಟ ೫೩-೫೫ ರಲ್ಲಿ ಸಿದ್ಧಮಾಡಿದ್ದೇವೆ. ಇನ್ನು ಪುಟ ೧೬-೧೭ ರಲ್ಲಿ ತಮ್ಮ "ಅಷ್ಟವೃದ್ಧಿ-ದಶಕ್ಷಯದ ತಿಥಿಯು ಕೆಲವು ಸಮಯ ಎರಡೂ ದಿನಗಳಲ್ಲಿ ಅಪರಾಹ್ಣಕ್ಕೆ ಸಿಕ್ಕದಿರುವದು ಸಹಜ; ಆದರೆ ಹಿಂದಿನ ೫-೬ ವೃದ್ಧಿ ಕ್ಷಯದ ತಿಥಿಗಳಲ್ಲಿಯೂ ಹಾಗೆಯೇ ಬರುವದು; ಇದರಿಂದ ತಮ್ಮ ದೃಕ್ಪಂಚಾಂಗದ ಸ್ವೀಕಾರದಲ್ಲಿ ಸಂಶಯಪಡಬಾರದು. ಇಂಥ ಸಂದರ್ಭದಲ್ಲಿ ಎಲ್ಲಾ ಧರ್ಮಶಾಸ್ತ್ರಗಳೂ ಶ್ರಾದ್ಧತಿಥಿಯು ಎರಡೂ ದಿನ ಅಪರಾಹ್ಣಕ್ಕೆ ಸಿಗದಿದ್ದರೆ "ಪೂರ್ವದಿನದಲ್ಲಿಯೇ ಶ್ರಾದ್ಧಮಾಡಬೇಕು ಎನ್ನುವವು" ಎಂದು ಹೇಳಿ ಕಾಲಮಾಧವದ – "ದಿನದ್ವಯೇಽಸ್ಯಪರಾಹ್ಣಂ" ಎಂಬೀ ವಚನವೊಂದನ್ನು ಮಾತ್ರ ಉದಾಹರಿಸಿರುವರಲ್ಲದೆ-'ಈ ಕಾಲಮಾಧವವಾಕ್ಯವನ್ನು ಅಥವಾ ಇದೇ ಅರ್ಥದ ಬೇರೆ ವಾಕ್ಯವನ್ನು ಗೊತ್ತುಮಾಡಿಕೊಂಡರೆ ಯಾವ ತರಹದ ಸಂಶಯವೂ ಉಳಿಯಲಾರದು' ಎಂದು ಸಹ ಬರೆದಿರುವರು. ಹೀಗೆ ಸು (?) ವಿಚಾರದಿಂದ ಬರೆದ ಈ ಪಂಡಿತರೇ ತಮ್ಮ ಅನೇಕವರ್ಷಗಳ ಪಂಚಾಂಗಗಳಲ್ಲಿ 'ಸಾಯಂತನ್ಯಪರತ್ರ' ಎಂಬ ಶ್ಲೋಕವನ್ನುದಾಹರಿಸಿ ಶ್ರಾದ್ಧತಿಥಿಯು ಪೂರ್ವದಿನ ಅಪರಾಹ್ಣ – ಸಾಯಾಹ್ನಗಳೆರಡರಲ್ಲಿಯೂ ಸಿಗದಿದ್ದಾಗ 'ಪರದಿನದಲ್ಲಿಯೇ' ಶ್ರಾದ್ಧಮಾಡಬೇಕು;' ಎಂದು ಇದಕ್ಕೆ ವಿಪರೀತವಾಗಿ ಧರ್ಮಶಾಸ್ತ್ರವನ್ನು ಕೊಟ್ಟೇ ಹೇಳಿದ್ದಾರೆ. ಹೀಗೆ ಇವರು ಶ್ರಾದ್ಧದಂತಹ ಪವಿತ್ರಕಾರ್ಯದ ತಿಥಿನಿರ್ಣಯದ ವಿಷಯದಲ್ಲಿ ಸಹ ಇಂತಹ ಅಸ್ಪಷ್ಟವಾಕ್ಯಗಳಿಂದ ಸಾಮಾನ್ಯಜನರನ್ನು ಅಡ್ಡಹಾದಿಗೆಳೆಯುತ್ತಿರುವದು ಗ್ರಹಗತಿಯ ವ್ಯತ್ಯಾಸವೋ ? ಸ್ಮೃತಿ(ಶಾಸ್ತ್ರ)ಗತಿಯ ವ್ಯತ್ಯಾಸವೋ ? ಅಥವಾ ಇವರ ಮನೋಗತಿಯ ವ್ಯತ್ಯಾಸವೋ ? ತಿಳಿಯದಾಗಿದೆ. ಇರಲಿ ! ಇಷ್ಟಾಗಿಯೂ ಇವರು ಉದಾಹರಿಸಿರುವ 'ಯದಾ ದಿನದ್ವಯೇಽಸ್ಯಪರಾಹ್ಣಂ' ಎಂಬ ವಾಕ್ಯದ

ಮುಂದೆಯೇ “ ಅಪರಾಹ್ಣಾಸ್ಪರ್ಶಃ ಉಭಯತ್ರಾಪಿ ಸಮಾಸಃ । ಪ್ರಾರಂಭ ಕಾಲೇ ತು ಪರೇದ್ಯುಃ ಕುತಪೇ ಸದ್ಭಾವೋ ವಿಶಿಷ್ಯತೇ । ” ಎಂದಿದೆ. ಅಂದರೆ— ಎರಡೂ ಕಡೆಗೆ ಅಪರಾಹ್ಣಸ್ಪರ್ಶವಿಲ್ಲದಿದ್ದರೆ ಮರುದಿನ ಶ್ರಾದ್ಧಾರಂಭ ಕಾಲವಾದ ಕುತಪದಲ್ಲಾದರೂ ಆ ತಿಥಿಯು ಇದ್ದೇ ಇರುವುದಾದ್ದರಿಂದ ಆರಂಭಕಾಲದಲ್ಲಿ ಶ್ರಾದ್ಧತಿಥಿಯು ಸಿಕ್ಕುವದೆ ಬುದೊಂದು ವಿಶೇಷ ಗುಣವಿರುತ್ತದೆ ಎಂದು ಹೀಗೆ ವಿಶೇಷಾನುವಾದಮಾಡಿ ಎರಡೂ ಅಪರಾಹ್ಣದಲ್ಲಿರದ ತಿಥಿಯು ಮರುದಿನ. ಕುತಪದಲ್ಲಿ ( ನಿಯತವಾಗಿ ) ಇದ್ದೇ ಇರುವುದೆಂಬುದನ್ನು ವ್ಯಕ್ತಪಡಿಸಿದ್ದಾರೆ. ಇದೂ ಇವರ ೮-೧೦ ವೃದ್ಧಿಕ್ಷಯದ ತಿಥಿಯ ನವೀನ ದೃಕ್ಪಂಚಾಂಗವನ್ನು ಅಲ್ಲಗಳೆದು ಬಾಣವೃದ್ಧಿ ರಸಕ್ಷಯಪಕ್ಷವನ್ನೇ ಪುಷ್ಟಿಗೊಳಿಸುತ್ತದೆ. ಹೇಗಂದರೆ—ಇವರ ದೃಕ್ತಿಥಿಯು ಪರಮಕ್ಷಯಬಂದಾಗ ಎರಡೂ ದಿನ ಅಪರಾಹ್ಣಗಳಲ್ಲಿಯೂ, ಮರುದಿನ ಕುತಪದಲ್ಲಿಯೂ ಸಿಗದೆ ಹೋಗುವದು. ಇದನ್ನು ಮುಂದಿನ ಧರ್ಮಶಾಸ್ತ್ರ ಪರಿಶೀಲನವೆಂಬ ಪ್ರಕರಣದಲ್ಲಿ ವಿಶದವಾಗಿ ವಿವರಿಸಿರುವೆವು. ಹೀಗಿರುವಾಗ ಇವರು ಪುಟ ೧೭ ರಲ್ಲಿ ಈ ವಿಷಯದಲ್ಲಿ ‘ ಆಕ್ಷೇಪವು ಕೇವಲ ಅವಿಚಾರ ಮೂಲಕವೆಂದೇ ಸಿದ್ಧವಾಗುತ್ತದೆ.’ ಎಂದು ಬರೆದದ್ದು ಯಾರ ಅವಿಚಾರವೆಂದು ತಜ್ಞರಿಗೆಲ್ಲ ಸ್ವತಃ ತಿಳಿಯುವಂತಿರುವಾಗ ಇವರದೇ ಅವಿಚಾರವೆಂಬುದನ್ನು ನಾವು ಬೇರೆ ಬರೆದು ತಿಳಿಸಬೇಕಾಗಿಲ್ಲ.

ಮುಂದೆ ಪುಟ ೧೭- ೧೮ ರಲ್ಲಿ “ ಪೈತ್ರ್ಯಾಣಿ ಕಾರ್ಯಾಣಿ ” ‘ ಸಾವ್ಯೇ ಸೌರಃ ’ ‘ ಚಾರಪ್ರವೃತ್ತೌ ಖೇಟಾನಾಂ ’ ‘ ವೇದೈಃ ಸಹ ಸಮುದ್ಭೂತಂ ’ ಮೊದಲಾದ ವಚನಗಳನ್ನೆತ್ತಿ, ಕರ್ಮ ಭೇದದಿಂದಲೂ, ತಿಥಿ ವೃದ್ಧಿ-ಕ್ಷಯಭೇದದಿಂದಲೂ, ಕಲ್ಪಭೇದದಿಂದಲೂ ವ್ಯವಸ್ಥೆಯನ್ನು ಹೇಳುವ ಆ ವಚನಗಳೆಲ್ಲವೂ ಬಾಣವೃದ್ಧಿ-ರಸಕ್ಷಯ ಲಕ್ಷಣದ ಪಂಚಾಂಗವನ್ನು ಪ್ರಮಾಣೀಕರಿಸಿ ಆದರಿಸುವದರಿಂದ ಈ ಭಾಗದಲ್ಲಿ ಎಡವಿದಂತಾಗಿಯೋ ಏನೋ ಕಾರಣವನ್ನೇನೂ ಹೇಳದೆ ಅವೆಲ್ಲ ಗಲಭೆಗೆ ಕಾರಣವಾಗುವದೆಂದಿಷ್ಟೇ ಹೇಳಿ ಇಲ್ಲಿಯೂ ತಮ್ಮ ನವೀನ ದೃಕ್ತಿಥಿಯನ್ನು ಪಾರುಮಾಡುವದಕ್ಕೆ ಹವಣಿಸಿದ್ದು ತಿಥ್ಯಾದಿ ವಿಷಯಗಳ ಗಂಧಲೇಶವೂ ಇಲ್ಲದ ‘ ಸಾಂಪ್ರತೋಪಲಬ್ಧ್ಯನುಸಾರೀ ಆಗಮಃ ಪ್ರಮಾಣಂ ’ ಎಂಬ (ವಿಷಯಸಂಬಂಧ ರಹಿತವಾದ) ಆಧಾರದ ಕುದುರೆಯನ್ನೇ ಮುಂದೊತ್ತಿ ಅದು ಜ್ಯೋತಿಃಶಾಸ್ತ್ರದ ತತ್ವವನ್ನು ಹೇಳುತ್ತದೆಂಬ ಸ್ವಕಲ್ಪಿತಾರ್ಥವನ್ನು ಸೇರಿಸಿ ಕೊನೆಗೆ ಅದೇ ಶ್ರೇಯಸ್ಕರವೆಂಬ ಪಲ್ಲವಿಯನ್ನು ಹಾಡಿದ್ದಾರೆ. ಇವರ ಈ ಆಧಾರವಚನದಲ್ಲಾದರೂ ‘ ಆಗಮಃ ಪ್ರಮಾಣಂ ’ ಎಂದು ಶಾಸ್ತ್ರ ಪ್ರಮಾಣವನ್ನೇ ಮನ್ನಿಸಿರುವದೆಂಬುದನ್ನು ಸಹ ಇವರು ಲಕ್ಷಿಸಲಿಲ್ಲ. ಮತ್ತು ಇವರು ಇಲ್ಲಿ ಕೊಟ್ಟಿರುವ ‘ ಪೈತ್ರ್ಯಾಣಿ ಕಾರ್ಯಾಣಿ ’ ಮೊದಲಾದ ಎಲ್ಲ ವಚನಗಳೂ ಆರ್ಷಶಾಸ್ತ್ರವನ್ನೇ ಪ್ರಮಾಣೀಕರಿಸುವುದರಿಂದ ಪರಹಿತ, ಕರಣಪ್ರಕಾಶಾದಿ (ಅನಾರ್ಷ) ಗ್ರಂಥಗಳನ್ನೇಕೆ ಸ್ವೀಕರಿಸಬಾರದೆಂಬ ಪೂರ್ವಪಕ್ಷಕ್ಕೆ ಅವ

ಕಾಶವೇ ಇಲ್ಲದಿರುವಾಗ ಇವರು ಆ ರೀತಿ ಆಕ್ಷೇಪಿಸಿದ್ದು ವ್ಯರ್ಥವೇ ಸರಿ.

ಇನ್ನು ಇವರು ಇದೇ ಪುಟ ೧೮ ಪಂ ೫ ರಲ್ಲಿ " ಮಯೋಪಜ್ಞ " ಎಂದೂ, ಹಿಂದೆ ಪುಟ ೧೩ ಪಂ ೧ ರಲ್ಲಿ " ಮಯಾಸುರಪ್ರೋಕ್ತವಾದ " ಎಂದೂ ಸೂರ್ಯಸಿದ್ಧಾಂತಕ್ಕೆ ವಿಶೇಷಣ ಹಚ್ಚಿ ಹೇಳಿರುವುದರಲ್ಲಿ ಇವರ ಹೇತುವೇನಿರಬಹುದೆಂದು ತಿಳಿಯುವದಿಲ್ಲ. ಯಾಕಂದರೆ — ಸೂರ್ಯಸಿದ್ಧಾಂತವನ್ನು ಮಯನು ಭಗವನ್ಮುಖದಿಂದ ಕೇಳಿದವನೇ ಹೊರತು ಸ್ವತಂತ್ರವಾಗಿ ಹೇಳಿದವನಲ್ಲ. ಭಗವದ್ಗೀತೆಯನ್ನು ಅರ್ಜುನನು ಕೇಳಿದವನಾದ್ದರಿಂದ ಅರ್ಜುನಪ್ರೋಕ್ತವೆಂದೂ, ಅರ್ಜುನೋಪಜ್ಞವೆಂದೂ ಹೇಳುವುದು ಹೇಗೆ ಉಚಿತವಲ್ಲವೋ ಅದರಂತೆಯೇ ಸೂರ್ಯಸಿದ್ಧಾಂತಕ್ಕೆ ಮಯಪ್ರೋಕ್ತವೆನ್ನುವುದೂ, ಮಯೋಪಜ್ಞವೆನ್ನುವುದೂ ತೀರ ಅನುಚಿತವಾಗಿದೆ. ಹೀಗಿರುವಾಗ ಮಯಾಸುರನ ಜಾತಿಗತವಿಶೇಷಣವು ಇವರಿಗೆ ಅಪೇಕ್ಷಿತವಾಗಿಯೇ ಇಲ್ಲಿ ಇವರು ಹಾಗೆ ಪ್ರಯೋಗಿಸಿರಬಹುದೇ ?

ಅಲ್ಲಿಂದ ಮುಂದೆ ಪುಟ ೧೮-೨೧ ರಲ್ಲಿ ತಮ್ಮ ನವೀನ ದೃಕ್ಪಂಚಾಂಗದ ೮-೧೦ ಘಟಿ ವೃದ್ಧಿಕ್ಷಯದ ತಿಥಿಯ ಸಮರ್ಥನೆಗಾಗಿ ಏನೂ ಸಂಬಂಧವಿಲ್ಲದ ಕೆಲವು ವಚನಗಳನ್ನು ಆಧಾರವೆಂದು ಕಾಣಿಸಿದ್ದಾರೆ. ಆದರೆ ಇವರ ನವೀನದೃಕ್ಪಂಚಾಂಗದ ತಿಥ್ಯಾದಿಗಳಿಗೂ, ಆ ವಚನಗಳಿಗೂ ಏನೇನೂ ಸಂಬಂಧವಿರುವದಿಲ್ಲವೆಂಬುದನ್ನು ಈ ಕೆಳಗೆ ನಾವು ಕ್ರಮವಾಗಿ ತೋರಿಸುವೆವು.

೧ ಇವರು 'ಯಸ್ಮಿನ್ಪಕ್ಷೇ ಯತ್ರ ಕಾಲೇ......' ಎಂದು ಹೇಳುವ ಶ್ಲೋಕವು ತಮಗನುಕೂಲವಾದ ವಸಿಷ್ಠ ವಚನವೆಂದು ಉದಾಹರಿಸಿದ್ದಾರೆ. ಆದರೆ ಅದೇ ವಸಿಷ್ಠರು ಬೀಜಸಂಸ್ಕಾರದ ವಿನಿಯೋಗವನ್ನು ಹೇಳುವಾಗ — " ಯಂತ್ರವೇಧಾದಿನಾ ಜ್ಞಾತಂ ಯದ್ಬೀಜಂ ಗಣಕೈಸ್ತತಃ । ಗ್ರಹಣಾದಿ ಪರೀಕ್ಷೇತ ನ ತಿಥ್ಯಾದಿ ಕದಾಚನ ॥ " ಅಂದರೆ — ಯಂತ್ರ ವೇಧಾದಿಗಳಿಂದ ತಿಳಿಯುವ ಬೀಜದಿಂದ ಗ್ರಹಣಾದಿಗಳನ್ನು ಪರೀಕ್ಷಿಸಬೇಕು ; ತಿಥ್ಯಾದಿಗಳಿಗೆ ಅದು ಸಲ್ಲದು; ಎಂದು ಸ್ಪಷ್ಟವಾಗಿ ಹೇಳಿರುವರು. ಇದರಿಂದ ಈ ವಸಿಷ್ಠ ವಚನಗಳಿಗೆ ತಾತ್ಪರ್ಯವೇ ಇಲ್ಲವೆಂದಾದರೂ ಇವರು ಕಲ್ಪಿಸಬೇಕಾಗುವದು. ಅಥವಾ ( ಹಾಗೆ ಆರ್ಷವಚನಗಳಿಗೆ ವ್ಯರ್ಥತೆಯನ್ನು ಕಲ್ಪಿಸುವದು ಯುಕ್ತವಲ್ಲವಾದುದರಿಂದ ) ಈ ಉಭಯವಚನಗಳಿಗೂ ಪರಸ್ಪರ ವಿರೋಧವುಂಟಾಗದಂತೆ ಅರ್ಥಮಾಡಬೇಕಾಗುವುದು. ಹೀಗೆ ಅವಿರೋಧವಾಗಿ ಅರ್ಥಮಾಡಿದಲ್ಲಿ, ಯಾವ ಕಾಲದಲ್ಲಿ ಯಾವ ( ಬ್ರಾಹ್ಮ-ಸೌರಾದಿ ) ಆರ್ಷಪಕ್ಷವು ದೃಕ್ಪ್ರತೀತಿಗೆ ಆಸನ್ನವಾಗಿರುವುದೋ ಆ ಕಾಲದಲ್ಲಿ ಆ ಆರ್ಷ ಸಿದ್ಧಾಂತದಿಂದ ತಿಥ್ಯಾದಿಗಳ ನಿರ್ಣಯಮಾಡಬೇಕು; ಎಂಬುದೇ ಈ ' ಯಸ್ಮಿನ್ಪಕ್ಷೇ... ' ಎಂಬ ವಚನದ ವಿವಕ್ಷಿತಾರ್ಥವೆಂದು ಸಿದ್ಧವಾಗುತ್ತದೆ. ಇದರಿಂದ " ಸೌರಃ ಸ್ಪಷ್ಟತರಃ, ಸ್ಪಷ್ಟತರಃ ಸಾವಿತ್ರಃ " ಈ ಮೊದಲಾದ ವಚನಗಳ ಪ್ರಕಾರ ಅತಿಸ್ಪಷ್ಟವೂ, ದೃಕ್ಪ್ರತ್ಯಯಾಸನ್ನವೂ ಆಗಿರುವ

ಸೂರ್ಯಸಿದ್ಧಾಂತವೇ ತಿಥ್ಯಾದಿನಿರ್ಣಯಗಳಿಗೆ ವಿಹಿತವಾದುದೆಂದು ಫಲಿತಾರ್ಥವಾಗುವುದಲ್ಲದೆ ಇವರ ದೃಕ್ಪಂಚಾಂಗದ ಸಮರ್ಥನೆಯು ಹೇಗೂ ಆಗುವದಿಲ್ಲ.

೩. 'ಸಂಸಾಧ್ಯ ಸ್ಪಷ್ಟತರಂ...' ಇದು ಸೂರ್ಯವಚನವೆಂದಿದ್ದಾರೆ. ಆದರೆ ಇದರಲ್ಲಿ ತಿಥ್ಯಾದಿಗಳ ವಿಷಯವೇನೂ ಇಲ್ಲದ್ದರಿಂದ ಇದರಿಂದ ಸಹ ಇವರ ದೃಕ್ಪಂಚಾಂಗದ ಸಮರ್ಥನೆಯಾಗುವುದಿಲ್ಲ.

೪. 'ಧ್ಯಾನಗ್ರಹೋಪದೇಶಾತ್ ...' ಈ ಶ್ಲೋಕವೂ ತಿಥ್ಯಾದಿವಿಷಯಕವಾದುದಲ್ಲ. ಇದರ ಕೊನೆಯಲ್ಲಿ 'ನಿರ್ಣಯಾದೇಶೌ' ಎಂದಿದ್ದು ಬಹು ಗ್ರಂಥಗಳಲ್ಲಿ ಬೀಜಸಂಸ್ಕಾರವು ಗ್ರಹಣಾದಿಗಳ ಬಗ್ಗೆ ಮಾತ್ರವೆಂದು ಹೇಳಿರುವುದರಿಂದ ಇಲ್ಲಿಯ 'ನಿರ್ಣಯ' ಶಬ್ದಕ್ಕೆ ಗ್ರಹಣಾದಿ ನಿರ್ಣಯವೆಂದೂ ಮತ್ತು "ಜ್ಯೋತಿಃಶಾಸ್ತ್ರಫಲಂ ಪುರಾಣಗಣಕೈರಾದೇಶ ಇತ್ಯುಚ್ಯತೇ" ಎಂದು ಭಾಸ್ಕರಾಚಾರ್ಯರು (ಸಿದ್ಧಾಂತಶಿರೋಮಣಿಯಲ್ಲಿ) ಸ್ಪಷ್ಟೀಕರಿಸಿ ಹೇಳಿರುವಂತೆ ಇಲ್ಲಿಯ 'ಆದೇಶ' ಶಬ್ದಕ್ಕೆ ಫಲಾದೇಶವೆಂದೂ ಶಾಸ್ತ್ರಸಮ್ಮತವಾದ ಅರ್ಥವಾಗುತ್ತದೆ. ಆದ್ದರಿಂದ ಇದು ಸಹ ಇವರ ದೃಕ್ಪಂಚಾಂಗವನ್ನು ಸಮರ್ಥಿಸುವುದಿಲ್ಲ.

೫. 'ಕಿಂ ತೇನಾಪಿ ಸುವರ್ಣೇನ...' ಇದು ಶಾಕಲ್ಯವಚನವೆಂದು ಹೇಳಿದ್ದಾರೆ. ಆದರೆ ಇದೇ ಶಾಕಲ್ಯರು ತಮ್ಮ ಸಂಹಿತೆಯಲ್ಲಿ 'ತಿಥ್ಯಾದಿಸಾಧನೇ ಕ್ವಾಪಿ ನಾರ್ಕೇಂದ್ವೋರ್ಬೀಜಯೋಗಿತಾ' ಅಂದರೆ— ತಿಥ್ಯಾದಿಗಳನ್ನು ಸಾಧಿಸುವಲ್ಲಿ ಸೂರ್ಯಚಂದ್ರರಿಗೆ ಬೀಜಸಂಸ್ಕಾರವನ್ನು ಮಾಡಲೇ ಬಾರದು ಎಂದು ಅತಿಸ್ಪಷ್ಟವಾಗಿ ಹೇಳಿರುವುದರಿಂದಲೂ, ಮೇಲಿನ ಶ್ಲೋಕದಲ್ಲಿ ತಿಥ್ಯಾದಿಗಳ ವಿಷಯವನ್ನೇನೂ ಹೇಳದೇ ಇರುವುದರಿಂದಲೂ ಇದು ಸಹ ಇವರಿಗೆ ಸಾಧಕವಾದುದಲ್ಲ.

೬. 'ಯಾಂತಿ ಸಂಸಾಧಿತಾಃ ಖೇಟಾಃ ...' ಈ ಶ್ಲೋಕದಲ್ಲಿ ಸಹ ಪಕ್ಷಶಬ್ದದಿಂದ ಆರ್ಷ ಸಿದ್ಧಾಂತವೇ ಲಕ್ಷಿಸಲ್ಪಟ್ಟಿರುವುದರಿಂದಲೂ, ತಿಥ್ಯಾದಿಗಳ ಉಲ್ಲೇಖವೇ ಇದರಲ್ಲಿ ಇಲ್ಲದ್ದರಿಂದಲೂ ದೃಕ್ತಿಥ್ಯಾದಿಗಳಿಗೆ ಇದೂ ಸಹ ಪ್ರಮಾಣವಾಗುವದಿಲ್ಲ.

೭. 'ನನು ಯತ್ರ ಸೂರ್ಯಪ್ರಣೀತಭಗಣ ....' ಎಂಬ ನೃಸಿಂಹವಚನದಲ್ಲಿ ಸೂರ್ಯಸಿದ್ಧಾಂತ, ಪರಾಶರಸಿದ್ಧಾಂತ ಸಾಧಿತಗ್ರಹಗಳಲ್ಲಿ ಮಹದಂತರವು ತೋರಿದಾಗ ಯಾವ ಸಿದ್ಧಾಂತದ ಗ್ರಹವು ಹೆಚ್ಚು ಸ್ಪಷ್ಟವಾಗುವದೋ ಅದನ್ನೇ ಸ್ವೀಕರಿಸಬೇಕೆಂದು ಮುನಿಗಳೇ ಹೇಳಿರುವ ಕಾರಣ ಹೇಗಿದ್ದರೂ ಇವೆರಡರೊಳಗೇನೇ ಒಂದು ಪಕ್ಷವನ್ನು ಸ್ವೀಕರಿಸಬೇಕೆಂಬ ಅರ್ಥವಿದ್ದು ಈ ಸೌರೋಕ್ತಗತಿಯು ವೇದಮೂಲಕವಾದುದೇ ಸರಿ; ಎಂದಿರುವುದರಿಂದ ಜ್ಯೋತಿಷವಿಷಯದಲ್ಲಿಯೂ ಆರ್ಷವ್ಯವಸ್ಥೆಯನ್ನೇ ಆದರಿಸುವ ನಮಗೆ ಇದು ಇಷ್ಟಾಪ

ತ್ತಿಯೇ ಆಗಿರುವುದಲ್ಲದೆ ಸರ್ವಶಾಸ್ತ್ರಗಳಿಗೂ ವಿರುದ್ಧವಾಗಿರುವ ಇವರ ದೃಕ್ಪಕ್ಷಕ್ಕೆ ಈ ವಚನವು ಅನಿಷ್ಟಕರವೇ ಆಗಿದೆ.

೭. "ಮುನಿಪ್ರಣೀತೇ ಮನುಜೈಃ ..." ಈ ವಚನದಲ್ಲಿ ನಾವು ಹಿಂದೆ ಪುಟ ೧೮ ರಲ್ಲಿ ವಿವರಿಸಿರುವಂತೆ ಕೇವಲ ಪ್ರತ್ಯಕ್ಷಕ್ಕೆ ಗೋಚರಿಸತಕ್ಕ ಗ್ರಹಣಾದಿ ಕೆಲವು ವಿಷಯಗಳಲ್ಲಿ ಮಾನುಷದೃಷ್ಟಿಯಿಂದ ಸ್ವಲ್ಪ ಅಂತರವು ತೋರಿಬಂದರೆ ಆ ಭಾಗದಲ್ಲಿ ಮಾತ್ರ ದೃಕ್ಪ್ರತ್ಯಯಾರ್ಥವಾಗಿ ಅದನ್ನು ಅಂದರೆ ಬೀಜಾದಿ ದೃಕ್ಸಂಸ್ಕಾರವನ್ನು ಮಾಡಬೇಕಲ್ಲದೆ "ನ ಕಾರ್ಯಂ ಸರ್ವಮನ್ಯಥಾ" ಅಂದರೆ ಇತರ ಸರ್ವವಿಷಯಗಳಲ್ಲಿಯೂ ಹಾಗೆ ಮಾಡಬಾರದು. ಅರ್ಥಾತ್ ಅಪ್ರತ್ಯಕ್ಷವಾಗಿರುವ ತಿಥ್ಯಾದಿ ವಿಷಯಗಳಲ್ಲಿ ಆರ್ಷಗ್ರಂಥವನ್ನೇ ಪ್ರಮಾಣೀಕರಿಸಬೇಕು; ಎಂಬ ಅರ್ಥವಿರುವುದರಿಂದ ಇದು ನಮ್ಮ ಸಿದ್ಧಾಂತಪಕ್ಷವನ್ನೇ ಪುಷ್ಟೀಕರಿಸುವುದಲ್ಲದೆ ಸರ್ವ ವಿಷಯಗಳಲ್ಲಿಯೂ (ಚ್ಯುತಿ-ತಿಥ್ಯಾದಿ) ನೂತನ ಸಂಸ್ಕಾರಗಳನ್ನು ಮಾಡಬೇಕೆನ್ನುವ ಇವರ ನವೀನ ದೃಕ್ಪಕ್ಷವನ್ನು ಬಲವಾಗಿ ಖಂಡಿಸುತ್ತದೆ

೮. 'ತತ್ರಪ್ರಗತಿವಶಾನ್ನಿತ್ಯಂ .......' ಎಂಬ ಶ್ಲೋಕವು ಇವರಿಗೆ ಅನುಕೂಲವಾದ್ದಲ್ಲವೆಂಬುದನ್ನು ಹಿಂದೆ ಪುಟ ೪೯ ರಲ್ಲಿಯೇ ತೋರಿಸಿದೆ.

೯. ಇನ್ನು ಮುಂದಿನ "ಗ್ರಹಾನಯನಂ ಮುನಿಕೃತಶಾಸ್ತ್ರಾದೇವ........' "ಶಾಸ್ತ್ರಮಾದ್ಯಂ ತದೇವೇದಂ...' "ಅತ್ರಾಹ ಮುನೀಶ್ವರಃ ..." "ಅಸ್ಮಾಭಿಃ ......" "ಯಸ್ಮಿನ್ಕಾಲೇ......" 'ಗಣಿತಸ್ಕಂಧೇ ......" ಎಂಬ ಈ ವಚನಗಳಲ್ಲೆಲ್ಲ ತಿಥ್ಯಾದಿ ಗಣಿತದ ವಿಷಯದಲ್ಲಿ ಲೇಶಮಾತ್ರವೂ ಪ್ರಸಕ್ತಿಯು ಇಲ್ಲದಿರುವುದರಿಂದಲೂ ನಾವು ಹಿಂದಿನ ವಚನಗಳಿಗೆ ಕಾಣಿಸಿರುವಂತೆಯೇ ಈ ವಚನಗಳ ತಾತ್ಪರ್ಯವಿದ್ದುದರಿಂದಲೂ ವಿಸ್ತಾರಭಯದಿಂದ ಈ ವಚನಗಳ ತಾತ್ಪರ್ಯವನ್ನು ಪ್ರತ್ಯೇಕವಾಗಿ ಕಾಣಿಸಲಿಲ್ಲ. ಇಂತಹ ಸರ್ವಸಾಮಾನ್ಯ ವಚನಗಳಿಂದ ಇವರ ದೃಕ್ಪಂಚಾಂಗದ ಸಮರ್ಥನೆಯು ಸ್ವಲ್ಪವೂ ಆಗುವದಿಲ್ಲ.

೧೦. "ಯಾತಂ ಚ ದೇಶಾಂತರಮಾಬ್ದಕಂ ಚ...." "ಇಮೇ ಯಾಂತಿ ದೃಕ್ತುಲ್ಯತಾಂ.........." "ಯಾತ್ರಾವಿವಾಹೋತ್ಸವಜಾತಕಾದೌ........" ಎಂಬ ಈ ವಚನಗಳೆಲ್ಲವೂ ನಾವು ಹಿಂದೆ ಪುಟ ೩೦ ರಲ್ಲಿ ಹೇಳಿರುವಂತೆ ಆಯಾ ಗ್ರಂಥಗಳಿಂದ ಸಾಧಿಸಲ್ಪಡುವ ತಿಥ್ಯಾದಿಗಳು ಆರ್ಷಸಿದ್ಧಾಂತಕ್ಕೆ ಕಿಂಚಿದಂತರವಾದರೂ ಕರ್ಮಾಂಗಕಾಲನಿರ್ಣಯಕ್ಕೂ, ಧರ್ಮಶಾಸ್ತ್ರಪ್ರಕ್ರಿಯಾದಿಗಳಿಗೂ ಅನುಗುಣವಾಗಿದ್ದು ವೃದ್ಧಿ-ಕ್ಷಯಗಳಲ್ಲಿ ಆರ್ಷಶಾಸ್ತ್ರಕ್ಕೆ ಸಾಮ್ಯವಾಗಿಯೇ ಇರುವುದರಿಂದ ಧರ್ಮಶಾಸ್ತ್ರಗಳಿಗೆ ಬಾಧಕವಾಗದ ಕಾರಣ 'ಅಲ್ಪಾಂತರಂ ನ ದೋಷಾಯ' ಎಂಬ ನ್ಯಾಯದಂತೆ ಮನಸ್ಸಿಗೆ ಸಮಾಧಾನ ಮಾಡಿಕೊಂಡು ಹಾಗೆ ಹೇಳಿದ್ದಾಗಿದೆ. ಹಾಗಲ್ಲವೆಂದು ಹೇಳುವುದಾದರೆ ಅಥವಾ ಇಷ್ಟರ

ಮೇಲಿಂದ ಇವರು ಶಾಸ್ತ್ರಕ್ಕೆ ಅತ್ಯಂತ ವಿಸಂಗತವಾಗಿರುವ ತಮ್ಮ ನವೀನ ದೃಕ್ಪಂಚಾಂಗದ ತಿಥ್ಯಾದಿಗಳಿಗೆ ಇಂತಹ ಮಾತುಗಳೇ ಪ್ರಮಾಣವೆಂದು ಕಲ್ಪಿಸಿ ಕೊಳ್ಳುವುದಾದರೆ ನಾವು ಹಿಂದೆ ಪುಟ ೩೮ ರಲ್ಲಿ ಕಾಣಿಸಿರುವಂತೆ ಜ್ಯೋತಿಃಶಾಸ್ತ್ರಪ್ರವರ್ತಕರಾದ ಮಹರ್ಷಿಗಳ "ತಿಥ್ಯಾದಿಸಾಧನೇ ಕ್ವಾಪಿ ನಾರ್ಕೇಂದ್ವೋರ್ಬೀಜಯೋಗಿತಾ" ಈ ಮುಂತಾದ ಅನೇಕ ಪ್ರಮಾಣವಚನಗಳಿಗೂ, ಧರ್ಮಶಾಸ್ತ್ರಗಳಲ್ಲಿ ಪರಿಗ್ರಹಿಸಲ್ಪಟ್ಟ ತಿಥ್ಯಾದಿಗಳ ವೃದ್ಧಿಕ್ಷಯದ ಪರಿಮಿತಿಗೂ ವಿರೋಧವಾಗುವುದರಿಂದ ಅದು ಎಂದಿಗೂ ಶಾಸ್ತ್ರಸಮ್ಮತವೆಂತ ಆಗಲಾರದು. ಯಾಕಂದರೆ — ತಥೈವ ಲೌಕಿಕಂ ವಾಕ್ಯಂ ಸ್ಮೃತಿಬಾಧೇ ಪರಿತ್ಯಜೇತ್' ಎಂಬ ಪ್ರಮಾಣದಂತೆ ಲೌಕಿಕರಾದ ಅಭಿಯುಕ್ತರ ಮಾತುಗಳು ಆರ್ಷವಚನಕ್ಕೆ ವಿರೋಧವಾಗಿದ್ದಲ್ಲಿ ಧರ್ಮಕರ್ಮಗಳ ವಿಷಯದಲ್ಲಿ ಅವು ಪ್ರಮಾಣವಲ್ಲವೆಂದು ಶಾಸ್ತ್ರದಲ್ಲಿಯೇ ನಿರ್ಣಯಿಸಲ್ಪಟ್ಟಿರುವುದು. ಆದುದರಿಂದ ಈ ಯಾವ ವಚನದಿಂದಲೂ ಇವರ ದೃಕ್ಪಂಚಾಂಗದ ಸಮರ್ಥನೆಯಾಗುವುದಿಲ್ಲ.

ಮತ್ತು ಇವರು 'ಭಾಸ್ಕರೀಯಬೀಜೋಪನಯ'ವೆಂದು ಹೇಳಿಕೊಳ್ಳುವ ಗ್ರಂಥವು ಭಾಸ್ಕರಾಚಾರ್ಯರ ಪೂರ್ವಾಪರ ಗ್ರಂಥಗಳಿಗೆಲ್ಲ ಅತ್ಯಂತ ವಿರುದ್ಧವಾಗಿಯೂ, ಅಸಂಬದ್ಧವಾಗಿಯೂ ಇರುವುದರಿಂದ ಇದು ಭಾಸ್ಕರೀಯಕೃತಿಯೆನ್ನುವುದು ತೀರ ವಿಸಂಗತವಾಗಿರುವದೆಂದೂ, ನಿರ್ಮೂಲವಾದುದೆಂದೂ ಈ ಹಿಂದೆ ಪುಟ ೫೨-೫೫ ರಲ್ಲಿಯೇ ಸಕಾರಣವಾಗಿ ವಿವರಿಸಿರುವೆವು. ಆದುದರಿಂದ ಈ ಬೀಜೋಪನಯದ ಯಾವ ವಚನದಿಂದಲೂ ಸಹ ಇವರ ದೃಕ್ಪಂಚಾಂಗವು ಶಾಸ್ತ್ರಸಿದ್ಧವಾದುದೆಂದು ಸಮರ್ಥಿತವಾಗುವುದಿಲ್ಲ.

ಇನ್ನು ಶ್ರೀನಿವಾಸದೀಕ್ಷಿತರ ತಿಥಿನಿರ್ಣಯಕಾರಿಕೆಯ 'ಬೀಜೋಪನಯಭಾಷ್ಯಾಂತೇ....' ಇತ್ಯಾದಿ ಶ್ಲೋಕವನ್ನು ಇವರು ಉದಾಹರಿಸಿರುವಲ್ಲಿ ಅದೇ ಗ್ರಂಥದ 'ಬಾಣವೃದ್ಧಾ ರಸಕ್ಷೀಣಾ ಗ್ರಾಹ್ಯಾ ನಾನ್ಯಾ ತಿಥಿಃ ಕ್ವಚಿತ್' "ರಾಹುದರ್ಶನತೋಽನ್ಯತ್ರ ದೃಕ್ಸಿದ್ಧಾ ನೇಷ್ಯತೇ ತಿಥಿಃ" ಇತ್ಯಾದಿ ತಮ್ಮ ದೃಕ್ಪಂಚಾಂಗಕ್ಕೆ ವಿರುದ್ಧವಾದ ಭಾಗವನ್ನು ಬೇಕೆಂತಲೇ ಅಡಗಿಸಿಟ್ಟಿದ್ದಾರೆ. ಅದನ್ನು ಯಾಕೆ ಅಡಗಿಸಿರುವರೆಂದು ಅಭಿಜ್ಞರಿಗೆ ತಿಳಿಯದಿರಲಿಕ್ಕಿಲ್ಲ. ಹೀಗೆ ಮುಚ್ಚು-ಮರೆಗಳನ್ನು ಮಾಡಿಯೂ, ವಿರುದ್ಧೋಕ್ತಿಗಳನ್ನು ಹೇಳಿಯೂ, ಅಪ್ರಾಸಂಗಿಕವಾದ ವಿಪರೀತಾರ್ಥಗಳನ್ನು ಕಲ್ಪಿಸಿಯೂ ಕೊನೆಗೆ ಇದರಿಂದೆಲ್ಲ ತಮ್ಮ "ದೃಕ್ಪಂಚಾಂಗವೇ ಶಾಸ್ತ್ರಸಿದ್ಧವೆಂದು ಸಮರ್ಥಿಸಿದಂತಾಗುತ್ತದೆ" ಎಂದು ಹೇಳಿದ್ದಾರೆ. ಸರಿ; ಸಮರ್ಥಿಸಲ್ಪಡಲಿಲ್ಲ, ಇವರು ಸಮರ್ಥಿಸಲೂ ಇಲ್ಲ (ಅದು ಸಾಧ್ಯವೂ ಇಲ್ಲ.), ಸಮರ್ಥಿಸಿದಂತೆ—ಹಾಗೆ—ಅಷ್ಟು ಪ್ರಯಾಸವಾಗುತ್ತದೆ ಎಂಬ ತಾತ್ಪರ್ಯವು ಇವರಿಗೆ. ಅಭಿಪ್ರಾಯವಿಲ್ಲ; ಇದೆಂತಹ ಸಮರ್ಥನೆಯೋ ?' ವಾಚಕರೇ ಯೋಚಿಸಬೇಕು ಇದು ಕೇವಲ ಪ್ರಲಾಪವೇ ಆಗಿರುವುದೆಂದು ತಜ್ಞರಿಗೆಲ್ಲ ತಾನಾಗಿ ತಿಳಿಯುವಂತಿದೆ.

# "ಅಯನಸಮರ್ಥನೆ"ಯ ಖಂಡನೆಯು.

ಇನ್ನಿವರು ತಮ್ಮ ದೃಕ್ಪಂಚಾಂಗಸಮರ್ಥನೆಯಂತೆಯೇ ಅಯನ ಸಮರ್ಥನೆಯಲ್ಲಿಯೂ ಸಹ ಪೂರ್ವಾಪರಸಂಬಂಧವಿಲ್ಲದ, ಅಶಾಸ್ತ್ರೀಯವಾದ ನಾನಾತರದ ಅಪಾರ್ಥ, ವಿಕಲ್ಪಾರ್ಥ, ವಿರುದ್ಧಾರ್ಥಗಳನ್ನೆಲ್ಲ ಕಲ್ಪಿಸಿಕೊಂಡು ತಮ್ಮ ಅಯನದ ಸಮರ್ಥನೆಯನ್ನು ಮಾಡಿಕೊಳ್ಳಲಿಕ್ಕೆ ಯತ್ನಿಸಿದ್ದಾರೆ. ಈ ಭಾಗದಲ್ಲಿ ಇವರು ಮಾಡಿರುವ ಪ್ರಲಾಪಗಳೆಲ್ಲ ಶಬ್ದಶಃ ಖಂಡನೀಯವಾಗಿರುವವಾದರೂ ಆ ರೀತಿ ಖಂಡಿಸಹೋದಲ್ಲಿ ಶಾಸ್ತ್ರೀಯವಾದ ಹಲವು ಗಹನ ವಿಚಾರಗಳನ್ನು ಕೂಲಂಕಷವಾಗಿ ವಿವರಿಸಬೇಕಾಗುತ್ತಿದ್ದು ಅದರಿಂದ ಗ್ರಂಥವು ಇನ್ನೂ ವಿಸ್ತಾರವಾಗುವದಲ್ಲದೆ ಅದರಲ್ಲಿ ಸಾಮಾನ್ಯರ ವಿಚಾರಕ್ಕೆ ಹತ್ತದ ಅನೇಕ ಜಟಿಲ ವಿಷಯಗಳೂ ಬರುವುದರಿಂದ ವಾಚಕರಿಗೆ ವಿರಸವಾಗಿ ಜುಗುಪ್ಸೆಗೂ ಕಾರಣವಾಗಬಹುದು. ಆದುದರಿಂದ ಸುಲಭವಾಗಿ ಗ್ರಹಿಸತಕ್ಕ ಕೆಲವೇ ವಿಷಯಗಳಿಂದಲೇ ಇವರ ಸಮರ್ಥನೆಯು ಹೇಗೆ ವಿಸಂಗತವಾಗಿರುತ್ತದೆಂಬುದನ್ನು ಸಂಕ್ಷಿಪ್ತವಾಗಿ ಇಲ್ಲಿ ತೋರಿಸುವೆವು.

ಪುಟ ೨೧ ರಷ್ಟು ಹಿಂದಿನಿಂದಲೇ ಇವರು ಹಾಡುತ್ತಾ ಬಂದಿರುವಂತೆ ತಿಥ್ಯಾದಿಗಳೆಲ್ಲ ಪ್ರತ್ಯಕ್ಷವೆಂಬ ಸೊಲ್ಲನ್ನು ಇಲ್ಲಿಯೂ ಹಾಡಿರುವರಲ್ಲದೆ ಆ ಮುಂಚೆ ಎಲ್ಲಿಯೂ ವಿವರಿಸದಿರುವ ಸಂಕ್ರಾಂತಿಯೂ ಪ್ರತ್ಯಕ್ಷವೆಂಬ ಹೊಸ ಪಲ್ಲವಿಯೊಂದನ್ನು ಅದರಲ್ಲಿ ಸೇರಿಸಿದ್ದಾರೆ. ಆದರೆ ತಿಥ್ಯಾದಿಗಳಂತೆ ಸಂಕ್ರಾಂತಿಯೂ ಸಹ ಪ್ರತ್ಯಕ್ಷವಲ್ಲವೆಂಬುದು ಇವರಿಗಿನ್ನೂ ತಿಳಿಯಲಾಗದಿದ್ದರೆ " ಸಂಕ್ರಾಂತಿಸಮಯಃ ಸೂಕ್ಷ್ಮೋ ದುರ್ಜ್ಞೇಯಃ ಪಿಶಿತೇಕ್ಷಣೈಃ " ಅಂದರೆ— ಸಂಕ್ರಾಂತಿಯು ಬಹು ಸೂಕ್ಷ್ಮವಾಗಿರತಕ್ಕದ್ದಾದ್ದರಿಂದ ಚರ್ಮಮಾಂಸಮಯವಾದ ಪ್ರಾಕೃತ ದೃಷ್ಟಿಯಿಂದ ಅದನ್ನು ತಿಳಿಯಲಿಕ್ಕೆ ಶಕ್ಯವಿಲ್ಲವೆಂದಿರುವ ದೇವಲ, ಹಾಗೂ ವಸಿಷ್ಠಮಹರ್ಷಿಗಳ ವಚನವನ್ನೂ ಇವರಂತೆ ಕಾಲಮಾಧವದಲ್ಲಿಯೂ ಸಹ- '' ದೇಶಾವ್ಯವಧಾನಾದತ್ಯಂತಸಂಶ್ಲಿಷ್ಟಯೋಃ ಪೂರ್ವೋತ್ತರರಾಶ್ಯೋರ್ಮಧ್ಯೇ ಸೂರ್ಯಃ ಪೂರ್ವರಾಶಿಂ ಪರಿತ್ಯಜ್ಯ ಯಾವತಾ ಕಾಲಲೇಶೇನೋತ್ತರರಾಶಿಂ ಪ್ರವಿಶತಿ ಸ ಲೇಶೋ ಯೋಗದೃಷ್ಟಿಂ ವಿನಾ ಮಾಂಸದೃಷ್ಟ್ಯಾ ದುರ್ಲಕ್ಷ್ಯಃ " ಅಂದರೆ – ರಾಶಿಚಕ್ರದಲ್ಲಿ ಪೂರ್ವೋತ್ತರರಾಶಿಗಳು ಮಧ್ಯದಲ್ಲಿ ಅಂತರವೇನೂ ಇಲ್ಲದೆ ನಿರಂತರವಾಗಿ ಕೂಡಿಕೊಂಡಿರುವದರಿಂದ ಹಿಂದಿನ ರಾಶಿಯನ್ನು ಬಿಟ್ಟು ಮುಂದಿನ ರಾಶಿಗೆ ಸೂರ್ಯನು ಪ್ರವೇಶಿಸುವ ಸೂಕ್ಷ್ಮಸ್ಥಿತಿಯು ಯೋಗದೃಷ್ಟಿಯ ಹೊರ್ತು ಮಾನವರ ಚರ್ಮಮಯವಾದ ಮಾಂಸದೃಷ್ಟಿಯಿಂದ ಎಂದಿಗೂ ನೋಡಲಿಕ್ಕೆ ಶಕ್ಯವಿಲ್ಲವೆಂದು ಶ್ರೀವಿದ್ಯಾರಣ್ಯಸ್ವಾಮಿಗಳು ಹೇಳಿರುವ ನಿರ್ಣಯವಚನವನ್ನೂ ಪ್ರತ್ಯಕ್ಷವಾಗಿ ನೋಡಿ ಇನ್ನಾದರೂ ಇವರು ತಿಳಿದುಕೊಳ್ಳಬೇಕು.

ಇನ್ನು ಮುಂದಿನ ವಿಷಯವನ್ನು ವಿಚಾರಿಸುವ ಮುಂಚೆ ನಾವು ಹಿಂದೆಗಳನೇ ಪ್ರಶ್ನೆಯ ಉತ್ತರದಲ್ಲಿ ಹೇಳಿರುವಂತೆ ಯಾವಾಗಲೂ ತಮ್ಮ ತಮ್ಮ ಸ್ಥಾನದಿಂದ ಸ್ವಲ್ಪಮಾತ್ರವೂ ಚಲಿಸದೆ ಪ್ರಳಯಾವಧಿ ಒಂದೇ ಸ್ಥಾನ ದಲ್ಲಿರತಕ್ಕ ಕ್ರಾಂತಿವೃತ್ತದಲ್ಲಿ ವಿಭಾಗಿಸಲ್ಪಟ್ಟ ದಿಕ್ಕುಗಳೂ, ಭೂಪ್ರದೇಶದಲ್ಲಿ ದೃಙ್ಮಂಡಲದಲ್ಲಿ ಗೋಚರಿಸುವ ದಿಕ್ಕುಗಳೂ ಬೇರೆ ಬೇರೆಯಾಗಿರುತ್ತವೆಂಬು ದನ್ನು ಲಕ್ಷ್ಯದಲ್ಲಿಡಬೇಕು. ಈ ವಿಷಯವನ್ನು ಭಾಸ್ಕರಾಚಾರ್ಯರು "**ತುಲಾ ಜಾದ್ಯೋರ್ಹಿ ಸಂಪಾತೇ ವಿಷುವತ್ಕ್ರಾಂತಿವೃತ್ತಯೋಃ। ಸ್ಯಾತಾಂ ಯಾ ಮ್ಯೋತ್ತರೇ ಭಿನ್ನೇ ಪರಕ್ರಾಂತ್ಯಂತರೇ ಚ ತೇ॥**" ಎಂಬಲ್ಲಿ ಬಹು ರಹಸ್ಯ ವಾಗಿ ಸೂಚಿಸಿರುತ್ತಾರೆ.

ಮುಂದೆ ಪುಟ ೨೧–೨೨ರಲ್ಲಿ ಕಾಲಮಾಧವದಲ್ಲಿ ಉದಾಹರಿಸಿರು ವ ಕೆಲವು ವಚನಗಳನ್ನು ಕಾಣಿಸಿ, ಅವುಗಳನ್ನು ವಿಶೇಷವಾಗಿ ವಿಮರ್ಶಿಸತ ಕ್ಕದ್ದೆಂದು ಹೇಳಿದ್ದಾರೆ. ಆದರೆ ಅದರಲ್ಲಿ "**ಅಯತೇ ಯಾತಿ ಅನೇನ, ಆದಿ ತ್ಯಃ ಷಣ್ಮಾಸಾನ್ದಕ್ಷಿಣೇನೈತಿ**" ಎಂಬ ವಚನಗಳು ಅಯನವು ಕೇವಲ ಸೂ– ರ್ಯಗತಿಯಿಂದಲೇ ನಿಷ್ಪನ್ನವಾಗತಕ್ಕದ್ದಾಗಿದ್ದು ಚಾಂದ್ರ, ಆಯನ ಮೊದ ಲಾದ ಇತರ ಗತಿಗಳಿಂದ ಉಂಟಾಗತಕ್ಕದ್ದಲ್ಲವೆಂಬುದನ್ನು ಪ್ರತಿಪಾದಿಸಲಿ ಕ್ಕಾಗಿ ಉದಾಹರಿಸಲ್ಪಟ್ಟದ್ದಾಗಿರುವುದರಿಂದಲೂ, '**ಉತ್ತರಾಂ ತು ಯದಾ ಕಾಷ್ಠಾಂ**' ಇತ್ಯಾದಿ ವಚನಗಳು ಕೇವಲ ದಿನಮಾನದ ವೃದ್ಧಿ–ಕ್ಷಯಗಳಿಗೆ ಕಾರಣವನ್ನು ಹೇಳತಕ್ಕವುಗಳಾಗಿರುವುದರಿಂದಲೂ ಈ ಯಾವ ವಚನವೂ ಇವರ ಸಾಯನಾಯನವು ಕರ್ಮಾರ್ಹವೆಂದು ಸಮರ್ಥಿಸುವುದಿಲ್ಲ. ಇಷ್ಟೇ ಅಲ್ಲ; ಇಂತಹ ಅನೇಕವಚನಗಳನ್ನು ವಿಶೇಷವಾಗಿ ವಿಮರ್ಶಿಸಿರುವ ಶ್ರೀಮಾ ಧವಾಚಾರ್ಯರೇ ಅದೇ ಕಾಲಮಾಧವದಲ್ಲಿ ಅಯನನಿರ್ಣಯವನ್ನು ಹೇಳು ವಾಗ ಇವರು ತೋರಿಸಿರುವ ವಚನದ ಮುಂದೆಯೇ ಅನ್ಯಮತವನ್ನು ನಿರಾಸ ಮಾಡಿ "**ಶ್ರೌತಸ್ಮಾರ್ತಕರ್ಮಾನುಷ್ಠಾನೇ ತು ಮಕರ-ಕರ್ಕಟಸಂಕ್ರಾಂತ್ಯಾ ದಿಕ ಏವಾಯನದ್ವಯಕಾಲಃ।**" ಅಂದರೆ– ಶ್ರೌತಸ್ಮಾರ್ತಕರ್ಮಾನುಷ್ಠಾನ ಗಳಲ್ಲಿ ಮಕರ-ಕರ್ಕಟಸಂಕ್ರಾಂತಿಗಳಿಂದಲೇ ಅಯನಾರಂಭವನ್ನೆಣಿಸತಕ್ಕ ದ್ದೆಂದು ಯಾರಿಗೂ ಸಂಶಯವುಳಿಯದಂತೆ ಅತಿಸ್ಪಷ್ಟವಾಗಿ ಹೇಳಿ ಇವರ ಸಾ ಯನಾಯನವನ್ನು ಸಮೂಲವಾಗಿ ಖಂಡಿಸಿರುತ್ತಾರೆ. ಇದರಂತೆಯೇ ವೈದ್ಯ ನಾಥೀಯ, ನಿರ್ಣಯಸಿಂಧು, ಧರ್ಮಸಿಂಧು ಮೊದಲಾದ ಸಮಸ್ತ ನಿರ್ಣಯ ಗ್ರಂಥಗಳಲ್ಲಿಯೂ ಅತಿಸ್ಪಷ್ಟವಾಗಿ ಹೇಳಿರುವ ನಿರ್ಣಯ ವಚನಗಳೆಲ್ಲ ಇವರಿ ಗೆ ಕಂಠರಜ್ಜುಗಳಾಗಿ ಪರಿಣಮಿಸಿರುವುದರಿಂದ ಅಂಥ ವಚನಗಳಲ್ಲಿ ಮಕರ- ಕರ್ಕಟಸಂಕ್ರಾಂತಿಗಳೆಂದು ಸ್ಪಷ್ಟವಾಗಿ ಹೇಳಿರುವುದಕ್ಕೆ ಸಾಯನವೆಂದಾಗ ಲಿ, ಅಥವಾ ಶೂನ್ಯಾಯನಾಂಶ (ಅಂದರೆ ಕಾದಾಚಿತ್ಕವಾದ ಯಾವುದೋ ಒಂದು) ಕಾಲದ ಪರಿಸ್ಥಿತಿಯನ್ನನುಸರಿಸಿ ಹೇಳಿದ್ದೆಂತಾಗಲಿ ಸಾಧಿಸಲಿಕ್ಕೆ ಇವ

ರು ಪ್ರಯತ್ನಿಸಿರುತ್ತಾರೆ*. ಆದರೆ ಆ ಗ್ರಂಥಗಳೆಲ್ಲ ಬೇರೆ ಬೇರೆ ಪರಿಮಿತಿಯ ಅಯನಾಂಶಗಳಿರುವ ಕಾಲದ್ದೇ ಆಗಿರುವುವೆಂದು ಆಯಾ ಗ್ರಂಥಗಳು ರಚಿತವಾದ ಕಾಲದ ಮೇಲಿಂದಲೂ, ಮತ್ತು ಆ ಪೈಕಿ ಕಾಲಮಾಧವ ಮೊದಲಾದ ಅನೇಕ ಗ್ರಂಥಗಳಲ್ಲಿ ಸಂಕ್ರಾಂತಿನಿರ್ಣಯವನ್ನು ಹೇಳುವ ಸಂದರ್ಭದಲ್ಲಿ ಸಾಯನದಿನಗಳನ್ನು ಸಹ ಪ್ರತ್ಯೇಕವಾಗಿ ಹೇಳಿರುವುದರಿಂದಲೂ ಸ್ಪಷ್ಟವಾಗುತ್ತಿದ್ದು ಆ ಗ್ರಂಥಕರ್ತರೆಲ್ಲರೂ ಅಯನಾಂಶದ ವಿಚಾರವನ್ನು ತಿಳಿದವರೇ ಆಗಿದ್ದರೆಂಬುದು ಸಹ ನಿರ್ವಿವಾದವಾಗಿ ಸಿದ್ಧವಾಗುವುದಲ್ಲದೆ ಆ ಯಾರೊಬ್ಬ ಗ್ರಂಥಕರ್ತರೂ ಕರ್ಮಾರ್ಹವಾದ ಅಯನ ನಿರ್ಣಯವನ್ನು ಹೇಳುವಾಗ ಅಂಥ ಅಯನಾಂಶಗಳನ್ನು ಅಯನದಲ್ಲಿ ಸೇರಿಸದೆ ಎಲ್ಲರೂ ಏಕಕಂಠವಾಗಿ ಕೇವಲ (ನಿರಯನ) ಕರ್ಕಟ–ಮಕರಸಂಕ್ರಾಂತಿಗಳಿಂದಲೇ (ಕರ್ಮಾರ್ಹವಾದ) ದಕ್ಷಿಣೋತ್ತರಾಯಣಗಳನ್ನು ಆರಂಭಿಸತಕ್ಕದ್ದೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಇವರ ಈ ದುಸ್ಸಾಧನೆಯ ಪ್ರಯತ್ನವೆಲ್ಲವೂ ಕೇವಲ ನಿಷ್ಫಲವಾಗಿರುವುದು. ಅಷ್ಟು ಮಾತ್ರವಲ್ಲ; ಇವರ ಸಾಯನಾಯನದ ವಿರುದ್ಧವಾಗಿ ಅದರ ಖಂಡನೆಯೇ ಸಿದ್ಧವಾಗಿರುವುದು.

ಪುಟ ೨೨–೨೩ ರಲ್ಲಿ ವೇದಾಂಗಜ್ಯೋತಿಷ, ಗರ್ಗ, ಪರಾಶರ, ಬೋಧಾಯನರ ಹೆಸರುಗಳನ್ನೆತ್ತಿಕೊಂಡು ಕೆಲವು ವಚನಗಳನ್ನು ಕಾಣಿಸಿದ್ದಾರೆ. ಆದರೆ ಈ ಯಾವ ವಚನಗಳಲ್ಲಿಯೂ ಕರ್ಮಾರ್ಹವಾದ ಅಯನ ನಿರ್ಣಯದ ವಿಷಯವೇ ಬಂದಿಲ್ಲ. " **ಸೌರ್ಯಂ ತು ಸೂರ್ಯಸಂಭೂತಂ** '' ಇತ್ಯಾದಿ ಗರ್ಗವಚನಗಳು ಸಹ ದಿನ, ಮಾಸ, ಋತು, ಅಯನ, ಸಂವತ್ಸರಗಳನ್ನೆಲ್ಲ ಒಂದೇ (ನಿರಯನ) ಮಾನದಿಂದಲೇ ಎಣಿಸತಕ್ಕದ್ದೆಂದು ಹೇಳುವದರಿಂದ ಅದು ನಮ್ಮ ಸಿದ್ಧಾಂತಪಕ್ಷಕ್ಕೇನೇ ಸಾಧಕವಾಗಿರುವುದಲ್ಲದೆ ಮಾಸ, ವತ್ಸರಾದಿಗಳನ್ನೆಲ್ಲ ನಿರಯನವೆಂದೇ ಒಪ್ಪಿ, ಆ ರೀತಿ ತಮ್ಮ ವೃಕ್ಪಂಚಾಂಗದಲ್ಲಿ ಸಹ ಕಾಣಿಸುತ್ತಿದ್ದು ದಕ್ಷಿಣೋತ್ತರಾಯಣಗಳು ಮಾತ್ರ ಸಾಯನವೆನ್ನುತ್ತಿರುವ ಇವರಿಗೆ ಈ ಗರ್ಗವಚನಗಳು ನಿರಯನ, ಅಥವಾ ಸಾಯನಪರವಾಗಿ ಹೇಗೆ ಅರ್ಥಮಾಡಿದರೂ ತೀರಾ ಬಾಧಕಗಳೇ ಆಗಿರುವವು. ಇದರಂತೆ ವೇದಾಂಗಜ್ಯೋತಿಷಾದಿ ವಚನಗಳೂ ಕೂಡ ಇವರಿಗೆ ಸಾಧಕವೆನ್ನುವುದು ತೀರಾ ಅಸಮಂಜಸವಾಗಿದೆ.

ಪುಟ ೨೪–೨೫ ರಲ್ಲಿ ' **ಮಘಾದ್ಯಂ** ' ' **ಕೃತ್ತಿಕಾಃ ಪ್ರಥಮಂ** ' ಮೊದಲಾದ ಕೆಲವು ಶ್ರುತಿವಚನಗಳನ್ನು ಕಾಣಿಸಿದ್ದಾರೆ. ಆದರೆ ಇವರು ಸಮರ್ಥಿಸಲಿಕ್ಕೆ ತೊಡಗಿರುವ, ಸಾಯನ ಅಯನವೇ ಕರ್ಮಯೋಗ್ಯವಾದ್ದೆನ್ನುವ

---

* ಇವರ ಗ್ರಂಥದ ಪುಟ ೩೪, ಪಂಕ್ತಿ ೨೨–೨೩ ; ಪುಟ ೩೫, ಪಂಕ್ತಿ ೭–೮; ಪುಟ ೪೩ ಪಂಕ್ತಿ ೧೦–೧೨ ಮೊದಲಾದ ಕಡೆಗಳಲ್ಲಿ ನೋಡಿರಿ !

ಇವರ ವಾದವನ್ನು ಆ ಶ್ರುತಿವಚನಗಳಾಗಲೀ, ಅವುಗಳಿಗೆ ಇವರು ಕಲ್ಪಿಸಿ ಬರೆದಿರುವ ಅರ್ಥಗಳಾಗಲೀ ಏನೂ ಸಮರ್ಥಿಸುವುದಿಲ್ಲ. ಮತ್ತು (ನಿರಯನ) ಕರ್ಕಟಮಕರಾದಿಯಾಗಿರತಕ್ಕ ದಕ್ಷಿಣೋತ್ತರಾಯಣಗಳೇ ಕರ್ಮಾಚರಣೆಗೆ ವಿಹಿತವಾದ್ದೆಂಬ ಶಾಸ್ತ್ರಸಿದ್ಧಾಂತಕ್ಕೆ ಅವುಗಳಿಂದ ಬಾಧಕವೂ ಇರುವುದಿಲ್ಲ. ಹೇಗಂದರೆ:— '**ಮಘಾದ್ಯಂ, ಶ್ರವಿಷ್ಠಾರ್ಧಂ**' ಎಂಬ ವಚನವು ವತ್ಸರದ ಅಗ್ನಿ–ಸೋಮಾತ್ಮಕತ್ವವನ್ನು ಹೇಳುವುದಾಗಿದ್ದು ಕರ್ಮಾರ್ಹವಾದ ಅಯನ ನಿರ್ಣಯಕ್ಕಾಗಿ ಹೇಳಿದ್ದಲ್ಲ. '**ಕೃತ್ತಿಕಾಃ ಪ್ರಥಮಂ**' ಇತ್ಯಾದಿ ವಚನಗಳಲ್ಲಿ ಹೇಳಿರುವ ದೇವ, ಯಮಗಳೆಂಬ ಸಂಕೇತಗಳು ಆಯಾ ನಕ್ಷತ್ರಗಳಿಗೆ ನಿತ್ಯವಾಗಿರುವುದಲ್ಲದೆ ಇವರು ಕಲ್ಪಿಸಿದಂತೆ ಯಾವುದೋ ಒಂದು ಕಾಲಕ್ಕೆ ಮಾತ್ರ ಸಂಬಂಧಿಸಿದ್ದಲ್ಲ. ಮತ್ತು ಅವರಲ್ಲಿ '**ದಕ್ಷಿಣೇನ**' '**ಉತ್ತರೇಣ**' ಎಂಬ ಶಬ್ದಗಳಿಂದ ಆಯಾ ಸಂಕೇತದ ನಕ್ಷತ್ರಗಳ ವಿಭಿನ್ನವಾದ ಸಂಬಂಧವನ್ನು ಮಾತ್ರ ಹೇಳಿದ್ದು, ಅದು ಸಹ ನಿತ್ಯವಾಗಿಯೇ ಇರತಕ್ಕದ್ದಾಗಿದೆ. '**ತಸ್ಮಾದಾದಿತ್ಯಃ**' ಎಂಬ ವಚನದಲ್ಲಿ ದಕ್ಷಿಣೋತ್ತರಗಳ ಅವಧಿಯನ್ನೇನೂ ಹೇಳಿರದೆ ಆರು ಮಾಸಗಳೆಂಬುದನ್ನು ಮಾತ್ರ ಸ್ಪಷ್ಟವಾಗಿ ಹೇಳಿರುವುದರಿಂದ ಅದು ನಿರಯನಅಯನವನ್ನೇ ಸಾಧಿಸಿ ಇವರ ಸಾಯನ ಅಯನವನ್ನು ಖಂಡಿಸುತ್ತದೆ. '**ವಸಂತೋ ಗ್ರೀಷ್ಮೋ ವರ್ಷಾಃ**' ಇತ್ಯಾದಿ ವಚನಗಳಲ್ಲಿ ಋತುಗಳ ದೇವ, ಪಿತೃಸಂಕೇತಗಳನ್ನು ನಿತ್ಯವಾಗಿಯೇ ಹೇಳಿದ್ದು '**ಉದಗಾವರ್ತತೇ**' '**ದಕ್ಷಿಣಾವರ್ತತೇ**' ಎಂದಿರುವುದು ಆ ಋತುಗಳಿಗೆ ಅನ್ವಯಿಸಿ ಹೇಳಿದ್ದಲ್ಲವೆಂತಾಗಲಿ, ಅಥವಾ ಉಪಲಕ್ಷಣವಾಗಿ ಹೇಳಿದ್ದೆಂತಾಗಲಿ ತಿಳಿಯಬೇಕಾಗಿದೆ. ಇದನ್ನು ಇವರಾದರೂ ಒಪ್ಪಿಕೊಳ್ಳದೆ ನಿವೃತ್ತಿಯಿಲ್ಲ. ಯಾಕಂದರೆ— ಇಲ್ಲಿ ಹೇಳಿರುವ ಋತುಗಳು ಪ್ರಸಿದ್ಧವಿರುವ ಚಾಂದ್ರ ಋತುಗಳೆಂದು ಗ್ರಹಿಸಿದರೆ ಅವುಗಳು ಯಾವುದೊಂದು ನಿಷ್ಕೃಷ್ಟವಾದ ಸೂರ್ಯಚಾರವನ್ನು ಹೊಂದಿರತಕ್ಕವುಗಳಲ್ಲವೆಂಬುದು ಸಹಜವಿದೆ. ಇನ್ನು ಸೌರ ಋತುಗಳೆಂದೇ ಕಲ್ಪಿಸಿಕೊಂಡರೂ ಮೀನಾಯನದಿನದಲ್ಲಿಯೇ ಸೌರ ವಸಂತಋತುವಿನ ಆರಂಭವನ್ನು ಕಲ್ಪಿಸಿಕೊಂಡಿರುವ ಇವರಿಗೆ* (ಮೀನಾಯನದಿನದಲ್ಲಿ ಉದಗಾವರ್ತನವು ಹೇಗೂ ಸಂಭವಿಸುವುದಿಲ್ಲವಾದುದರಿಂದ) ಈ ಕಲ್ಪನೆಯು ಸಹ ಸಾಧಕವಾಗುವದಿಲ್ಲ. ಆದುದರಿಂದ ಈ ವಚನಗಳಿಗೆ ಋತುಗಳ ಕೇವಲ ದೃಶ್ಯ ಲಕ್ಷಣವನ್ನು ಹೇಳುವ ತಾತ್ಪರ್ಯವಿಲ್ಲವೆಂಬುದನ್ನು ಇವರಾದರೂ ಒಪ್ಪಲೇಬೇಕು.

ಹೀಗೆ ತಮ್ಮ ಅಯನಸಮರ್ಥನೆಗೆ ಏನೂ ಸಂಬಂಧವಿಲ್ಲದ ಶ್ರುತಿವಚನಗಳನ್ನು ಅಪ್ರಾಸಂಗಿಕವಾಗಿ ಕಾಣಿಸದ್ದಲ್ಲದೆ ಮುಂದೆ ಅವುಗಳ ಅರ್ಥವನ್ನು ಸಹ ಅಸಂಬದ್ಧವಾಗಿ ಕಲ್ಪಿಸಿದ್ದಾರೆ. ತೈತ್ತಿರೀಯಬ್ರಾಹ್ಮಣದಲ್ಲಿ ಹೇಳಿರುವ ದೇವನಕ್ಷತ್ರ, ಯಮನಕ್ಷತ್ರಗಳ ಅರ್ಥವನ್ನು ವಿವರಿಸುವಾಗ ಪುಟ ೫೫

* ಕಳೆದ ಬಹುಧಾನ್ಯಸಂವತ್ಸರದ ಆದಿಯಾಗಿ ಇವರ ಪಂಚಾಂಗಗಳನ್ನು ನೋಡಿರಿ !

ರಲ್ಲಿ —'ಕೃತ್ತಿಕಾದಿ ವಿಶಾಖಾಂತನಕ್ಷತ್ರಗಳು ಉತ್ತರಮೇರುಪ್ರದೇಶದಲ್ಲಿ ಸರ್ವದಾ ತೋರುತ್ತವೆಂದೂ, ಅನೂರಾಧಾದಿ ಭರಣ್ಯಂತನಕ್ಷತ್ರಗಳು ದಕ್ಷಿಣಮೇರುಪ್ರದೇಶದಲ್ಲಿ ಸದಾ ತೋರುತ್ತವೆ'ಂದೂ ಬರೆದಿದ್ದಾರೆ. ಇಲ್ಲಿ ಇವರು 'ತೋರುವ ನಕ್ಷತ್ರಗಳು' ಎಂದು ವಿಶೇಷಿಸಿ ಬರೆದಿರುವುದರಿಂದ ದೃಶ್ಯವಾಗಿರುವ ನಕ್ಷತ್ರತಾರೆಗಳನ್ನೇ ಕುರಿತು ಹಾಗೆ ಹೇಳಿದ್ದೆಂತಲೂ, ಶಾಸ್ತ್ರಸಂಕೇತದಂತೆ ಎಂಟು ನೂರು ಕಲೆಗಳ ಪರಿಮಿತಿಯುಳ್ಳ ನಕ್ಷತ್ರವಿಭಾಗವನ್ನು ಕುರಿತು ಹೇಳಿದ್ದಲ್ಲವೆಂತಲೂ ವ್ಯಕ್ತವಾಗುತ್ತದೆ. ಯಾಕಂದರೆ— ತಾರೆಗಳಿಲ್ಲದ ಕೇವಲ (ನಕ್ಷತ್ರ) ವಿಭಾಗವು ಎಂದಿಗೂ ತೋರತಕ್ಕದ್ದಾಗಿಲ್ಲ. ಈ ವಿಷಯವನ್ನು ಹಿಂದೆ 'ದೃಕ್ಪಂಚಾಂಗಸಮರ್ಥನೆ'ಯ ಖಂಡನೆಯಲ್ಲಿಯೇ ಸಕಾರಣವಾಗಿ ವಿವರಿಸಿರುವೆವು. ಮತ್ತು ಇವರು ಕಲ್ಪಿಸಿಕೊಂಡಿರುವಂತೆ ಮೈತ್ರ್ಯುಪನಿಷತ್ತಿಗಿಂತ ಹಿಂದಿನದಾದ ತೈತ್ತಿರೀಯಬ್ರಾಹ್ಮಣದ ಕಾಲ(?) ದಲ್ಲಿ ವಿಭಾಗಾತ್ಮಕ ನಕ್ಷತ್ರಗಳೇ ಇದ್ದಿಲ್ಲವೆಂದು ಇವರ ದೃಕ್ಪಕ್ಷದ ಅಗ್ರೇಸರರಾದ ಶ್ರೀ. ಡಿ. ವಿ. ಕೇತಕರರು ತಮ್ಮ ಕೇತಕೀ ಭಾಷ್ಯದಲ್ಲಿ— "ವೈದಿಕಕಾಲೇ ದೃಶ್ಯನಕ್ಷತ್ರಾಣ್ಯೇವಾಸನ್ । ವಿಭಾಗಾತ್ಮಕನಕ್ಷತ್ರಪದ್ಧತಿರ್ನಾಸೀತ್ ।" ಎಂಬಲ್ಲಿ ಕಾಣಿಸಿದ್ದಾರೆ. ಇವರ ಮೇಲಿಂದಲೂ ಸಹ ದೃಶ್ಯತಾರೆಗಳನ್ನೇ ಲಕ್ಷಿಸಿ ಇವರು ಹಾಗೆ ಹೇಳಿದ್ದೆಂಬುದು ಸ್ಪಷ್ಟವಾಗುತ್ತದೆ. ಆದರೆ ಇವರು ವಿವರಿಸಿರುವಂತೆ ದೇವ, ಯಮ ನಕ್ಷತ್ರತಾರೆಗಳೆಲ್ಲವೂ ಆಯಾ ಪ್ರದೇಶಗಳಲ್ಲಿಯೇ ತೋರುತ್ತವೆಂಬುದು ನಿಯಮವಾಗಿಲ್ಲ. ಹೇಗೆಂದರೆ:— ಯಮನಕ್ಷತ್ರಗಳ ಪೈಕಿ ಶ್ರವಣ, ಧನಿಷ್ಠಾ ಮೊದಲಾದ ಅನೇಕ ನಕ್ಷತ್ರಗಳು ಪರಮಕ್ರಾಂತಿಗಿಂತಲೂ ಹೆಚ್ಚಿಗೆ ಉತ್ತರ ಶರವುಳ್ಳವುಗಳಾಗಿರುವ ಕಾರಣ ಸೃಷ್ಟ್ಯಾದಿ ಪ್ರಲಯಾಂತದವರೆಗೆ ಯಾವ ಕಾಲದಲ್ಲಿಯೂ ದಕ್ಷಿಣ ಮೇರುಪ್ರದೇಶದಲ್ಲಿ ತೋರತಕ್ಕವುಗಳಾಗಿಲ್ಲ. ಅದರಂತೆ ದೇವನಕ್ಷತ್ರಗಳಾದ ರೋಹಿಣೀ, ಮೃಗಶೀರ್ಷ ಮೊದಲಾದ ಅನೇಕ ನಕ್ಷತ್ರಗಳು ಇವರು ಕಲ್ಪಿಸಿರುವ ಕೃತ್ತಿಕಾಯೋಗತಾರೆಯ ಸಂಪಾತ(?) ಕಾಲದಲ್ಲಿ ಉತ್ತರ ಕ್ರಾಂತಿಗಿಂತ ಹೆಚ್ಚಿಗೆ ದಕ್ಷಿಣ ಶರವಿರುವ ಮೂಲಕ ಉತ್ತರಮೇರುಪ್ರದೇಶದಲ್ಲಿಯೂ ತೋರತಕ್ಕವುಗಳಲ್ಲ. ಮತ್ತು ದೇವ, ಯಮಗಳೆಂಬ ಭೇದವಿಲ್ಲದೆ ನಕ್ಷತ್ರಗಳೆಲ್ಲವೂ ದೇವಭಾಗಕ್ಕೆ ಪ್ರದಕ್ಷಿಣವಾಗಿಯೂ, ಅಸುರ(ಯಮ) ಭಾಗಕ್ಕೆ ಅಪ್ರದಕ್ಷಿಣವಾಗಿಯೂ ತಿರುಗುತ್ತಿರುವದರಿಂದ ದೇವ–ಯಮ ವಿಭಾಗಕ್ಕೆ ಇವರು ಕಲ್ಪಿಸಿರುವ ಆ ಕಾರಣವು ಸಹ ಸರಿಯಾದ್ದಲ್ಲ. ಆದುದರಿಂದ ಶ್ರುತಿವಚನಗಳಿಗೆ ದೃಕ್ಪಕ್ಷದವರು ಕಲ್ಪಿಸಿರುವ ಅರ್ಥವೆಲ್ಲ ತೀರ ಅಸಂಬದ್ಧವೇ ಆಗಿರುತ್ತದೆಂದು ಕೇವಲ ಗಣಿತ-ಗೋಲಗಳಿಂದಲೂ ಸಿದ್ಧವಾಗುತ್ತಿದ್ದು ಇಷ್ಟರ ಮೇಲಿಂದಲೇ ಎಲ್ಲರಿಗೂ ಸ್ಪಷ್ಟವಾಗಿ ತಿಳಿಯುವಂತಿದೆ. ಇರಲಿ!

ಹೀಗೆ ದೇವ–ಯಮ ನಕ್ಷತ್ರಗಳಿಗೆ ಕ್ರಮವಾಗಿ ಉತ್ತರ, ದಕ್ಷಿಣ ಮೇರುಪ್ರದೇಶಗಳಲ್ಲಿ ತೋರತಕ್ಕವುಗಳೆಂತಾಗಲೀ, ಪ್ರದಕ್ಷಿಣ– ಅಪ್ರದಕ್ಷಿಣ

ವಾಗಿ ತಿರುಗತಕ್ಕವುಗಳೆಂತಾಗಲೀ ಲಕ್ಷಣವೆಂದು ಸಿದ್ಧವಾಗದಿರುವದರಿಂದ ಪುನಃ ಇವರು 'ಸೂರ್ಯನು ಕೃತ್ತಿಕಾದಿ ನಕ್ಷತ್ರಗಳಲ್ಲಿ ದೇವಲೋಕವನ್ನು ಪ್ರದಕ್ಷಿಣವಾಗಿಯೂ, ಅನೂರಾಧಾದಿ ನಕ್ಷತ್ರಗಳಲ್ಲಿ ಯಮಲೋಕವನ್ನು ಅಪ್ರದಕ್ಷಿಣವಾಗಿಯೂ ಪರಿಭ್ರಮಿಸುತ್ತಾನೆ;' ಎಂದದ್ದು ಸಹ ಯುಕ್ತವಾಗಿರುವದಿಲ್ಲ. ಯಾಕಂದರೆ— ಮೂಲತಃ ನಕ್ಷತ್ರತಾರೆಗಳೆಲ್ಲವೂ ಕ್ರಾಂತಿವೃತ್ತದ ಮೇಲೆಯೇ ಇರದೆ ಶರವಶದಿಂದ ಬೇರೆ ಬೇರೆ ಕಡೆಗಳಲ್ಲಿರುತ್ತವೆ. ಅವುಗಳು ಕ್ರಾಂತಿವೃತ್ತದ ಮೇಲೆ ಬರುವುದೇ ಇಲ್ಲ. ಹಾಗಾದಮೇಲೆ ನಿಯತವಾಗಿ ಕ್ರಾಂತಿವೃತ್ತದಲ್ಲಿಯೇ ತಿರುಗುತ್ತಿರತಕ್ಕ ಸೂರ್ಯನು ಅಲ್ಲಿಂದ ಬೇರೆಕಡೆ ಇರತಕ್ಕ ಕೃತ್ತಿಕಾದಿ(ಸಶರ) ತಾರೆಗಳಲ್ಲಿ ಸಂಚರಿಸುವುದಾದರೂ ಹೇಗೆ? ಆದುದರಿಂದ ಇವರ ಈ ಅರ್ಥವು ಸಹ ಇವರ ಕಲ್ಪನೆಯಂತೆಯೇ ಅಸಂಭಾವಿತವಾಗಿರುತ್ತದೆ.

ಮುಂದೆ ಸೂರ್ಯನು ಉತ್ತರಗೋಲಾರ್ಧದಲ್ಲಿ ಸಂಚರಿಸುವಾಗ ವಸಂತಾದಿ ಮೂರು ದೇವಋತುಗಳಾಗುತ್ತವೆಂದೂ, ದಕ್ಷಿಣಗೋಲಾರ್ಧದಲ್ಲಿ ಸಂಚರಿಸುವಾಗ ಶರದಾದಿ ಮೂರು ಪಿತೃಋತುಗಳಾಗುತ್ತವೆಂದೂ ಬರೆದಿದ್ದಾರೆ. ಇದರಿಂದ ಇವರ ಕಲ್ಪನೆಯಂತೆ ಸಾಯನ ಸೂರ್ಯನು ಉತ್ತರಗೋಲಾರ್ಧಕ್ಕೆ ಪ್ರವೇಶಿಸುವ ವಿಷುವದಿನವೇ ವಸಂತಋತುವಿನ ಆರಂಭದಿನವೆಂದು ಇವರು ಕಲ್ಪಿಸಿದ್ದಂತ ಸ್ಪಷ್ಟವಾಗುತ್ತದೆ. ಆದರೆ ಇಲ್ಲಿ ಹೀಗೆ ಕಲ್ಪಿಸಿ ಬರೆದಿರುವ ಇವರೇ ಹಿಂದೆ ಪುಟ ೩೩, ಪಂಕ್ತಿ ೨೨-೨೩ ರಲ್ಲಿ ಸೂರ್ಯನು ಧನಿಷ್ಠಾದಿಯಾಗಿ (ಅರ್ಥಾತ್ ಆಗಿನ ಕಾಲದ ಸಾಯನ ಉದಗಯನವು ಆರಂಭವಾಗಿ) ೪॥ ನಕ್ಷತ್ರಗಳನ್ನು ಭೋಗಿಸುವ ಕಾಲಗಳೇ ಶಿಶಿರಾದಿ ಋತುಗಳಾಗುತ್ತವೆಂದೂ, ಮುಂದೆ ಪುಟ ೩೬, ಪಂಕ್ತಿ ೧೧-೧೨ ರಲ್ಲಿ (ಸಾಯನ) ಉದಗಯನಾರಂಭದಲ್ಲಿಯೇ ಶಿಶಿರಋತುವಿನ ಆರಂಭವೂ ಆಗಿನ ಕಾಲದಲ್ಲಿ ಪರಿಗೃಹೀತವಾಗಿತ್ತೆಂದೂ ಬರೆದಿರುವರಲ್ಲದೆ ಆ ರೀತಿ ತಮ್ಮ ಪಂಚಾಂಗದಲ್ಲಿಯೂ ಸಹ ಕಾಣಿಸುತ್ತಿದ್ದಾರೆ. ಆದರೆ ಇವೆರಡೂ ಪರಸ್ಪರ ವಿರುದ್ಧವಾಗಿರುವ ಕಲ್ಪನೆಗಳೆಂಬುದು ಸ್ವಲ್ಪಮಟ್ಟಿಗೆ ವಿಚಾರಿಸಿದರೆ ಯಾರಿಗೂ ತಿಳಿಯಬಹುದು. ಹೇಗಂದರೆ— ಸಾಯನ ಉದಗಯನಾರಂಭದಿನಕ್ಕೂ, ಉತ್ತರವಿಷುವದಿನಕ್ಕೂ ಮಧ್ಯದಲ್ಲಿ ೬॥ಸೌರನಕ್ಷತ್ರಗಳ ಅರ್ಥಾತ್ ಮೂರು ಮಾಸಗಳ ಅಂತರವಿರುವುದು ನಿಯತವಾಗಿರುವಾಗ ಉದಗಯನಾರಂಭದಲ್ಲಿ ಶಿಶಿರರ್ತುವಿನ ಆರಂಭವೂ ಆಗಿ ೩ ಮಾಸಗಳು ಕಳೆದ ನಂತರವೇ ಮುಂದಿನ ವಸಂತರ್ತುವು ಆರಂಭವಾಗುವುದೆಂದರೆ ಇದೆಂತಹ ವಿಚಿತ್ರಕಲ್ಪನೆಯೆಂಬುದನ್ನು ವಾಚಕರೇ ತಿಳಿದುಕೊಳ್ಳಲಿ! ಈ ವಿರುದ್ಧಕಲ್ಪನೆಗಳಿಂದ ಶಿಶಿರರ್ತುವಿನ ಅಂತ್ಯಕ್ಕೂ, ವಸಂತರ್ತುವಿನ ಆರಂಭಕ್ಕೂ ಮಧ್ಯದಲ್ಲಿ ಉಳಿಯುವ ೧ ಮಾಸಕ್ಕೆ ಯಾವ ಋತುವೆನ್ನಬೇಕೆಂದು ಇವರನ್ನೇ ಕೇಳಬೇಕು! ಇನ್ನು-ಇಂತಹ ವಿಚಿತ್ರಕಲ್ಪನೆಯ ಸಮರ್ಥನೆಗೆಂದು ೭ ನೆಯದಾದ ಒಂದು ಹೊಸ ಋತುವನ್ನಾಗಲಿ, ಅಥವಾ ಶಿಶಿರಋ

ತುವಿಗೆ ಮೂರು ತಿಂಗಳು; ಮತ್ತೊಂದು ಋತುವಿಗೆ ಒಂದು ತಿಂಗಳು ಎಂತಾಗಲಿ ಕಲ್ಪಿಸಿದರೆ ಅದು ಇವರ ಪಂಚಾಂಗಕ್ಕೂ ಸಹ ವಿರೋಧವಾಗುವುದರಿಂದ ಹಾಗೇನಾದರೂ ಇವರು ಕಲ್ಪಿಸಲಿಕ್ಕಿಲ್ಲವಷ್ಟೇ !

ಶ್ರುತಿವಚನಗಳ ಅರ್ಥವನ್ನು ಹೇಳುವದಕ್ಕಾಗಿ ಇಷ್ಟೆಲ್ಲ ಕಲ್ಪನೆಗಳನ್ನು ಮಾಡಿದ್ದೂ ಇವರಿಗೆ ಸಾಕಾಗದೆ ಮುಂದೆ ತೈತ್ತಿರೀಯ ಬ್ರಾಹ್ಮಣವೆಂಬ ವೇದಭಾಗಕ್ಕೆ ಕಾಲವನ್ನೂ ಕಲ್ಪಿಸಿ, ಅದನ್ನು ಬ್ರಾಹ್ಮಣದರ್ಶನಕಾಲವೆಂತಲೂ ವಿಕಲ್ಪಿಸಿದ್ದಾರೆ. ಆದರೆ ಈ ಬಗ್ಗೆ ಅದೇ ಪುಟ ೩೪ರ ಕೆಳಗೆ ಕೊಟ್ಟಿರುವ ಟಿಪ್ಪಣಿಯಲ್ಲಿ ವೇದವು ನಿತ್ಯವೆಂಬುದನ್ನೂ ಒಪ್ಪಿಕೊಂಡಿದ್ದಾರೆ. ಇದು ಸಹ ಇವರ ವಿರುದ್ಧ ಕಲ್ಪನೆಯೇ ಸರಿ. ಹೇಗೆಂದರೆ:— ನಿತ್ಯವೆನ್ನುವದು "**ಸರ್ವಕಾಲವೃತ್ತಿತ್ವಂ ನಿತ್ಯತ್ವಂ**" ಎಂಬ ಲಕ್ಷಣದಂತೆ ಎಲ್ಲ ಕಾಲಗಳಲ್ಲಿಯೂ ಇರತಕ್ಕದ್ದಾದ್ದರಿಂದ ಅಂತಹ ನಿತ್ಯವಾದ ವೇದವು ಅರ್ಥಾತ್ ವೇದಾರ್ಥವೂ ಸಹ ಅದು ಋಷಿಗಳಿಗೆ ದೃಷ್ಟವಾದ್ದೆನ್ನುವ ಕಾಲಕ್ಕೆಂತಾಗಲಿ, ಅಥವಾ ಇತರ ಯಾವುದಾದರೂ ಒಂದು ನಿರ್ದಿಷ್ಟವಾದ ಕಾಲಕ್ಕೆ ಮಾತ್ರವೇ ಸಂಬಂಧಿಸಿದ್ದೆಂತಾಗಲಿ ಕಲ್ಪಿಸುವದು ವೇದದ ನಿತ್ಯತ್ವಕ್ಕೆ ತೀರ ವಿರುದ್ಧವಾಗಿರುವದು. ಇದರಿಂದ ವೇದವು ನಿತ್ಯವೆಂದು ಒಪ್ಪಿರುವ ತನಗೆ ತನ್ನ ಮಾತಿನಿಂದಲೇ ವಿರೋಧವನ್ನು ಕಲ್ಪಿಸಿಕೊಳ್ಳುವ ಸ್ವವ್ಯಾಹತಿಯು ಉಂಟಾಗುತ್ತದೆಂಬುದನ್ನು ಸಹ ಲಕ್ಷಿಸದೆ ಹೀಗೆ ಪೂರ್ವಾಪರವಿರುದ್ಧವಾಗಿ ಬರೆದು, ವಿಷಯದ ಅಭಿಪ್ರಾಯವಾಗದಂತೆ ಸಾಮಾನ್ಯಜನತೆಯನ್ನು ವಂಚಿಸಿಯೂ ತಮ್ಮ ಆತ್ಮವಂಚನೆಯನ್ನು ಸಹ ಮಾಡಿಕೊಂಡಿರುವರೆಂಬುದು ಸ್ಪಷ್ಟವಾಗುತ್ತದೆ. ಇದೂ ಅಲ್ಲದೆ ಈ ಬ್ರಾಹ್ಮಣವಚನದಿಂದ ಇವರು ಕಲ್ಪಿಸಿಕೊಂಡ ಆ ಕಾಲದಲ್ಲಿ 'ಕೃತ್ತಿಕಾ ಯೋಗತಾರೆಯೇ ಕ್ರಾಂತಿ–ವಿಷುವ ವೃತ್ತಗಳ ಸಂಪಾತಸ್ಥಾನವೆಂದು ತಿಳಿಯುತ್ತದೆ'ಂತ ಬರೆದಿದ್ದಾರೆ. ಆದರೆ ಇವರ ಈ ಕಲ್ಪನೆಯು ಕೂಡ ಎಂದಿಗೂ ಸಂಭವಿಸಲಾರದ ಕೇವಲ ಸುಳ್ಳು ಕಲ್ಪನೆಯೇ ಆಗಿರುತ್ತದೆಂದು ಸ್ವಲ್ಪಮಟ್ಟಿಗಾದರೂ ಗೋಲಜ್ಞಾನವಿರುವ ಪ್ರತಿಯೊಬ್ಬನಿಗೂ ತಿಳಿಯುವಂತಿದೆ. ಹೇಗೆಂದರೆ:— ಕೃತ್ತಿಕಾ ಯೋಗತಾರೆಯು ಕ್ರಾಂತಿವೃತ್ತದ ಮೇಲೆಯೇ ಇರದೆ ಅಲ್ಲಿಂದ ಸುಮಾರು ೪ ಭಾಗಗಳಿಗೂ ಮಿಕ್ಕಿ ಉತ್ತರದಲ್ಲಿದೆ; ಎಂಬುದು ಸರ್ವಸಮ್ಮತವಾಗಿದೆ. ಅದು ಸೃಷ್ಟ್ಯಾದಿಯಿಂದ ಪ್ರಲಯಾಂತದವರೆಗೂ ಕ್ರಾಂತಿವೃತ್ತದ ಮೇಲೆ ಬರುವುದೇ ಇಲ್ಲ. ಅಂದಮೇಲೆ ಆ ಯೋಗತಾರೆಯು ಕ್ರಾಂತಿ-ವಿಷುವವೃತ್ತಗಳು ಸಂಧಿಸಿರುವ ಸಂಪಾತಸ್ಥಾನವೆಂತ ಆಗುವದಾದರೂ ಹೇಗೆ ? ಹಾಗೆ ಇವರು ತಿಳಿದುಕೊಂಡದ್ದೇ ಭ್ರಮ ಮೂಲಕವೆಂದು ಸಿದ್ಧವಾಗುವದರಿಂದ ಅಂತಹ ತಪ್ಪು ಕಲ್ಪನೆಯ ಸ್ಥಾನದಿಂದ ೯೦ ಅಂಶಗಳ ಹಿಂದೆ ಎಣಿಸಿರುವ ಅಯನ ಸಂಧಿಸ್ಥಾನವು ಸಹ ತಪ್ಪು ಕಲ್ಪನೆಯೇ ಆಗಿರುವದೆಂದು ಗೋಲಜ್ಞರಿಗೆ ಸ್ಪಷ್ಟವಾಗಿ ತಿಳಿಯುತ್ತದೆ.

ಮುಂದೆ " **ಸಂವತ್ಸರಾಯ ದೀಕ್ಷಿಷ್ಯಮಾಣಾ ಏಕಾಷ್ಟಕಾ-ಯಾಂ ದೀಕ್ಷೇರನ್** " ಎಂಬ ಶ್ರುತಿಯನ್ನೆತ್ತಿಕೊಂಡು ಸೂರ್ಯನ ಧನಿಷ್ಠಾಂತ್ಯಚಾರವು ಮಾಘಕೃಷ್ಣಾಷ್ಟಮಿಯಲ್ಲಿ ಘಟಿಸುವದರಿಂದ ಅದೇ ಉತ್ತರಾಯಣಾರಂಭಕಾಲವೆಂದೂ, ಮುಂದೆ ಪುಟ ೫೩ ಪಂ ೨೧ ರಲ್ಲಿ ' ಆ ಅಷ್ಟಮಿಯು ಸೌರವರ್ಷಾರಂಭದಿನವೆಂತಲೇ ಸಿದ್ಧವಾಗುತ್ತದೆ; ಎಂತಲೂ ಹೇಳಿದ್ದಾರೆ. ಇದೆಂತಹ ವಿಚಿತ್ರಕಲ್ಪನೆಯೆಂಬುದು ಸ್ವಲ್ಪ ವಿಚಾರಿಸಿದರೆ ಯಾರಿಗೂ ತಿಳಿಯದಿರದು. ಯಾಕಂದರೆ— ಸೂರ್ಯನ ಯಾವುದೊಂದು ನಕ್ಷತ್ರಚಾರವು ಸಾಯನವಾಗಲಿ, ನಿರಯನವಾಗಲಿ ಯಾವುದಾದರೂ ನಿರ್ದಿಷ್ಟವಾದ ಯಾವುದೊಂದೇ ಚಾಂದ್ರ(ಮಾಸದ)ತಿಥಿಯಲ್ಲಿ ನಿಯತವಾಗಿ ಸಂಭವಿಸುವದು ಎಂದಿಗೂ ಶಕ್ಯವಿಲ್ಲ. ಅದರಂತೆ ಸೂರ್ಯನು ಧನಿಷ್ಠಾಂತ್ಯದಲ್ಲಿರುವದು ಸಹ ಸಾಮಾನ್ಯವಾಗಿ ಮಾಘಶುಕ್ಲಷಷ್ಠಿಯ ನಂತರ ಫಾಲ್ಗುಣಶುಕ್ಲಸಪ್ತಮಿಯವರೆಗೆ ಭಿನ್ನ-ಭಿನ್ನ ತಿಥಿಗಳಲ್ಲಿಯೇ ( ಹಾಗೆಯೇ ಅಯನಾರಂಭವೂ, ಸೌರವ-ರ್ಷಾರಂಭವೂ ಸಹ ಭಿನ್ನ-ಭಿನ್ನ ತಿಥಿಗಳಲ್ಲಿಯೇ ) ಸಂಭವಿಸುತ್ತಿರುತ್ತದೆ. ಆದರಿಂದ ಯಾವುದಾದರೊಂದು ವರ್ಷದಲ್ಲಿ ಸೂರ್ಯನ ಧನಿಷ್ಠಾಂತ್ಯಚಾರವು ಮಾಘಕೃಷ್ಣಾಷ್ಟಮಿಯಲ್ಲಿಯೂ ಕಾಕತಾಲೀಯನ್ಯಾಯದಂತೆ ಸಂಭವಿಸಬಹುದಾಗಿದ್ದರೂ ಅದರ ಮುಂಚಿನ ವರ್ಷದಲ್ಲಾಗಲಿ, ಮಾರನೆಯ ವರ್ಷದಲ್ಲಾಗಲಿ ಸಹ ಆರೀತಿ ಸಂಭವಿಸುವದು ಎಂದಿಗೂ ಶಕ್ಯವಿಲ್ಲ. ಇದು ಪಂಚಾಂಗನೋಡುವಷ್ಟು ಪರಿಜ್ಞಾನವಿದ್ದ ಪ್ರತಿಯೊಬ್ಬರಿಗೂ ಯಾವ ಪಂಚಾಂಗವನ್ನು (ಇವರ ದೃಕ್ಪಂಚಾಂಗವನ್ನು ) ನೋಡಿದರೂ ಸಹ ತಿಳಿಯುವಂತಿದೆ. ಇದರಿಂದ ಯಾವುದೇ ಒಂದು ತಿಥಿಗೂ, ಸೂರ್ಯನ ಚಾರಕ್ಕೂ ನಿಯತವಾದ ಸಂಬಂಧವೇನೂ ಇಲ್ಲವೆಂಬುದು ಸ್ಪಷ್ಟವಾಗುತ್ತದೆ. ಹೀಗಿರುವಲ್ಲಿ ಆ ಭಿನ್ನ-ಭಿನ್ನತಿಥಿಗಳ ಪೈಕಿ ಮಾಘಕೃಷ್ಣಾಷ್ಟಮಿಯೊಂದನ್ನೇ ಎತ್ತಿ ಶ್ರುತಿಯಲ್ಲಿ ಹೇಳಿರಲಿಕ್ಕೆ ಅದು ಸೂರ್ಯನ ಧನಿಷ್ಠಾಂತ್ಯಚಾರವಿರುವ ದಿನವೆಂತಾಗಲಿ, ಉತ್ತರಾಯಣಾರಂಭಕಾಲವೆಂತಾಗಲಿ, ಸೌರವರ್ಷಾರಂಭವೆಂತಾಗಲಿ ಇವರು ಕಲ್ಪಿಸುವ ಅರ್ಥಗಳೆಲ್ಲ ಕೇವಲ ಅನೃತಾರ್ಥಗಳೇ ಆಗಿವೆ; ಎಂದು ಯಾರಿಗೆ ತಿಳಿಯಲಿಕ್ಕಿಲ್ಲ ? ಮೇಲಾಗಿ ಈ ಶ್ರುತಿಯು ಪೂರ್ವಪಕ್ಷದ್ದಾಗಿದೆ. ಮುಂದೆ ಅದನ್ನು ನಿರಾಕರಿಸುವಾಗ ಋತುಸಂಬಂಧವಾದ ದೋಷವನ್ನಷ್ಟೇ ಹೇಳಿರುವುದೆನ್ನುವದಾದರೂ ಅದರಲ್ಲಿ ಇತರ ದೋಷಗಳೂ ಇರಬಾರದೆಂತಿಲ್ಲ. ಮತ್ತು ಒಂದು ವಿಷಯದ ಗ್ರಾಹ್ಯಾಗ್ರಾಹ್ಯತೆಗೆ ಕಾರಣವನ್ನು ಹೇಳುವಾಗ ಎಲ್ಲ ಕಾರಣಗಳನ್ನೂ ಹೇಳಬೇಕೆಂಬ ನಿಯಮವೂ ಇಲ್ಲ.

ಹೀಗೆ ಕೇವಲ ಸ್ವಾರ್ಥಸಾಧನೆಗಾಗಿ ಇವರು ನಿತ್ಯವಾಗಿರುವ ವೇದಗಳಿಗೆಲ್ಲ ಕಾಲವನ್ನೂ, ಅಪಾರ್ಥವನ್ನೂ ಕಲ್ಪಿಸಿಕೊಂಡಿದ್ದರೂ ಇವರು ಬರೆದಿರುವ ಹಲವು ಕಲ್ಪನೆಗಳು ಯಾವ ಕಾಲದಲ್ಲಿಯೂ ಸಂಭವಿಸತಕ್ಕವುಗ

ಳಲ್ಲನೆಂದು ಸಿದ್ಧವಾಗಿರುವದರಿಂದ ಇವರ ಕಲ್ಪಿತಾರ್ಥದಂತೆಯೂ ಸಹ ಆ ಶ್ರುತಿವಚನಗಳ ಕಾಲವನ್ನು ನಿರ್ಣಯಿಸಲಿಕ್ಕೆ ಯಾರಿಗೂ ಶಕ್ಯವಿಲ್ಲದಂತೆ ಆಗಿರುವದಕ್ಕೆ ಇವರ ಅವಿಚಾರವೋ, ? ಅಥವಾ ವೇದಪುರುಷನ ಮಹಿಮೆ ಯೋ ? ಯಾವುದು ಹೆಚ್ಚಿನ ಕಾರಣವಾಗಿರಬಹುದೆಂಬುದನ್ನು ಸುಜ್ಞರೇ ತಿಳಿ ದುಕೊಳ್ಳತಕ್ಕದ್ದಾಗಿದೆ. ಆದರೆ ಇವರ ಈ ಪ್ರಯತ್ನದಿಂದ ಶ್ರುತಿವಚನಗಳಿಗೆ ವಿಪರೀತಾರ್ಥವನ್ನು ಕಲ್ಪಿಸಿ ಬರೆದಿರುವ ಪುಣ್ಯವನ್ನಷ್ಟೇ ಇವರು ಸಂಪಾದಿಸಿ ದ್ದಲ್ಲದೆ— " **ಅವೈದಿಕಮಸಂಬದ್ಧಂ ಸ್ವವಿರುದ್ಧಂ ದುರಂತಕಂ** " ಎಂಬ ಇಂತ ಹ ಕುಕಲ್ಪನೆಗಳನ್ನು ಸೃಷ್ಟಿಸಿಯೂ ಇವರು ಸಮರ್ಥಿಸಲಿಕ್ಕೆ ತೊಡಗಿರುವ ಸಾಯನಾಯನವೇ ಕರ್ಮಾರ್ಹವೆಂಬುದರ ಸಮರ್ಥನೆಯು ಈ ಯಾವ ಕಲ್ಪ ನೆಗಳಿಂದಲೂ ಆಗಿಲ್ಲವೆಂಬುದು ಎಲ್ಲರಿಗೂ ತಿಳಿಯುವಂತಿದೆ.

ಪುಟ ೨೬ ರಲ್ಲಿ '**ಅಹಃಪೂರ್ವಂ**' ಎಂಬ ಶ್ಲೋಕದ '**ಶ್ರವಣಾ ದೀನಿ ಋಕ್ಷಾಣಿ**' ಎಂಬಲ್ಲಿ '**ಶ್ರವಿಷ್ಠಾದೀನಿ ಋಕ್ಷಾಣಿ**' ಎಂದು ಶುದ್ಧಪಾ ಠವಿದ್ದು ಅದು ಪೂರ್ವಗ್ರಂಥದ ಅನುವಾದವನ್ನಷ್ಟೇ ಮಾಡಿದ್ದಾಗಿದೆ. ಮತ್ತು ಈ ವಚನದಲ್ಲಿ ಅಯನದ ಹೆಸರೇ ಬಂದಿಲ್ಲವಾದ ಕಾರಣ ಇದರಿಂದ ಇವರ ಅಯನದ ಸಮರ್ಥನೆಯು ಏನೂ ಆಗುವದಿಲ್ಲ.

ಮುಂದೆ ' ಕಾಲಕ್ರಮದಿಂದ ಭಿನ್ನ-ಭಿನ್ನ ಕಾಲ ( ಅಂದರೆ ನಕ್ಷ ತ್ರ-ಅಂಶ) ಗಳಲ್ಲಿ ಉತ್ತರಾಯಣಾರಂಭಹೇಳಿದ್ದು ಕಂಡುಬರುತ್ತದೆ; ' ಎಂದಿ ದ್ದಾರೆ. ಆದರೆ ಇವರು ಕಾಣಿಸಿರುವ ವಚನಗಳ ಮೇಲಿಂದ ಹಾಗೇನೂ ಕಂಡು ಬರುವದಿಲ್ಲವೆಂಬುದನ್ನು ಹಿಂದೆಯೇ ವಿವರಿಸಿರುತ್ತೇವೆ. ಒಂದು ವೇಳೆ ಇವರ ಈ ಕಲ್ಪನೆಯೇ ಸರಿಯೆಂದು ಗ್ರಹಿಸುವದಾದರೂ ಸಾಯನ ಉದಗಯನಾರಂ ಭಕ್ಕೆ ಸ್ಥಿರವಾದ ಒಂದು ಸ್ಥಾನವಿಲ್ಲದೆ ಯಾವಾಗಲೂ ಚಲಿಸುತ್ತಲೇ ಇರುವ ಕಾರಣ ಶಾಸ್ತ್ರೋಕ್ತ ಕರ್ಮಾನುಷ್ಠಾನಗಳಿಗೆಲ್ಲ ಅದು ವಿಹಿತವಾದುದಲ್ಲವೆಂಬ ಶಾಸ್ತ್ರಸಿದ್ಧಾಂತಕ್ಕೆ ಅದರಿಂದ ಪುಷ್ಟಿಯೇ ಉಂಟಾಗುವದಲ್ಲದೆ ಬಾಧಕವೇ ನೂ ಇರುವುದಿಲ್ಲ. 'ಸೂರ್ಯನ ಪ್ರತ್ಯಕ್ಷತೋರುವ ಉತ್ತರ-ದಕ್ಷಿಣಗತಿಯನ್ನ ವಲಂಬಿಸಿಯೇ ಅಯನವ್ಯವಹಾರವು ರೂಢವಾಗಿತ್ತೆ'ಂಬುದು ಇವರ ಮುಂದಿ ನ ಮಾತು. ಆದರೆ ಅದರಂತೆಯೇ ವ್ಯವಹಾರವಿದ್ದಿಲ್ಲವೆಂಬುದು " **ಸೌಮ್ಯಾ ಯನಂ ಮಾಸಷಟ್ಕಂ ಮೃಗಾದ್ಯಂ ಭಾನುಭುಕ್ತಿತಃ।** ' " **ಮಕರಾದಿ ಮಾಸ ಷಟ್ಕಮುದಗಯನಂ ಕರ್ಕಟಾದಿಕಂ ಯಾಮ್ಯಂ**'' ಈ ಮೊದಲಾದ ನಾರದ, ವೃದ್ಧವಸಿಷ್ಠಾದಿ ಅನೇಕಮಹರ್ಷಿಗಳ ವಚನಗಳಿಂದಲೇ ಸಿದ್ಧವಾಗುವದಲ್ಲ ದೆ ಇವರು ವ್ಯವಹರಿಸುವ ಸಾಯನ ಅಯನವು ದಿನಮಾನಸಾಧನಾದಿ ವಿಶೇ ಷಕ್ರಿಯೆಗಳ ಬಗ್ಗೆ ಮಾತ್ರ ಹೇಳಿದ್ದೆಂದು ಇವರೇ (ಪುಟ ೩೩ ರಲ್ಲಿ) ಕಾಣಿಸಿರು ವ " **ಘರ್ಮವೃದ್ಧಿರಪಾಂ ಪ್ರಸ್ಥಃ....** " ಇತ್ಯಾದಿ ಶ್ಲೋಕದಿಂದಲೂ ಸ್ಪಷ್ಟವಾ ಗಿರುತ್ತದೆ. ಮೇಲಿನ ವೃದ್ಧವಸಿಷ್ಠಾದಿ ವಚನಗಳಲ್ಲಿ ಹೇಳಿರುವ ಮಕರಾದಿ

ರಾಶಿಗಳೆಂದರೆ ಸಾಯನರಾಶಿಗಳೆಂದು ವಿಕಲ್ಪಿಸಲಿಕ್ಕೂ ಕೂಡ ಇವರಿಗೆ ಎಡೆ ಯಿರುವದಿಲ್ಲ. ಯಾಕಂದರೆ— ಅದೇ ವಚನಗಳಲ್ಲಿ ಚೈತ್ರಾದಿ ಮಾಸಗಳಿಗೆ ಲಕ್ಷಣವಾಗಿಯೂ, ಅಧಿಕ - ಕ್ಷಯಮಾಸಗಳ ವಿವೇಚನೆಗಾಗಿಯೂ ಹೇಳಿ ರುವ ಸೂರ್ಯಭೋಗ್ಯವಾದ ರಾಶಿಗಳೆಲ್ಲ ನಿರಯನಗಳೇ ಆಗಿರುವುವಲ್ಲದೆ, ಅವುಗಳಿಗೆ ಸಾಯನತ್ವವನ್ನು ಕಲ್ಪಿಸಿಕೊಂಡರೆ ಇವರ ಪಂಚಾಂಗಕ್ಕೂ ಸಹ ವಿರೋಧವಾಗುವದು. ಆದುದರಿಂದ ಆರ್ಷಸಂಪ್ರದಾಯದಲ್ಲಿ ಸೂರ್ಯನ ನಿರಯನ ಮಕರ-ಕರ್ಕಟಸಂಕ್ರಾಂತಿಗಳನ್ನವಲಂಬಿಸಿಯೇ ಕರ್ಮಾರ್ಹವಾದ ಅಯನವ್ಯವಹಾರವು ರೂಢವಾಗಿತ್ತೆಂಬುದು ನಿರ್ವಿವಾದವಾಗಿ ಮಹರ್ಷಿಗಳ ವಚನಗಳಿಂದಲೇ ಸಿದ್ಧವಾಗುತ್ತದೆ.

ಇನ್ನು ' ಉದಗಯನಾರಂಭದಲ್ಲಿಯೇ ವರ್ಷಾರಂಭವೂ, ಶಿಶಿರರ್ತುವಿನ ಆರಂಭವೂ ಆಗಿನಕಾಲದಲ್ಲಿ ಪರಿಗೃಹೀತವಾಗಿತ್ತೆ'ಂದು ಕಾಣಿಸಿದ್ದಾರೆ. ಇವರ ಈ ಕಲ್ಪನೆಯು ಸಹ ಸರಿಯಾದ್ದಲ್ಲ. ಯಾಕಂದರೆ—ಪುರಾತನ ಕಾಲದಿಂದಲೂ ಚಾಂದ್ರ, ಸೌರ, ಸಾವನ ಮೊದಲಾದ ನಾನಾ ರೀತಿಯ ಕಾಲ ಮಾನಗಳು ವಿಷಯ ಭೇದದಿಂದ ಪರಿಗೃಹೀತವಾಗಿದ್ದವೆಂಬುದು ವೇದವೇ ಮೊದಲಾದ ಸಕಲಶಾಸ್ತ್ರಗಳಿಂದಲೂ ಸಿದ್ಧವಾಗುತ್ತಿದ್ದು ಆಯಾ ಮಾನದ ವರ್ಷ ಗಳೆಲ್ಲವೂ ಉದಗಯನಾರಂಭದಲ್ಲಿಯೇ ಆರಂಭವಾಗುವದು ಎಂದಿಗೂ ಶಕ್ಯ ವಿಲ್ಲವೆಂಬುದು ಅವುಗಳ ಸ್ವರೂಪದಿಂದಲೇ ಸಿದ್ಧವಾಗುತ್ತದೆ. ಅವುಗಳ ಪೈಕಿ ಸೌರವರ್ಷವನ್ನು ಮಾತ್ರ ಲಕ್ಷಿಸಿ ಇವರು ಹಾಗೆ ಕಲ್ಪಿಸಿದ್ದಾರೆಂತ ಗ್ರಹಿಸಿದರೂ ಅದು ಸಹ ಸರಿಯಾಗುವದಿಲ್ಲ. ಯಾಕಂದರೆ— ಬ್ರಾಹ್ಮ, ಸೌರ, ವಾಸಿಷ್ಠಾದಿ ಸಕಲ ಆರ್ಷಸಿದ್ಧಾಂತಗಳಲ್ಲಿಯೂ ಮೇಷಾದಿಯಿಂದಲೇ ಸೌರವರ್ಷಾರಂಭವನ್ನು ಹೇಳಿದ್ದು— **"ಚೈತ್ರೇ ಮಾಸಿ ಜಗದ್ಬ್ರಹ್ಮಾ ಸಸರ್ಜ ಪ್ರಥಮೇಽಹನಿ"** ಎಂಬ ಬ್ರಹ್ಮಪುರಾಣದ ವಚನವೂ ಇದಕ್ಕೆ ಕೂಡುತ್ತದೆ. ಇದರಂತೆ ನಾರದ, ವೃದ್ಧವಸಿಷ್ಠಾದಿ ಆರ್ಷಸಂಹಿತಾ ಗ್ರಂಥಗಳಲ್ಲಿಯೂ ಸೌರವರ್ಷದ ಅಧಿಪತಿಯನ್ನು ಹೇಳುವಾಗ ( ನಿರಯನ ) ಮೇಷಸಂಕ್ರಾಂತಿಯ ವಾರಾಧಿಪತಿಯೇ ಆಯಾ ಸೌರವರ್ಷದಲ್ಲಿ ರಾಜನಾಗುವನೆಂದು ಹೇಳಿದ್ದು ಸ್ಮೃತಿ-ಪುರಾಣಗಳಲ್ಲಿಯೂ ಸಹ ಮೇಷಾದಿಯಿಂದಲೇ ಸೌರವರ್ಷಾರಂಭವನ್ನು ಅನೇಕ ಕಡೆಗಳಲ್ಲಿ ಹೇಳಿದೆ. ಹೀಗೆ ಜ್ಯೋತಿಷ, ಧರ್ಮಶಾಸ್ತ್ರ, ಪುರಾಣ ಮುಂತಾದ ಅನೇಕಆರ್ಷ ಗ್ರಂಥಗಳಲ್ಲಿಯೇ ಮೇಷಾದಿಯಿಂದ ರಾಶಿಗಣನೆಯೂ, ಸೌರವರ್ಷಾರಂಭವೂ ಪರಿಗೃಹೀತವಾಗಿರುವದು ಪ್ರಸಿದ್ಧವಾಗಿದ್ದು ಅದನ್ನೇ ಆರ್ಯಭಟ್ಟ, ಬ್ರಹ್ಮಗುಪ್ತ, ವರಾಹಮಿಹಿರ, ಭಾಸ್ಕರಾಚಾರ್ಯರೇ ಮೊದಲಾದ ಸಿದ್ಧಾಂತಿಗಳೆಲ್ಲರೂ ಅನುಸರಿಸಿದ್ದರೆಂಬುದು **" ರವಿರ್ಯಾವತಾ ಕಾಲೇನ ಪೂರ್ವಗತ್ಯಾ ಮೇಷಾದಿಭಚಕ್ರಂ ಭ್ರಮತಿ ತಾವತ್ಪ್ರಮಾಣಂ ರವಿವರ್ಷಂ ಪ್ರದಿಷ್ಟಂ "** ಇತ್ಯಾದಿ ಅನೇಕವಚನಗಳಿಂದ ಸ್ಪಷ್ಟವಾಗಿರುತ್ತದೆ. ಮತ್ತು ಇದು ಶಿಷ್ಟಾಚಾ

ರದಿಂದಲೂ, ಈವರೆಗಿನ ಅಶೇಷವಿಪ್ರಜ್ಜನರ – ವೃಕ್ಪಕ್ಷೀಯರ – ಅನುಸರಣಿಯಿಂದಲೂ ಸಹ ಸ್ಥಿರಪಟ್ಟಿರುವವರಿಂದ ಈ ವಿಷಯದಲ್ಲಿ ವಿವಾದಕ್ಕೆ ಆಸ್ಪದವೇ ಇರುವುದಿಲ್ಲ. ಹೀಗೆ ಮೇಷಮಾಸದ ಆದಿಯೇ ಅವಧಿಯಾಗಿರುವ ಸೌರವರ್ಷದ ಆರಂಭವು ಇವರು ಕಾಣಿಸಿರುವಂತೆ ಸೂರ್ಯನು ಧನಿಷ್ಠೆಯಲ್ಲಾಗಲಿ, ಶ್ರವಣದಲ್ಲಾಗಲಿ ಇದ್ದಾಗ ಆಗುವ ಉದಗಯನಾರಂಭದಲ್ಲಿ ಎಂದಿಗೂ ಸಂಭವಿಸತಕ್ಕದ್ದಲ್ಲ.

ಮತ್ತು ಋತುವಿನಲ್ಲಿಯೂ ಸಹ ಚಾಂದ್ರ, ಸೌರವೆಂಬ ಭೇದವಿದ್ದು ಆಯಾ ಮಾನದ ಎರಡು ಮಾಸಗಳಿಗೆ ಒಂದು ಋತುವಾಗುವುದರಿಂದ ಪ್ರತಿಯೊಂದು ಋತುವೂ ಅದರ ಮೊದಲನೆಯ ಮಾಸದ ಒಟ್ಟಿಗೆ ಆರಂಭವಾಗುತ್ತದೆಂಬುದು ಶಾಸ್ತ್ರದಿಂದಲೂ, ಲೋಕದಲ್ಲಿಯೂ ಪ್ರಸಿದ್ಧವೇ ಆಗಿರುತ್ತದೆ. ಆದರೆ ಯಾವುದೊಂದು ಚಾಂದ್ರಮಾಸವಾಗಲಿ, ಅಥವಾ ದೃಕ್ಪಕ್ಷೀಯರು (ಇವರು) ಸಹ ನಿರ್ವಿವಾದವಾಗಿ ಕರ್ಮಾರ್ಹವೆಂದು ಪರಿಗ್ರಹಿಸಿರುವ (ನಿರಯನ)ಸೌರಮಾಸವಾಗಲಿ ಯಾವ ಮಾಸವೂ ಸಾಯನ ಉದಗಯನಾರಂಭದಲ್ಲಿಯೇ ನಿಯತವಾಗಿ ಆರಂಭಿಸುವದಿಲ್ಲವೆಂಬುದು ಇವರ ದೃಕ್ಪಂಚಾಂಗವನ್ನು ನೋಡಿದರೂ ಸಹ ತಿಳಿಯುತ್ತದೆ. ಹೀಗೆ ಮಾಸದ ಆರಂಭವೇ ಆಗದಿರುವಾಗ ಋತುವಿನ ಆರಂಭವಾದರೂ ಆಗುವುದು ಹೇಗೆ ? ಆದ ಕಾರಣ ಇವರು ಕಾಣಿಸಿದಂತೆ ಸಾಯನಉದಗಯನಾರಂಭದಲ್ಲಿ ನಿಯತವಾಗಿ ಕರ್ಮಾರ್ಹವಾದ ಚಾಂದ್ರ, ಸೌರ, ಸಾವನಾದಿ ಯಾವುದೊಂದು ಮಾನದ ವರ್ಷಾರಂಭವೂ, ಋತುವಿನ ಆರಂಭವೂ ಇವರು ಕಲ್ಪಿಸಿದ ಆಗಿನ ಕಾಲದಲ್ಲಿ ಸಹ ಪರಿಗೃಹೀತವಾಗಿಲ್ಲವೆಂದೇ ಸಿದ್ಧವಾಗುತ್ತದೆ.

ಮುಂದೆ 'ವೇದ ಮೊದಲಾದ ಪ್ರಾಚೀನಗ್ರಂಥಗಳಲ್ಲಿ ಕ್ರಾಂತಿವೃತ್ತವನ್ನು ವಿಷುವವೃತ್ತದಲ್ಲಿ ಅಥವಾ ಅಯನವೃತ್ತದಲ್ಲಿ ಉದಿಸುವ ನಕ್ಷತ್ರಹಿಡಿದು ೨೭ ವಿಭಾಗಮಾಡಿದ್ದು ಮಾತ್ರ ಕಂಡುಬರುತ್ತದೆ.' ಎಂದಿದ್ದಾರೆ. ಆದರೆ ತಾರಾತ್ಮಕವಾದ ದೃಶ್ಯನಕ್ಷತ್ರಗಳೆಲ್ಲವೂ ಕ್ರಾಂತಿವೃತ್ತದ ಮೇಲೆಯೇ ಇರತಕ್ಕವುಗಳಲ್ಲವೆಂಬುದನ್ನು ಹಿಂದೆಯೇ ಹೇಳಿರುವೆವಾದ್ದರಿಂದ ಅವನ್ನು ಹಿಡಿದು ಕ್ರಾಂತಿವೃತ್ತವನ್ನು ವಿಭಾಗಿಸುವುದೆಂಬ ಇವರ ಮಾತು ತೀರ ಅಸಂಗತವಾಗುತ್ತದೆ. ಇನ್ನು ಅದೃಶ್ಯವಾದ ವಿಭಾಗಾತ್ಮಕನಕ್ಷತ್ರವನ್ನು ಲಕ್ಷಿಸಿ ಇವರು ಹಾಗೆ ಹೇಳಿದ್ದೆಂದು ಗ್ರಹಿಸುವುದಾದರೆ ಅದು ಸಹ ಇವರ ಕಲ್ಪನೆಗೆ ಸರಿಯಾಗುವದಿಲ್ಲ. ಹೇಗೆಂದರೆ:— ಆರಂಭದಲ್ಲಿ ಯಾವ ಸ್ಥಾನವನ್ನು ಹಿಡಿದು ೨೭ (ನಕ್ಷತ್ರಗಳ) ವಿಭಾಗಮಾಡಿರುತ್ತದೆಯೋ ಆ ಸ್ಥಾನವು ಮೊದಲನೆಯ ನಕ್ಷತ್ರ (ವಿಭಾಗ) ದ ಆರಂಭ–ಅಂದರೆ–ಆದಿಸ್ಥಾನವಾಗಿರಬೇಕಾದ್ದು ಸಹಜವಾಗಿರುತ್ತದೆ. ಇದರಂತೆ ಸಾಯನ ಉದಗಯನಾರಂಭವು ಅಥವಾ ವಿಷುವಾರಂಭವು ಕ್ರಾಂತಿವೃತ್ತದ ಯಾವ ಬಿಂದುವಿನಲ್ಲಿ ಸೂರ್ಯನು ಬಂದಾಗ ಘಟಿಸುವುದೋ ಆ

ಬಿಂದುವು ಇವರ ಕಲ್ಪನೆಯಂತೆ ಯಾವಾಗಲೂ ಮೊದಲನೆಯ ನಕ್ಷತ್ರ(ವಿಭಾಗ)ದ ಆದಿ ಬಿಂದುವೇ ಆಗಿರಬೇಕಾಗುತ್ತದೆ. ಹೀಗಿರುವಾಗ ಇವರು ಅದೇ ೨೬ ನೇ ಪುಟದ ೭ ನೇ ಪಂಕ್ತಿಯಲ್ಲಿ ಧನಿಷ್ಠಾಂತ್ಯ, ಧನಿಷ್ಠಾರ್ಧ, ಧನಿಷ್ಠಾದಿ, ಶ್ರವಣಗಳೆಂದು ಬೇರೆ ಬೇರೆ ನಕ್ಷತ್ರ – ಭಾಗಗಳಲ್ಲಿ ಉತ್ತರಾಯಣಾರಂಭ ಹೇಳಿದ್ದು, ಇವರ ಆ ಕಲ್ಪನೆಗೆ ಈ ಕಲ್ಪನೆಯು ಎಂದಿಗೂ ಸರಿಹೊಂದುವದಿಲ್ಲ. ಮತ್ತು ತಾರಾತ್ಮಕವಾದ ದೃಶ್ಯನಕ್ಷತ್ರಗಳೆಲ್ಲವೂ ಆಯಾ ನಕ್ಷತ್ರವಿಭಾಗದ ಆರಂಭಸ್ಥಾನದಲ್ಲಿಯೇ ಇರತಕ್ಕವುಗಳಲ್ಲವೆಂಬುದನ್ನು ಸಹ ವಾಚಕರು ಗಮನಿಸತಕ್ಕದ್ದಾಗಿದೆ. ಈ ಮುಂತಾದ ಕಾರಣಗಳಿಂದ ಸ್ಥಿರವಾದ ೨೭ ನಕ್ಷತ್ರ ವಿಭಾಗಗಳು ಮುಂಚಿನಿಂದಲೂ ಸ್ವತಂತ್ರವಾಗಿಯೇ ಇದ್ದವೆಂದೂ, ಇವರು ಕಲ್ಪಿಸಿಕೊಂಡಿರುವಂತೆ ಆಯಾ ಕಾಲಕ್ಕೆ ಸರಿಯಾಗಿ ಬೇರೆ ಬೇರೆ ಸ್ಥಾನಗಳನ್ನು ಹಿಡಿದು ವಿಭಾಗಿಸಲ್ಪಟ್ಟವುಗಳಲ್ಲವೆಂದೂ ಸಿದ್ಧವಾಗುತ್ತದೆ.

ಇನ್ನು (ಅದೇ ವೇದಾದಿ) ಪ್ರಾಚೀನ ಗ್ರಂಥಗಳಲ್ಲಿ "ಸಾಯನ-ನಿರಯನ ಕ್ರಮದಿಂದಾಗಲಿ, ಮೇಷಾದಿ ರಾಶಿಕ್ರಮದಿಂದಾಗಲಿ ವಿಭಾಗಿಸಿದ್ದೆಲ್ಲಿಯೂ ತೋರುವದಿಲ್ಲ"ವೆಂದು ಬರೆದಿದ್ದಾರೆ. ಇಲ್ಲಿ ಸಾಯನ-ನಿರಯನವೆರಡೂ ಅಲ್ಲದ ಇನ್ನೊಂದು ಕ್ರಮವು ಯಾವುದೆಂದು ಇವರನ್ನೇ ಕೇಳಬೇಕು. ಇವರು ಬರೆದಿರುವಂತೆ ನಕ್ಷತ್ರ ಹಿಡಿದು ವಿಭಾಗಿಸುವ ಕ್ರಮವಂತೂ ನಿರಯನ ಕ್ರಮವೆಂದೇ ಪ್ರಸಿದ್ಧವಾಗಿರುತ್ತದೆ. ಮತ್ತು ಮೇಷಾದಿ ರಾಶಿವಿಭಾಗವಾದರೂ ಬ್ರಹ್ಮ, ಶಿವ, ಸೂರ್ಯ, ಬೃಹಸ್ಪತಿ, ಭೃಗು, ನಾರದ, ಕಶ್ಯಪ, ಅತ್ರಿ, ಭರದ್ವಾಜ, ವಸಿಷ್ಠ, ಪರಾಶರ, ವ್ಯಾಸ, ಜೈಮಿನ್ಯಾದಿ ಮಹರ್ಷಿಗಳೂ, ದೇವತಾಪುರುಷರೂ ಉಪದೇಶಿಸಿರುವ ಆರ್ಷ ಜ್ಯೋತಿಃಶಾಸ್ತ್ರದ ಸಿದ್ಧಾಂತ, ಸಂಹಿತೆ, ಹೋರೆಗಳೆಂಬ ಎಲ್ಲ ವಿಭಾಗಗಳಲ್ಲಿಯೂ, ಸ್ಮೃತಿ-ಪುರಾಣಾದಿಗಳಲ್ಲಿಯೂ ಸಹ ಪ್ರಸಿದ್ಧವಾಗಿರುತ್ತದೆ. ಹೀಗಿರುವಾಗ ಇವೊಂದೂ ಪ್ರಾಚೀನ ಗ್ರಂಥವಲ್ಲವೆಂದು ಇವರ ಕಲ್ಪನೆಯಿರಬಹುದೇ ? ಹಾಗಾದರೆ ಯಾವ ಯಾವ ಗ್ರಂಥವನ್ನು ಇವರು ಪ್ರಾಚೀನವೆಂದು ಕಲ್ಪಿಸಿರುತ್ತಾರೆಂದು ತಿಳಿಯುವ ಬಗ್ಗೆ ಪ್ರತ್ಯೇಕವಾಗಿ ಅವೆಲ್ಲವುಗಳ ಹೆಸರುಗಳನ್ನಾದರೂ ಕಾಣಿಸಬೇಕಾಗಿತ್ತು. ಯಾವ ಗ್ರಂಥದಲ್ಲಿ ರಾಶಿವಿಭಾಗದ ವಿಷಯವು ತೋರುವದಿಲ್ಲವೋ ಅವಷ್ಟು ಪ್ರಾಚೀನಗ್ರಂಥವೆಂದು ಇವರು ಕಲ್ಪಿಸುವುದಾದರೆ ರಾಶಿವಿಭಾಗದ ವಿಷಯವನ್ನು ಹೇಳದಿರುವ ಈಗಿನ ಕಾಲದ ಕಾದಂಬರಿಯಂತಹ ಹಲವು(Novel) ಗ್ರಂಥಗಳು ರಾಶಿವಿಭಾಗವನ್ನು ಸ್ಪಷ್ಟವಾಗಿ ಹೇಳಿರುವ ಸಿದ್ಧಾಂತಾದಿ ಆರ್ಷ ಗ್ರಂಥಗಳಿಗಿಂತಲೂ ಪುರಾತನವಾದವುಗಳೆಂದು ಇವರು ಕಲ್ಪಿಸಿದಂತಾಗುವುದು. ಆದರೆ ಇಂತಹ ಕಲ್ಪನೆಯು ಯಾರಿಗೂ ಸಮ್ಮತವಾಗತಕ್ಕದ್ದಲ್ಲ. ಯಾವುದೊಂದು ವಿಷಯವು ಯಾವುದಾದರೂ ಗ್ರಂಥದಲ್ಲಿ ಹೇಳಲ್ಪಟ್ಟಿಲ್ಲವೆಂತಾದರೆ ಆ ವಿಷಯವೇ ಆಗ ಇದ್ದಿಲ್ಲವೆಂತಾಗಲಿ, ಅದು ನವೀನವಾದ್ದೆಂತಾಗಲಿ, ಅಥವಾ ಆ ಗ್ರಂಥ

ಕರ್ತರಿಗೆ ಅದು ತಿಳಿದಿಲ್ಲವೆಂತಾಗಲಿ ಕಲ್ಪಿಸುವುದು ಸರಿಯಲ್ಲ. ಪ್ರಸಿದ್ಧವಾಗಿರುವ ಮನುಸ್ಮೃತಿಯೇ ಮೊದಲಾದ ಕೆಲವು ಸ್ಮೃತಿಗಳಲ್ಲಿ ಅಧಿಕಮಾಸವನ್ನು ಹೇಳಿದ್ದು ತೋರುವದಿಲ್ಲವೆಂತಾದರೆ ಹಿಂದಿನ ಕಾಲದಲ್ಲಿ ಅಧಿಕಮಾಸವೆಂಬುದೇ ಇದ್ದಿಲ್ಲವೆಂತಾಗಲಿ, ಅದು ಅವೈದಿಕವಾದ ನವೀನ ಕಲ್ಪನೆಯೆಂತಾಗಲಿ ಕಲ್ಪಿಸುವದು ಸರಿಯಾದೀತೇ ? ಸಾರಾಂಶ:— ಯಾವ ವಿಷಯವನ್ನಾದರೂ ವಿವಕ್ಷೆಯಿಲ್ಲದೆ ಯಾರೂ ಹೇಳುವುದಿಲ್ಲ. ಆದುದರಿಂದ ಒಂದೊಮ್ಮೆ ಇವರು ಹೇಳುವಂತೆ ವೇದಾದಿ ಗ್ರಂಥಗಳಲ್ಲಿ ರಾಶಿವಿಭಾಗವನ್ನು ಕುರಿತು ಹೇಳಿದ್ದು ತೋರುವದಿಲ್ಲವೆಂತಾದರೂ ಅಷ್ಟರಿಂದ ಹಿಂದಿನ ಕಾಲದಲ್ಲಿ ರಾಶಿವಿಭಾಗದ ಕ್ರಮವೇ ಇದ್ದಿಲ್ಲವೆಂತಾಗಲಿ, ಅದು ಅವೈದಿಕಪದ್ಧತಿಯೆಂತಾಗಲಿ ಸಿದ್ಧವಾಗುವುದಿಲ್ಲ.

ಇನ್ನು ಇವರು ಹೆಸರು ಕಾಣಿಸಿರುವ ವೇದ ಮೊದಲಾದವುಗಳಲ್ಲಿ ರಾಶಿವಿಭಾಗದ ಕ್ರಮವು ತೋರುವುದೋ ಇಲ್ಲವೋ ಎಂಬುದನ್ನು ನಿರ್ಣಯಿಸಲಿಕ್ಕೆ ಅವೆಲ್ಲವನ್ನೂ ಸಂಪೂರ್ಣವಾಗಿ ಹುಡುಕಬೇಕಾಗಿರುವದು. ಆ ಪೈಕಿ ಅನಂತವಾದ ವೇದರಾಶಿಯನ್ನು ಸಮಗ್ರವಾಗಿ ಶೋಧಿಸಲಿಕ್ಕೆ ಮನುಷ್ಯಮಾತ್ರರಿಗೆ ಎಂದಿಗೂ ಶಕ್ಯವಿಲ್ಲ. ಬಹು ಪುರಾತನಕಾಲದಿಂದಲೂ ರಾಶಿವಿಭಾಗದ ಕ್ರಮವು ರೂಢವಾಗಿತ್ತೆಂದು ಸಿದ್ಧಮಾಡಲಿಕ್ಕೆ ಮಹಾಭಾರತದಂತಹ ವಿಸ್ತಾರವಾದ ಗ್ರಂಥವನ್ನು ಶೋಧಿಸುವಷ್ಟು ದೀರ್ಘಪ್ರಯತ್ನವನ್ನು ಸಹ ಮಾಡಬೇಕಾಗಿಲ್ಲ. ಯಾಕೆಂದರೆ— ಭಾರತದ ಕರ್ತರಾದ **ವೇದವ್ಯಾಸರಿಗೆ** ರಾಶಿವಿಭಾಗದ ವಿಷಯವು ಚನ್ನಾಗಿ ತಿಳಿದಿತ್ತೆಂದು ಅವರು ರಚಿಸಿರುವ—'**ಮಿಥುನಾತ್ಕರ್ಕಸಂಕ್ರಾಂತಿರ್ಯದಿ ಸ್ಯಾದಂಶುಮಾಲಿನಃ।**' ಇತ್ಯಾದಿ ಭವಿಷ್ಯೋತ್ತರ,ದೇವೀಪುರಾಣ, ಬ್ರಹ್ಮಪುರಾಣಾದಿ ಅನೇಕ ವಚನಗಳಿಂದಲೂ, **ಶ್ರೀಭಾಗವತದ** ಜ್ಯೋತಿಶ್ಚಕ್ರನಿರೂಪಣೆಯಿಂದಲೂ, ಮಾಧವೀಯದ ವ್ಯಾಖ್ಯಾನದಲ್ಲಿ ಉದಾಹರಿಸಿರುವ –'**ಕುಂಭಾಜಾಳಿಗತೇ ರವೌ ಶುಭಕರೀ**' ಇತ್ಯಾದಿ ವಚನದಂತೆ ಬೇರೆ ಬೇರೆ ಗ್ರಂಥಗಳಲ್ಲಿಯೂ ಸಹ ಉದಾಹರಿಸಿರುವ ಅನೇಕ ಬಾದರಾಯಣವಚನಗಳಿಂದಲೂ ಸಿದ್ಧವಾಗುವದಲ್ಲದೆ. ಆ ಕಾಲದಲ್ಲಿ ರಾಶಿವಿಭಾಗವು ಅತ್ಯಂತಪ್ರಸಿದ್ಧವಾಗಿತ್ತೆಂದು ವ್ಯಾಸಶಿಷ್ಯರಾದ **ಜೈಮಿನಿಗಳು** ರಚಿಸಿರುವ— '**ಸರ್ವತ್ರ ಸವರ್ಣಾ ಭಾವಾ ರಾಶಯಶ್ಚ**' '**ಹೋರಾದಯಃ ಸಿದ್ಧಾಃ**' ಇತ್ಯಾದಿ ಜ್ಯೋತಿಷಸೂತ್ರಗಳಿಂದಲೂ ಸ್ಪಷ್ಟವಾಗುತ್ತದೆ. ಮತ್ತು ವ್ಯಾಸರ ಪೂರ್ವಪುರುಷರಾದ ಪರಾಶರ, ವಸಿಷ್ಠರೇ ಮೊದಲಾದ ಮಹರ್ಷಿಗಳು ತಮ್ಮ ತಮ್ಮ ತ್ರಿಸ್ಕಂಧ ಜ್ಯೋತಿಷ ಗ್ರಂಥಗಳಲ್ಲೆಲ್ಲ ರಾಶಿವಿಭಾಗವನ್ನು ಸ್ಪಷ್ಟವಾಗಿ ಹೇಳಿರುವುದರಿಂದ ಅದು ಬಹು ಪುರಾತನಕಾಲದಲ್ಲಿಯೇ ಪ್ರಚಾರದಲ್ಲಿತ್ತೆಂದು ಸಿದ್ಧವಾಗುತ್ತದೆ. ಮಹಾಭಾರತಕ್ಕಿಂತ ಅತಿಪ್ರಾಚೀನಗ್ರಂಥವಾದ **ಶ್ರೀಮದ್ರಾಮಾಯಣದಲ್ಲಿಯೇ** ಬಾಲಕಾಂಡದ ೧೮ ನೇ ಸರ್ಗದಲ್ಲಿ ರಾಮಾದಿಗಳ

ಅವತಾರಕಾಲವನ್ನು ಹೇಳುವಾಗ ಶ್ರೀರಾಮನು ಕರ್ಕಟಲಗ್ನದಲ್ಲಿಯೂ, ಭರತನು ಮೀನಲಗ್ನದಲ್ಲಿಯೂ, ಲಕ್ಷ್ಮಣ–ಶತ್ರುಘ್ನರು ಮರುದಿನ ಪುನಃ ಕರ್ಕಟಲಗ್ನದಲ್ಲಿಯೂ ಅವತರಿಸಿದರೆಂದು ವಾಲ್ಮೀಕಿಮಹರ್ಷಿಗಳು ಸ್ಪಷ್ಟವಾಗಿ ಹೇಳಿರುವುದರಿಂದ ಈ ರಾಶಿವಿಭಾಗಪದ್ಧತಿಯು ಆ ಕಾಲದಲ್ಲಿಯೂ ಪ್ರಸಿದ್ಧಿಯಲ್ಲಿ ಇದ್ದಿತ್ತೆಂದು ಸಿದ್ಧವಾಗುತ್ತದೆ. ಅಧ್ಯಾತ್ಮರಾಮಾಯಣದಲ್ಲಿಯೂ ಸಹ ರಾಮಾವತಾರದ ಕಾಲವನ್ನು ಇದೇ ಪ್ರಕಾರ ಹೇಳಿದ್ದು ಅದರಿಂದಲೂ ಕೂಡ ವ್ಯಾಸರಿಗೆ ರಾಶಿವಿಭಾಗವು ತಿಳಿದಿತ್ತೆಂದು ಸ್ಪಷ್ಟವಾಗುತ್ತದೆ.

ಇನ್ನು ಗರ್ಗರು ರಚಿಸಿರುವ ಗ್ರಂಥವೆಲ್ಲ ಸಾಕಲ್ಯವಾಗಿ ಉಪಲಬ್ಧವಿಲ್ಲವಾದರೂ ಈಗ ಸಿಗುವಷ್ಟು ಅಂಶಗಳಿಂದಲೇ ಗರ್ಗರಿಗೂ ರಾಶಿವಿಭಾಗವು ತಿಳಿದಿತ್ತೆಂದು ಸಿದ್ಧವಾಗುತ್ತದೆ. ಹೇಗೆಂದರೆ:— ಕಾಲಮಾಧವದಲ್ಲಿ— **'ಯದಾಸ್ತಮಯವೇಲಾಯಾಂ ಮಕರಂ ಯಾತಿ ಭಾಸ್ಕರಃ'** ಈ ಮುಂತಾದ ವೃದ್ಧಗಾರ್ಗ್ಯವಚನವನ್ನು ಉದಾಹರಿಸಿರುವರಲ್ಲದೆ ಇಂತಹ ಅನೇಕ ವಚನಗಳು ಬೇರೆ ಬೇರೆ ಗ್ರಂಥಗಳಲ್ಲಿಯೂ ಉದಾಹರಿಸಲ್ಪಟ್ಟಿವೆ. ಇವರ 'ಅಯನಸಮರ್ಥನೆ'ಯಲ್ಲಿಯೇ (ಪುಟ ೨೨ ರಲ್ಲಿ) ಕಾಣಿಸಿರುವ **'ಮಾಸಸ್ತ್ರಿಂಶದ್ಭಾಗೋ ದಿನೋಽರ್ಕಜಃ'** ಎಂಬ ಗರ್ಗವಚನದಲ್ಲಿ ೩೦ ಭಾಗೆಗಳಿಂದ ಕೂಡಿರುವ ಸೌರಮಾಸವನ್ನು ಹೇಳಿರುವುದರಿಂದ ಆಯಾ ಸೌರಮಾಸವನ್ನು ಗುರುತಿಸತಕ್ಕ ರಾಶಿವಿಭಾಗವಾದರೂ ಆಗ ಇದ್ದಿರಬೇಕೆಂದು ಅದರಿಂದಲೇ ವ್ಯಕ್ತವಾಗುತ್ತದೆ. ಮತ್ತು ಗರ್ಗರಿಂದಲೇ ರಚಿತವಾದ **ಗರ್ಗಮನೋರಮಾ** ಎಂಬ ಗ್ರಂಥದಲ್ಲಿ **'ಭಕ್ತೇ ದ್ವಾದಶಭಿಶ್ಚೈವ ಭಾವಸಂಬಂಧಚಿಂತನಂ'** ಎಂಬಲ್ಲಿ ದ್ವಾದಶಭಾವಗಳ ವಿಚಾರವನ್ನೂ ಹೇಳಿದ್ದು ಭಾವವಿಚಾರಕ್ಕೆ ರಾಶಿವಿಭಾಗವು ಮೂಲವಾದುದರಿಂದ ಆಗ ದ್ವಾದಶ ರಾಶಿವಿಭಾಗಗಳೂ ಇದ್ದಿದ್ದವೆಂಬುದು ಸ್ಪಷ್ಟವಾಗುತ್ತದೆ. ವಿದ್ಯಾಮಾಧವೀಯದ ವಿವಾಹಾಧ್ಯಾಯದ ವ್ಯಾಖ್ಯಾನದಲ್ಲಿ ಚಂದ್ರನು ಚತುರ್ಥರಾಶಿಯಲ್ಲಿದ್ದರೆ ಮಧ್ಯಮವೆಂಬುದು ಗರ್ಗರ ಮತವೆಂದು ಸಪ್ತರ್ಷಿಗಳು ಹೇಳಿರುವ ವಚನವನ್ನು ಕಾಣಿಸಿದೆ. ವರಾಹಮಿಹಿರರು ಬೃಹತ್ಸಂಹಿತೆಯಲ್ಲಿ ಶಕುನಾಧ್ಯಾಯಗಳ ಆದಿಯಲ್ಲಿ ಗರ್ಗಾದಿಗಳ ವಚನಗಳಿಂದ ಸಂಗ್ರಹಿಸಿದ್ದೆಂದು ಹೇಳಿರುವ ಶಕುನ ಫಲಗಳಲ್ಲಿ ಲಗ್ನ ರಾಶಿವಶದಿಂದಲೂ ವಿಶೇಷವನ್ನು ಹೇಳಿರುತ್ತಾರೆ. ಈ ಮುಂತಾದ ಕಾರಣಗಳಿಂದ ಗರ್ಗರ ಕಾಲದಲ್ಲಿ ರಾಶಿವಿಭಾಗವು ಇದ್ದಿತ್ತೆಂದು ಸಿದ್ಧವಾಗುವುದಲ್ಲದೆ ಈ ವಿಚಾರಗಳಿಂದೆಲ್ಲ ಮೇಷಾದಿರಾಶಿವ್ಯವಹಾರವು ಆರ್ಷಪರಂಪರೆಯಿಂದ ರೂಢವಾಗಿ ಬಂದಿತ್ತೆಂಬುದು ಸಿದ್ಧಾಂತವಾಗುತ್ತದೆ.

ವೇದಾಂಗ (ಯಾಜುಷ) ಜ್ಯೋತಿಷದಲ್ಲಿಯೂ ಸಹ **"ನಿರೇಕಂ ದ್ವಾದಶಾಭ್ಯಸ್ತಂ, ಮಾಸಾ ದ್ವಾದಶ ಸೌರಾಃ ಸ್ಯುಃ"** ಇತ್ಯಾದಿ ವಚನಗಳಲ್ಲಿ ರಾಶಿವಿಭಾಗವು ಸೂಚಿತವಾಗಿರುವುದಲ್ಲದೆ **'ಯೇ ಬೃಹಸ್ಪತಿನಾ ಭುಕ್ತಾ**

**ಮೀನಾತ್ಪ್ರಭೃತಿ ರಾಶಯಃ** ' ಎಂಬ ವಚನದಿಂದ ರಾಶಿಗಳೂ, ಅವುಗಳ ಹೆಸರುಗಳೂ ಮುಂಚಿನಿಂದ ಪ್ರಸಿದ್ಧವಾಗಿದ್ದವೆಂದು ಸಿದ್ಧವಾಗುತ್ತದೆ. ಇನ್ನು ಸಾಕ್ಷಾತ್ತಾಗಿ ವೇದದಲ್ಲಿಯೇ '**ದ್ವಾದಶ ಪ್ರಧಯಶ್ಚಕ್ರಮೇಕಂ**।' ಈ ಮೊದಲಾದ ಮಂತ್ರಗಳಲ್ಲಿ ೧೨ ರಾಶಿಗಳೂ, ೩೬೦ ಭಾಗಗಳೂ ಸ್ಪಷ್ಟವಾಗಿ ಸೂಚಿಸಲ್ಪಟ್ಟವೆ. ಇದೂ ಅಲ್ಲದೆ– '**ತ್ರಯೋದಶ ಮಾಸಾಃ ಸಂವತ್ಸರಃ** । ' '**ಅಸ್ತಿ ತ್ರಯೋದಶೋ ಮಾಸ ಇತ್ಯಾಹುಃ**।' ಇತ್ಯಾದಿ ವಚನಗಳಿಂದ ಅಧಿಕಮಾಸವಿರುವ ೧೩ ತಿಂಗಳುಗಳ ವರ್ಷವನ್ನು ಪ್ರತ್ಯಕ್ಷಶ್ರುತಿಯೇ ಹೇಳಿದೆ. ಅಧಿಕಮಾಸವೆಂದರೆ ಸೂರ್ಯಸಂಕ್ರಾಂತಿಯಿಲ್ಲದ ಮಾಸವೆಂಬುದು ಸಹ ಪ್ರಸಿದ್ಧವೇ ಇದೆ. ಸೂರ್ಯಸಂಕ್ರಾಂತಿಯ ಕಲ್ಪನೆಯು ಇರಬೇಕಾದರೆ ರಾಶಿಚಕ್ರದಲ್ಲಿ (ಮೇಷಾದಿ) ೧೨ ವಿಭಾಗಗಳು ಯಾವ ರೀತಿಯಿಂದಾದರೂ ಇರಲೇ ಬೇಕು. ಮತ್ತು ಅಧಿಕಮಾಸವು ಸೌರ, ಚಾಂದ್ರ ಮಾಸಗಳ ಸಮನ್ವಯಕ್ಕಾಗಿ ಇರುವದರಿಂದ ಸೌರಮಾಸದ ಗಣನೆಯಿಲ್ಲದೆ ಅಧಿಕಮಾಸವು ಉಪಪನ್ನವಾಗುವದಿಲ್ಲ. ಸೌರಮಾಸವೆಂದರೆ– ಸೂರ್ಯನು ರಾಶಿಚಕ್ರದಲ್ಲಿ ೧ ರಾಶಿಯನ್ನು ಸಂಚರಿಸುವಷ್ಟು ಕಾಲವಾದ್ದರಿಂದ ಸೌರಮಾಸಗಳ ಗಣನೆಯಿದ್ದಾಗ ಸೌರಮಾಸಗಳನ್ನು ಪ್ರತ್ಯೇಕಿಸತಕ್ಕ ರಾಶಿವಿಭಾಗವಾದರೂ ರಾಶಿಚಕ್ರದಲ್ಲಿ ಇರಲೇ ಬೇಕೆಂಬುದು ಯುಕ್ತವಾಗಿರುತ್ತದೆ. ಇದರಿಂದ **ದ್ವಾದಶ ರಾಶಿಗಳನ್ನು ವಿಭಾಗಿಸುವ ಕ್ರಮವು ವೇದದಂತೆಯೇ ಅನಾದಿಸಿದ್ಧವಾದುದೆಂದು** ತಿಳಿಯುತ್ತದೆ. ಆದುದರಿಂದಲೇ ಸಾಕ್ಷಾತ್ ಭಗವಂತನೇ ಸೂರ್ಯಸಿದ್ಧಾಂತದಲ್ಲಿ "**ಪುನರ್ದ್ವಾದಶಧಾತ್ಮಾನಂ ವ್ಯಭಜದ್ರಾಶಿಸಂಜ್ಞಕಂ।, ವಿಭಾಗಂ ಕಲ್ಪಯಾಮಾಸ ಯಥಾಸ್ವಂ ವೇದದರ್ಶನಾತ್** ॥ " ಅಂದರೆ— ಬ್ರಹ್ಮನು ಸೃಷ್ಟಿಯ ಆದಿಯಲ್ಲಿ ವೇದಗಳಲ್ಲಿ ಹೇಳಿರುವಂತೆಯೇ ೧೨ ರಾಶಿಗಳನ್ನೂ, ಅವುಗಳ ಸ್ಥಾನವನ್ನೂ ನಿರ್ಮಿಸಿದನು ಎಂದು ಹೇಳಿರುವನು.

ಹೀಗಿರುವಾಗ ಇದೊಂದನ್ನೂ ವಿಚಾರಿಸದೆ ಇವರು ಹಿಂದಿನ ಕಾಲದಲ್ಲಿ ರಾಶಿಕ್ರಮದಿಂದ ವಿಭಾಗಿಸಿದ್ದೆಲ್ಲಿಯೂ ತೋರುವುದಿಲ್ಲವೆಂದೂ, ಸಾಯನ-ನಿರಯನವೆಂಬ ಯಾವ ಕ್ರಮವೂ ಇದ್ದಿಲ್ಲವೆಂದೂ, ವಿಷುವ ಅಥವಾ ಅಯನಬಿಂದುವಿನಿಂದ ೨೭ ನಕ್ಷತ್ರವಿಭಾಗಮಾಡಿದ್ದು ಮಾತ್ರ ಕಂಡುಬರುತ್ತದೆಂದೂ, ಉತ್ತರಾಯಣದ ಆರಂಭದಲ್ಲಿಯೇ ಸಂವತ್ಸರದ ಆರಂಭವೂ ಪರಿಗೃಹೀತವಾಗಿತ್ತೆಂದೂ ಹೀಗೆಲ್ಲ ಬರೆದಿರುವುದರಿಂದ ಶ್ರುತಿ, ಸ್ಮೃತಿ, ಸಿದ್ಧಾಂತಾದಿ ಶಾಸ್ತ್ರಗಳ ಮೇಲೂ, ದೇವರು, ಋಷಿಗಳು ಮೊದಲಾದ ಶಾಸ್ತ್ರಪ್ರವರ್ತಕರ ಮೇಲೂ ಈ ಪಂಡಿತರೆಂಬವರು ಎಂತಹ **ಘೋರ ಅತ್ಯಾಚಾರ** ಮಾಡಿದ್ದಾರೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಇಷ್ಟಾಗಿ ಇದರಿಂದ ಇವರ ಸಮರ್ಥನೆಯಾದರೂ ಆಗುವುದೋ ? ಆ ಕಾಲದಲ್ಲಿ ಇವರ ಮತದಂತೆ ಹಾಗಿದ್ದದರಿಂದ ಈ ಕಾಲದಲ್ಲಿ ಅದೇ ರೀತಿ ಇವರ [illegible]ಂಚಾಂಗವಾದರೂ ಇರುವದೇ ?

ಸ್ವಾರ್ಥವಾಗಿ ವೇದ-ಶಾಸ್ತ್ರಗಳಮೇಲೆ ವೃಥಾರೋಪಮಾಡಿದ ಮಹಾಪುಣ್ಯವ ನ್ನಷ್ಟು ಗಳಿಸಿದ್ದಾರೆ. ಇಷ್ಟೂ ಸಾಲದೆ ಮುಂದೆ 'ನಕ್ಷತ್ರಪದ್ಧತಿಯಿಂದಲೇ ವರ್ಷ, ಆಯನ, ಋತು ಮುಂತಾದ ಕಾಲನಿರ್ಣಯವನ್ನು ಕರ್ಮಾಚರಣೆಯ ಬಗ್ಗಾಗಿಯೇ ಹೇಳಿರುತ್ತದೆ'ಂದು ಬರೆದಿದ್ದಾರೆ. ನಕ್ಷತ್ರಗಳು ಸ್ಥಿರವಾಗಿರುವು ದರಿಂದ ನಕ್ಷತ್ರಪದ್ಧತಿಯೆಂಬುದು ನಿರಯನ ಕ್ರಮವೇ ಆಗಿರುತ್ತದೆ. ಅದರಂ ತೆ ಇವರು ತಮ್ಮ ಗ್ರಂಥದ ಪುಟ ೩೦ ರ ಕೆಳಗೆ ಕೊಟ್ಟಿರುವ ಟಿಪ್ಪಣಿಯಿಂದ ಲೂ, ಪುಟ ೩೬-೩೪ ರಲ್ಲಿ ಕಾಣಿಸಿರುವ ಆಕೃತಿ, ಮಾಹಿತಿಗಳಿಂದಲೂ ಸಹ ಸ್ಪಷ್ಟವಾಗುತ್ತದೆ. ಮತ್ತು ಅದು ಸಾಯನ ಕ್ರಮವೆಂದು ಇವರಾದರೂ ಹೇಳು ವುದಿಲ್ಲವಾದುದರಿಂದ ಇವರು ಕಲ್ಪಿಸಿಕೊಂಡಿರುವ ವೇದ, ವೇದಾಂಗಾದಿ ಕಾಲ ಗಳಲ್ಲಿಯೂ ಸಹ ನಿರಯನ ಕ್ರಮವೇ ಕರ್ಮಾಚರಣೆಯ ಬಗ್ಗೆ ಸ್ವೀಕೃತವಾಗಿ ತ್ತೆಂದು ಇವರ ಹೇಳಿಕೆಯಿಂದಲೇ ಸಿದ್ಧವಾಗುವದು. ಇದು ಸಾಯನ ಅಯನ ವೇ ಕರ್ಮಯೋಗ್ಯವಾದ್ದೆನ್ನುವ ಇವರ 'ಸಮರ್ಥನೆ'ಗೆ ತೀರ ಬಾಧಕವಾಗಿರು ವುದಲ್ಲದೆ ನಿರಯನಕ್ರಮದಿಂದ ಎಣಿಸತಕ್ಕ ಅಯನವೇ ಕರ್ಮಾರ್ಹವೆಂಬ ಶಾಸ್ತ್ರಸಿದ್ಧಾಂತಕ್ಕೆ ಸಾಧಕವೇ ಆಗಿದೆ. ಹೀಗಿರುವಲ್ಲಿ ತಮ್ಮ ಮಾತಿನ ಸಾಧಕ ಬಾಧಕಗಳ ವಿಚಾರವು ಸಹ ಇಲ್ಲದೆ ಮನಬಂದಂತೆ ವಿಚಾರಗೆಟ್ಟು ಬರೆದಿರು ವುದರಿಂದ ಇವರ ಅವಿಚಾರವೇ ಸಿದ್ಧವಾಗಿದ್ದರೂ ಅದನ್ನೂ ಲಕ್ಷಿಸದೆ ಮುಂದೆ ಇದಕ್ಕೆ ತೀರ ವಿಪರೀತವಾಗಿ 'ಧರ್ಮಶಾಸ್ತ್ರಾಭಿಮಾನಿಗಳು ಕರ್ಕ-ಮಕರ ಸಂಕ್ರಾಂತಿಯಿಂದ ಅಯನಾರಂಭವನ್ನು ಹೇಳುವುದೇ ಅವಿಚಾರವೆಂದೂ, ಭಿತ್ತಿಯಿಲ್ಲದ ಚಿತ್ರರಚನೆಯಂತೆ ಅತಿಸಾಹಸಕೃತ್ಯವೆಂದೂ' ದೂಷಿಸಿದ್ದಾರೆ.

ಅಹಾ ! ಅವಿಚಾರವೇ ? ಶ್ರುತಿ-ಸ್ಮೃತಿ-ಪುರಾಣಾದಿಗಳಿಗೂ, ಶಿಷ್ಟಾಚಾರಕ್ಕೂ ಸಮ್ಮತವಾಗಿ ಕ್ರಾಂತಿವೃತ್ತದಲ್ಲಿ ಸೃಷ್ಟ್ಯಾದಿ ಪ್ರಳಯಾಂತ ವಾಗಿಯೂ ಸ್ಥಿರವಿರುವ ನಿರಯನ ಅಯನ ಸಂಕ್ರಾಂತಿಗಳಿಂದ ಕರ್ಮಾರ್ಹ ವಾದ ಅಯನಾರಂಭವನ್ನು ಹೇಳತಕ್ಕ ಸನಾತನ ವೈದಿಕಧರ್ಮಾನುಯಾಯಿ ಗಳು ಅವಿಚಾರಿಗಳೋ ? ಭಿತ್ತಿಯಿಲ್ಲದೆ ಚಿತ್ರರಚನೆಮಾಡುವ ಅತಿಸಾಹಸಿಗ ಳೋ ? ಅಥವಾ ಕ್ರಾಂತಿವೃತ್ತದಲ್ಲಿ ಸ್ಥಿರವಾದ ನೆಲೆಯೇನೂ ಇಲ್ಲದೆ ನಿರಂತ ರವಾಗಿ ಚಲಿಸುತ್ತಲೇ ಇರುವ ಮೂಲಕ ಯಾವಾಗಲೂ (ಕೇವಲ) ಅನಿತ್ಯವಾ ಗಿರುವ ತಾತ್ಕಾಲಿಕ, ಸಾಪೇಕ್ಷಿತ ಅಯನಸ್ಥಾನವೇ ಪ್ರತ್ಯಕ್ಷಸಿದ್ಧವೆಂದುಕೊಂ ಡು ಕರ್ಮಾರ್ಹವಾದ ಅಯನಾರಂಭವನ್ನಾದರೂ ಅಲ್ಲಿಂದಲೇ ಹಿಡಿಯಬೇ ಕೆಂದು ಶಾಸ್ತ್ರ-ಶಿಷ್ಟಾಚಾರಗಳಿಗೆಲ್ಲ ವಿರೋಧವಾಗಿ ಸ್ವಂತಕಲ್ಪನೆಗೂ ಸಹ ತಾಳೆಯಿಲ್ಲದೆ ವಿಸಂಗತವಾಗಿ ಬಡಬಡಿಸುವ ಇವರು ಅವಿಚಾರಿಗಳೋ ? ಯಾರೆಂಬುದನ್ನು ವಾಚಕರೇ ನಿರ್ಣಯಿಸಬೇಕು. ಅಲ್ಲದೆ ಕ್ರಾಂತಿವೃತ್ತದಲ್ಲಿ ಸ್ಥಿರವಾದ ನೆಲೆಯೇನೂ ಇಲ್ಲದ, ಕೇವಲ ಅಸ್ಥಿರವಾದ ಅನಿಶ್ಚಿತಸ್ಥಾನದಲ್ಲಿ ಕರ್ಮಾರ್ಹವಾದ ಅಯನಚಿತ್ರವನ್ನು ಇವರು ರಚಿಸಿರುವದರಿಂದ ಗೋಡೆಯಿ ಲ್ಲದೆ ಚಿತ್ರಬರೆಯುವಂಥ ಇವರ ಅತಿಸಾಹಸವೇ ವ್ಯಕ್ತವಾಗುತ್ತದೆ.

ತರುವಾಯ ವರಾಹಮಿಹಿರರು ಶೂನ್ಯಾಯನಾಂಶಕಾಲದಲ್ಲಿ ಜನ್ಮವೆತ್ತಿದ್ದರಿಂದೂ, ಅವರು ತಮ್ಮ ಕಾಲದಲ್ಲಿ ಪ್ರತ್ಯಕ್ಷವಾದ ಅಯನಾನುಭವವಂತೆ ಕರ್ಕಟ–ಮಕರ ಸಂಕ್ರಾಂತಿಗಳಿಂದ ಅಯನಾರಂಭವನ್ನು ಹೇಳಿದ್ದಂತಲೂ ವಾದಿಸಿದ್ದಾರೆ. ಆದರೆ ಇವರ ಈ ವಾದವು ಕೂಡ ವಿಸಂಗತವಾದುದೇ ಸರಿ. ಯಾಕಂದರೆ— ಅತಿಪುರಾತನವಾದ ಸಿದ್ಧಾಂತ, ಸಂಹಿತಾ, ಧರ್ಮಶಾಸ್ತ್ರಾದಿ ಆರ್ಷಗ್ರಂಥಗಳಲ್ಲಿಯೇ ನಿರಯನ ಕರ್ಕ-ಮಕರಸಂಕ್ರಾಂತಿಗಳನ್ನು ಹಿಡಿದು ಅಯನಾರಂಭವು ಹೇಳಲ್ಪಟ್ಟಿದ್ದು, ಆ ಪೈಕಿ ಕೆಲವು ವಚನಗಳನ್ನು ಈ ಹಿಂದೆಯೇ ತೋರಿಸಿರುತ್ತೇನೆ. ಮತ್ತು ವರಾಹಮಿಹಿರರೇ–"**ಉಕ್ತಾಭಾವೋ ವಿಕೃತಿಃ ಪ್ರತ್ಯಕ್ಷಪರೀಕ್ಷಣೈರ್ವ್ಯಕ್ತಿಃ।**" ಅಂದರೆ– ತಮ್ಮ ಕಾಲದಲ್ಲಿ ಕರ್ಕ–ಮಕರ ಸಂಕ್ರಾಂತಿಗಳನ್ನು ಬಿಟ್ಟು ಸಾಯನಅಯನಾರಂಭವು ಪ್ರತ್ಯಕ್ಷಪರೀಕ್ಷೆಯಿಂದ ವ್ಯಕ್ತವಾಗುತ್ತಿದ್ದರೂ ಅದು ವಿಕಾರ( ದೃಙ್ಮಂಡಲದ ದಿಗ್ವ್ಯತ್ಯಾಸ) ಮೂಲಕವಾದ್ದರಿಂದ ಧರ್ಮಕರ್ಮಾದಿಗಳಿಗೆ ಯುಕ್ತವಲ್ಲವೆಂಬ ಅರ್ಥವನ್ನು ವ್ಯಕ್ತಪಡಿಸಿರುತ್ತಾರೆ. ಇದರಿಂದ ಅವರ ಕಾಲದಲ್ಲಿ ಅಯನಾಂಶವಿದ್ದಿತ್ತೆಂಬುದು ಸ್ಪಷ್ಟವಾಗುವುದರಿಂದ ಅವರು ಶೂನ್ಯಾಯನಾಂಶಕಾಲದಲ್ಲಿ ಜನ್ಮವೆತ್ತಿದವರಲ್ಲವೆಂದು ಸಿದ್ಧವಾಗುತ್ತದೆ. ಇದರಂತೆಯೇ ಇವರ ದೃಕ್ಪಕ್ಷದ ಪಂಡಿತರು ಸಹ ವರಾಹಮಿಹಿರರು ಶೂನ್ಯಾಯನಾಂಶಕಾಲದವರಲ್ಲವೆಂದು ಸಿದ್ಧಮಾಡಿರುತ್ತಾರಾದರೂ ಇವರಿಗೆ ಮಾತ್ರ ಅದು ತಿಳಿದಿಲ್ಲವೆಂದು ತೋರುತ್ತದೆ.

ಪುಟ ೨೭ ರಲ್ಲಿ ವರಾಹಮಿಹಿರರ–'**ಆಶ್ಲೇಷಾರ್ಧಾದ್ದಕ್ಷಿಣಂ....**' ಎಂಬ ವಚನವನ್ನು ಕಾಣಿಸಿ ಆಯಾ ಕಾಲದಲ್ಲಿ ವೇಧದಿಂದ ಅಯನವನ್ನು ತಿದ್ದಬೇಕೆಂದು ಅವರು ತಿಳಿಸಿರುವುದಾಗಿ ಬರೆದಿದ್ದಾರೆ. ಇದಾದರೂ ಇವರ ವಿಪರೀತಕಲ್ಪನೆಯೇ ಆಗಿದೆ. ಹೇಗೆಂದರೆ— ವರಾಹಮಿಹಿರರು ಆಗಾಗ ಅಯನವನ್ನು ತಿದ್ದಿಕೊಳ್ಳಬೇಕೆಂದು ಎಲ್ಲಿಯೂ ಹೇಳಿಲ್ಲ. ಅಷ್ಟು ಮಾತ್ರವಲ್ಲ; "**ಸಾಂಪ್ರತಮಯನಂ ಸವಿತುಃ ಕರ್ಕಟಕಾದ್ಯಂ ಮೃಗಾದಿತಶ್ಚಾನ್ಯತ್। ಉಕ್ತಾಭಾವೋ ವಿಕೃತಿಃ ಪ್ರತ್ಯಕ್ಷಪರೀಕ್ಷಣೈರ್ವ್ಯಕ್ತಿಃ॥**" ಅಂದರೆ— ಕರ್ಕಟ ಮಕರಸಂಕ್ರಾಂತಿಗಳಿಂದಾಗತಕ್ಕ ಅಯನಗಳು ಕ್ರಾಂತಿವೃತ್ತದಲ್ಲಿ(ಸಾಂಪ್ರತ) ಸ್ವಾಭಾವಿಕವಾದವುಗಳೆಂದೂ, ಅದರ ಹೊರತು ಬೇರೆ ಕಾಲಗಳಲ್ಲಿ( ಅಯನಗತಿವಶದಿಂದ ) ತೋರತಕ್ಕ ಸಾಯನಅಯನವು ಪ್ರತ್ಯಕ್ಷ(ವೇಧ ಮೂಲಕವಾದ ) ಪರೀಕ್ಷೆಯಲ್ಲಿ ತೋರುವುದಾದರೂ ಅದು ವಿಕಾರವೇ ಆಗಿರುತ್ತದೆಂತಲೂ ನಿರ್ಣಯಿಸಿ ಮುಂದೆ ಅಂಥ ವಿಕಾರಗಳಿಗೆ ಪ್ರತ್ಯೇಕವಾಗಿ ಫಲಗಳನ್ನು ಕೂಡ ಹೇಳಿದ್ದಾರೆ. ಆದುದರಿಂದ "**ಆಶ್ಲೇಷಾರ್ಧಾತ್**" ಎಂಬ ವಚನದಿಂದ ಪೂರ್ವಶಾಸ್ತ್ರಗಳಲ್ಲಿ ಹೇಳಿರುವ ಸಾಯನಅಯನಗಳಾದರೂ ಅದರಂತೆ ವಿಕಾರಗಳೇ ಆಗಿರುವುವಲ್ಲದೆ ಅವು ಕರ್ಮಾರ್ಹವಲ್ಲವೆಂದೇ ಅವರ ತಾತ್ಪರ್ಯವಿರುವುದೆಂಬುದು ಸ್ಪಷ್ಟವಾಗುತ್ತದೆ.

ಹೀಗೆ ಶಾಸ್ತ್ರಗಳಲ್ಲಿ ಅನೇಕ ಕಡೆ ಬೇರೆ ಬೇರೆ ಸಂದರ್ಭಗಳಲ್ಲಿ ಕರ್ಮಾರ್ಹವಾದ ದಕ್ಷಿಣೋತ್ತರಾಯಣಗಳನ್ನೂ, ದೃಙ್ಮಂಡಲದಲ್ಲಿ ತೋರುವ ಅಯನದಿನವನ್ನೂ ಸಹ ಪ್ರಸಂಗಾನುಸಾರವಾಗಿ ಹೇಳಿದ್ದಿರುತ್ತದೆ. ಆ ಪೈಕಿ ಕರ್ಮಾರ್ಹವಾದ ದಕ್ಷಿಣೋತ್ತರಾಯಣಗಳನ್ನು ನಿರ್ಣಯಿಸಿ “ ಕರ್ಕಟ-ಮಕರಸಂಕ್ರಾಂತಿಗಳೆಂದು” ಸ್ಪಷ್ಟವಾಗಿ ಹೇಳಿರುವ ವಚನಗಳಿಗೆಲ್ಲ ಇವರು ಸಾಯನವಿಷಯವೆಂದಾಗಲಿ, ಅಥವಾ ಶೂನ್ಯಾಯನಾಂಶಕಾಲದ ಸ್ಥಿತಿಯೆಂದಾಗಲಿ ಅಪಾರ್ಥವನ್ನು ಕಲ್ಪಿಸಿಕೊಂಡು ಛಾಯಾ, ದಿನಮಾನಾದಿಗಳನ್ನು ಲಕ್ಷಿಸಿ ಹೇಳಿರತಕ್ಕ ವಚನಗಳೆಲ್ಲ ಕರ್ಮಾಚರಣೆಗೆ ಯೋಗ್ಯವಾದ ದಕ್ಷಿಣೋತ್ತರಾ–ಯಣಕಾಲಗಳ ನಿರ್ಣಯಕ್ಕಾಗಿ ಹೇಳಲ್ಪಟ್ಟವುಗಳೆಂದು ಸಾರುತ್ತ ಪೂರ್ವಾಪರಸಂಬಂಧವಿಲ್ಲದ ವಿಪರೀತಾರ್ಥಗಳನ್ನು ಕಲ್ಪಿಸಿ ಹೇಳಿ ವಾಚಕರನ್ನು ಅಡ್ಡಹಾದಿಗೆ ಹತ್ತಿಸಿರುವರು. ಮತ್ತು ತಮ್ಮ ಸಮರ್ಥನೆಗೆ ಏನೇನೂ ಸಂಬಂಧವಿಲ್ಲದ ವಚನಗಳನ್ನು ಸಹ ಎತ್ತಿಕೊಂಡು ಅವುಗಳಿಂದೆಲ್ಲ ತಮ್ಮ ಪಕ್ಷದ ಸಮರ್ಥನೆಯಾಗುವುದೆಂದು ಕೋಲಾಹಲವನ್ನು ಎಬ್ಬಿಸಿರುವರು.

ಇದರಂತೆಯೇ ಪುಟ ೨೭ ರಿಂದ ೩೧ ರವರೆಗೆ ಇವರು ಕಾಣಿಸಿರುವ ವಚನಗಳು ಇವರ ಅಯನಸಮರ್ಥನೆಗೆ ಏನೂ ಸಾಧಕವಾದವುಗಳಲ್ಲ. ಆ ಪೈಕಿ ‘ **ಅಯತೇ........ಉತ್ತರಾಶಾಂ ಚ** ’ ಈ ಮೊದಲಾದ ಕಾಲಮಾಧವ, ಗರ್ಗ, ಶತಪಥಬ್ರಾಹ್ಮಣ, ವೇದಾಂಗಜ್ಯೋತಿಷ, ಮಹಾಭಾರತಾದಿ ವಚನಗಳು ಇವರ ಸಾಯನ ಅಯನವನ್ನು ಸಮರ್ಥಿಸತಕ್ಕವುಗಳಲ್ಲವೆಂಬುದನ್ನು ಹಿಂದೆಯೇ ವಿವರಿಸಿರುತ್ತೇವೆ. ‘ **ಅಯನೇ ದ್ವೇ ಗತಿರುದಕ್** ’ ಎಂಬ ಅಮರಶ್ಲೋಕದಲ್ಲಿ ೧ ವತ್ಸರಕ್ಕೆ ೨ ಅಯನಗಳೆಂದು ಹೇಳಿದ್ದು, ಕರ್ಮಾರ್ಹವಾದ ವತ್ಸರವು ನಿರಯನವೆಂಬುದು ಸರ್ವಸಮ್ಮತವಾಗಿರುವುದರಿಂದ ಅದರಂತೆ ಅಲ್ಲಿ ಹೇಳಿರುವ ಅಯನಗಳಾದರೂ ನಿರಯನವೇ ಆಗಿರುತ್ತವೆಂದೂ, ಉತ್ತರ ದಕ್ಷಿಣಗತಿಯನ್ನು ಸಹ ನಿರಯನ ಮಕರ-ಕರ್ಕಟಗಳಿಂದಲೇ ಎಣಿಸತಕ್ಕದ್ದೆಂದೂ ಸಿದ್ಧವಾಗುತ್ತದೆ. ಹಾಗಲ್ಲವೆನ್ನುವುದಾದರೆ ಅದರಲ್ಲಿ ಹೇಳಿದ ವತ್ಸರವು ಕರ್ಮಾರ್ಹವಲ್ಲದ ಸಾಯನ ವರ್ಷವೆಂತಾಗುವುದರಿಂದ ಅದರಂತೆ ಸಾಯನ ಅಯನಗಳನ್ನಾದರೂ ಕರ್ಮಾರ್ಹವೆಂದು ಅಲ್ಲಿ ಹೇಳಿದ್ದಲ್ಲವೆಂದು ಸ್ಪಷ್ಟವಾಗುತ್ತದೆ. ಆದ ಕಾರಣ ಈ ಶ್ಲೋಕದಲ್ಲಿ ಹೇಳಿರುವ ಅಯನವು ನಿರಯನವೆಂತಾಗಲಿ, ಸಾಯನವೆಂತಾಗಲಿ ಹೇಗೆ ಅರ್ಥಮಾಡಿದರೂ ಅದರಿಂದ ಇವರ ಅಯನದ ಸಮರ್ಥನೆಯಾಗುವುದಿಲ್ಲ. ಪುಟ ೩೮ರಲ್ಲಿ ಸೂರ್ಯತೇಜಸ್ಸಂಪರ್ಕದ ಪ್ರಮಾಣಾನುಸಾರವಾಗಿಯೇ ಆಯಾ ಭೂಪ್ರದೇಶದಲ್ಲಿ ಆಯಾ ಋತುಗಳ ಉತ್ಪತ್ತಿಯಾಗುತ್ತದೆಂದು ಬರೆದಿದ್ದಾರೆ. ಇದರಂತೆ ಕರ್ಮಭೂಮಿಯೆನಿಸಿರುವ ನಮ್ಮ ಈ ಭರತಖಂಡದಲ್ಲಿಯೂ ಸಹ ಒಂದೇ ಸಮಯದಲ್ಲಿ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಋತುಧರ್ಮಗಳು ತೋರಿಬರುತ್ತದೆಂಬುದು ಭೂಗೋಲ ಶಾಸ್ತ್ರಜ್ಞರಿಗೆಲ್ಲ

ತಿಳಿದಿರತಕ್ಕದ್ದೇ ಆಗಿದೆ. ಆದರೆ ಕರ್ಮಾರ್ಹವಾದ ಋತುವನ್ನು ಸರ್ವದೇಶಗಳಲ್ಲಿಯೂ ಒಂದೇ ವಿಧವಾಗಿ ಶಾಸ್ತ್ರಗಳಲ್ಲಿ ಹೇಳಿರುವುದಲ್ಲದೆ ದೇಶಭೇದದಿಂದ ಋತುಭೇದವನ್ನು ಎಲ್ಲಿಯೂ ಹೇಳಿಲ್ಲ. ಆದ್ದರಿಂದ ಕರ್ಮಾರ್ಹವಾದ ಅಯನದಂತೆ ಕರ್ಮಾರ್ಹವಾದ ಋತುವನ್ನು ಸಹ ಶಾಸ್ತ್ರದಿಂದಲೇ ನಿರ್ಣಯಿಸಬೇಕೆಂದೂ, ಪ್ರತ್ಯಕ್ಷವಾಗಿ ತೋರುವ ಫಲ, ಪುಷ್ಪಾದಿಗಳ ಉತ್ಪತ್ತಿಯನ್ನು ನೋಡಿ ನಿರ್ಣಯಿಸತಕ್ಕದ್ದಲ್ಲವೆಂದೂ ಸರ್ವರೂ ಒಪ್ಪತಕ್ಕದ್ದಾಗಿದೆ.

‘ **ರವೇರ್ಭವೇದೇಕಗೃಹಾಧಿಕಸ್ಯ** ’ ಎಂಬ ವಚನವು ಕರ್ಮಾರ್ಹವಾದ ಋತುವನ್ನು ಕುರಿತು ಹೇಳಿದ್ದಲ್ಲವೆಂಬುದು ಸ್ಪಷ್ಟವಿದೆ. ಮತ್ತು ಅದು ಇವರೇ ಕಾಣಿಸಿರುವ ‘ **ವಸಂತೋ ಗ್ರೀಷ್ಮೋ ವರ್ಷಾಃ** ’ ಇತ್ಯಾದಿ ಶ್ರುತಿಯ ಅರ್ಥಕ್ಕೂ ವಿರುದ್ಧವಾಗಿರುತ್ತದೆ. “ ಸೂರ್ಯಸಿದ್ಧಾಂತದಲ್ಲಿ ವಿಷುವ ಸಂಪಾತ, ಹಾಗೂ ಅಯನ ಸಂಪಾತ ಇವೆರಡೂ............... ಚಲಿಸುತ್ತಲೇ ಇರುತ್ತವೆಂತ ಸ್ಪಷ್ಟವಾಗಿ ಹೇಳಿರುತ್ತದೆ”ಂದು ಹೇಳಿ ಮುಂದೆ ಅದಕ್ಕೆ ವಿರುದ್ಧವಾಗಿ ಪುಟ ೩೦ ಪಂಕ್ತಿ ೧೩ ರಲ್ಲಿ ‘ ವಿಷುವ, ಮತ್ತು ಅಯನಸ್ಥಾನಗಳು ಸ್ಥಿರವಾಗಿರುತ್ತವೆ’ಂದು ಕಲ್ಪಿಸಿದ್ದಾರೆ. ಇದು ಸಹ ಇವರ ಕಲ್ಪನೆಗಳು ಪರಸ್ಪರವಿರುದ್ಧವಾದವುಗಳೆನ್ನುವುದಕ್ಕೆ ಉದಾಹರಣೆಯಾಗಿದೆ. ‘ **ಸ್ಫುಟಂ ದೃಕ್ತುಲ್ಯತಾಂ.....** **........** ’ ಎಂಬ ಸಿದ್ಧಾಂತವಚನದಲ್ಲಿ ಅಯನಾಂಶದ ಉಪಲಬ್ಧಿಯನ್ನಷ್ಟೇ ಹೇಳಿದ್ದು, ಭಚಕ್ರದ ಚಲನೆಯ ವಿಷಯದಲ್ಲಿ ವಿವಾದವೇ ಇಲ್ಲವಾದುದರಿಂದ ಆ ಕುರಿತು ಇವರು ಬರೆದಿರುವುದೆಲ್ಲ ತೀರ ನಿರರ್ಥಕವೇ ಆಗಿರುತ್ತದೆ. ಮತ್ತು ಚಲಿಸುತ್ತಿರುವ ಸ್ಥಾನವು ವೈಕಾರಿಕವಾದುದರಿಂದ ಅದು ಕರ್ಮಾರ್ಹವಾದ ಅಯನಾದಿಗಳ ನಿರ್ಣಯಕ್ಕೆ ಉಚಿತವಾದುದಲ್ಲವೆಂದೇ ಶಾಸ್ತ್ರದ ತಾತ್ಪರ್ಯವಾಗಿರುತ್ತದೆ. ಇದನ್ನು ಅಲ್ಲಗಳೆಯಲಿಕ್ಕೆ ಯಾರಿಗೂ ಶಕ್ಯವಿಲ್ಲ. ಆದರೂ ತಾವು ಅವಿಚಾರದಿಂದ ತೊಡಗಿರುವ ಸಾಯನಾಯನದ ಸಮರ್ಥನೆಗೆಂದು ಇವರು ಹೀಗೆಲ್ಲ ಅಲ್ಲ–ಸಲ್ಲದ ಗೊಂದಲವನ್ನು ತಂದುಕೊಂಡಿದ್ದಾರೆ.

ಪುಟ ೨೯ ರಲ್ಲಿ ಕಾಣಿಸಿದ ‘ **ಭಚಕ್ರನಾಭೌ** ’ ಇತ್ಯಾದಿ ವಚನಗಳಾದರೂ ನಿರಯನ ಸಂಕ್ರಾಂತಿಗಳನ್ನೇ ನಿರೂಪಿಸತಕ್ಕವುಗಳಾಗಿವೆ. ಪುಟ ೩೦ ರಲ್ಲಿ– ‘ **ಭಾನೋರ್ಮಕರಸಂಕ್ರಾಂತೇಃ....** ’ ಎಂಬ ವಚನದಲ್ಲಿ (ನಿರಯನ) ಮಕರಕರ್ಕಟ ಸಂಕ್ರಾಂತಿಗಳಿಂದಲೇ ಅಯನಾರಂಭವಾಗುವುದೆಂದು ಸ್ಪಷ್ಟವಾಗಿ ಹೇಳಿದ್ದು, ಅದಕ್ಕೆ ಇವರು ಸಾಯನ ಮಕರಕರ್ಕಟಗಳೆಂದು ಅಪಾರ್ಥವನ್ನು ಕಲ್ಪಿಸಿದ್ದಲ್ಲದೆ ಅಲ್ಲಿಯೇ ಮುಂದೆ ‘ **ಸೌರೇಣ ದ್ಯುನಿಶೋರ್ಮಾನಂ** ’ ಎಂಬ ಶ್ಲೋಕವನ್ನೆತ್ತಿ ಅದರಿಂದ ‘ ದಿನರಾತ್ರಿಮಾನದ ಜೊತೆಯಲ್ಲಿ ಆ ಶ್ಲೋಕದಲ್ಲಿ ಹೇಳಿರುವ ಇತರ ವಿಷಯಗಳಿಗೂ ಸಹ ಸಾಯನ ಸೌರಮಾನವೇ ಬೇಕೆಂದು ಸಿದ್ಧವಾಗುವದು;’ ಎಂದಿದ್ದಾರೆ. ಅಂದ ಮೇಲೆ ಅದೇ ಶ್ಲೋಕದ ಅಂತ್ಯದಲ್ಲಿ ಹೇಳಿರುವ ‘**ಸಂಕ್ರಾಂತೇಃ ಪುಣ್ಯಕಾಲತಾ**’ ಅಂದರೆ–

ಸಂಕ್ರಾಂತಿ, ಪುಣ್ಯಕಾಲ ಸಹ ಇವರನ್ನುವಂತೆ ಸಾಯನಮಾನದಿಂದಲೇ ಗಣಿಸಲ್ಪಡಬೇಕಾಗುವಲ್ಲಿ ಇವರ ಈ ಕಲ್ಪಿತಾರ್ಥವು ಸ್ವಯಂ ಇವರಿಗಾದರೂ ಮಾನ್ಯವಾಗಿರುತ್ತಿದ್ದರೆ ಇವರ ದೃಕ್ಪಂಚಾಂಗದಲ್ಲಿ ಸೌರಮಾಸ, ಸಂಕ್ರಾಂತಿಗಳನ್ನೂ, ಅದರಂತೆಯೇ ಸಂಕ್ರಾಂತಿಶ್ರಾದ್ಧನಿರ್ಣಯವನ್ನೂ ನಿರಯನ ಮಾನದಿಂದ ಗಣಿಸಿ ಬರೆಯುವ ಕಾರಣವಿದ್ದಿಲ್ಲ. ಹೀಗೆ ಇವರು ಸ್ವಪಕ್ಷಸಮರ್ಥನೆಗೆಂದು ಬರೆದಿರುವ ಇಂಥ ಸ್ವವಿರುದ್ಧ ಮತ್ತು ಅಬದ್ಧವಾದ ಹೇಳಿಕೆಗಳು ಸ್ವತಃ ಇವರಿಗೂ ಸಮ್ಮತವಾಗಿಲ್ಲದೆ ಇವರ ಪಂಚಾಂಗವನ್ನೂ ಸಮರ್ಥಿಸದೆ ವಿಲಕ್ಷಣವಾಗಿ ಇರುವಲ್ಲಿ ಇದರಿಂದೆಲ್ಲ ಇವರು ' ಸಮರ್ಥನೆ ' ಮಾಡಿದ್ದೆನ್ನುವದು ಸಾಯನವನ್ನೋ–ನಿರಯನವನ್ನೋ ? ಅಥವಾ (ಪುಟ ೨೬ ಪಂ ೧೭ ರಲ್ಲಿ ಕಲ್ಪಿಸಿಕೊಂಡಿರುವಂತೆ) ಅವೆರಡೂ ಅಲ್ಲದ ಇನ್ನೊಂದು (?) ಅಯನವನ್ನೋ ? ಸೂರ್ಯಸಿದ್ಧಾಂತದ ಮಾನಾಧ್ಯಾಯದಲ್ಲಿ ಸೌರಮಾನದ ವ್ಯವಹಾರವನ್ನು ತೋರಿಸಲಿಕ್ಕಾಗಿ ಹೇಳಿರುವ ಈ ಶ್ಲೋಕದಿಂದಂತೂ ಅದರಲ್ಲಿ ಹೇಳಿರುವ ವಿಷಯಗಳಿಗೆಲ್ಲ ಸಾಯನ ಸೌರಮಾನವೇ ಬೇಕೆಂಬುದು ಹೇಗೂ ಸಿದ್ಧವಾಗುವುದಿಲ್ಲ. ಇನ್ನು ' **ಉತ್ತರತೋ ಯಾಮ್ಯದಿಶಂ** ' ಇತ್ಯಾದಿ ವಚನವು ಕ್ರಾಂತಿಯ ಹ್ರಾಸ, ವೃದ್ಧಿಸ್ಥಾನಗಳನ್ನು ವಿವರಿಸಲಿಕ್ಕೆ ಹೇಳಿದ್ದಲ್ಲದೆ ಕರ್ಮಾರ್ಹವಾದ ಅಯನ, ನಿರ್ಣಯಕ್ಕಾಗಿ ಹೇಳಿದ್ದಲ್ಲ.

ಪುಟ ೩೧ ರಲ್ಲಿ ' **ಚಲಸಂಸ್ಕೃತತಿಗ್ಮಾಂಶೋಃ** ' ಇತ್ಯಾದಿ ವಸಿಷ್ಠ, ಪುಲಸ್ತ್ಯ, ಶಾಕಲ್ಯ, ರೋಮಶವಚನಗಳು ಅಯನದಿನವು ಸಹ ಪುಣ್ಯಪ್ರದವೆಂಬುದನ್ನು ಸೂಚಿಸುವ ಬಗ್ಗೆ ಪ್ರರೋಚನಾರ್ಥವಾಗಿ ಹೇಳಲ್ಪಟ್ಟವುಗಳಲ್ಲದೆ ದಕ್ಷಿಣೋತ್ತರಾಯಣಾರಂಭದ ಕಾಲನಿರ್ಣಯಕ್ಕಾಗಿ ಹೇಳಿದವುಗಳಲ್ಲ. ಆದುದರಿಂದ ಈ ಯಾವ ವಚನದಿಂದಲೂ ಇವರ ಅಯನದ ಸಮರ್ಥನೆಯಾಗುವುದಿಲ್ಲ. ಮತ್ತು ಇವರ ಇಂತಹ ವ್ಯರ್ಥಪ್ರಲಾಪಗಳಿಂದೆಲ್ಲ ತಜ್ಞರಾದ ವಾಚಕರು ಎಂದಿಗೂ ವಿಪಂಚನೆಹೊಂದಲಾರರೆಂದು ನಂಬುತ್ತೇವೆ.

ಇನ್ನು ಅದೇ ಪುಟ ೩೧ ರಲ್ಲಿ " ಮೊದಮೊದಲು ಸೂರ್ಯನ ವಿಭಾಗಾತ್ಮಕ (ಸಾಯನ) ರಾಶಿಪ್ರವೇಶಕ್ಕೇನೇ ವಿಷುವಾದಿ ಸಂಕ್ರಾಂತಿಗಳೆಂದು ಹೆಸರುಕೊಟ್ಟು ಪುಣ್ಯಕಾಲವನ್ನಾಚರಿಸುತ್ತಿದ್ದರೆಂದೂ, ಮುಂದೆ ತಾರಾತ್ಮಕ (ನಿರಯನ) ರಾಶಿಸಂಕ್ರಾಂತಿಗಳೇ ಮೇಷಸಂಕ್ರಾಂತಿ, ವೃಷಭಸಂಕ್ರಾಂತಿ ಇತ್ಯಾದಿ ರೂಪದಿಂದ ಪ್ರಚಾರದಲ್ಲಿ ಬರಹತ್ತಿದವೆಂದೂ" ಹೇಳಿರುವರು. ಇದೆಂತಹ ವಿಲಕ್ಷಣಕಲ್ಪನೆಯೋ ತಿಳಿಯದು. ಯಾಕಂದರೆ:— ತಮ್ಮ ಈ ಮಾತಿನ ಸಮರ್ಥನೆಗಾಗಿ ತೆಗೆದುಕೊಂಡ ಆ ಸೂರ್ಯಸಿದ್ಧಾಂತಾದಿ ಗ್ರಂಥಗಳಲ್ಲಿಯೇ " **ಪೌಷ್ಣಾಂತೇ ಭಗಣಃ ಸ್ಮೃತಃ |** " ಇತ್ಯಾದಿವಚನಗಳಿಂದ ನಕ್ಷತ್ರಾತ್ಮಕವಾದ ಸ್ಥಿರ (ನಿರಯನ) ಸ್ಥಾನವನ್ನೇ ಹಿಡಿದು ಸೂರ್ಯಾದಿ ಭಗಣಗಳನ್ನು ಹೇಳಿರುವದಲ್ಲದೆ ಇವರು ಸಾಯನಕಲ್ಪನೆಯನ್ನಾದರಿಸಿ ಹೇಳಿಲ್ಲ. ಅದ

ರಂತೆಯೇ ಸೌರವರ್ಷ, ಅಯನ, ಋತು, ಮಾಸಗಳನ್ನೂ, ಸಂಕ್ರಾಂತಿಗಳನ್ನೂ ಸಹ ನಿರಯನವಾಗಿಯೇ ಆಯಾ ಗ್ರಂಥಗಳಲ್ಲಿ ಹೇಳಿರುವವಲ್ಲದೆ ಅವುಗಳಿಗೇನೇ ವಿಷುವಾದಿ ಸಂಕೇತಗಳನ್ನು ಹೇಳಿರುವರೆಂಬುದು ಸಹ ಆಯಾ ಗ್ರಂಥಗಳಿಂದ ಸ್ಪಷ್ಟವಾಗುತ್ತದೆ. ಇಷ್ಟೇ ಅಲ್ಲ; ಇವರು ವಿಭಾಗಾತ್ಮಕವೆಂದು ಕಲ್ಪಿಸಿಕೊಂಡಿರುವ ಸಾಯನ ಮೇಷ, ಸಾಯನ ವೃಷಭ ಮುಂತಾದ ಸಾಯನಗಣನೆಯು ಲಗ್ನ, ಕ್ರಾಂತಿ, ಚರಾದಿಗಳನ್ನು ಸಾಧಿಸುವಲ್ಲಿ ಅಷ್ಟರ ಮಟ್ಟಿಗೆ ಪ್ರಯೋಜಕವಾಗಿ ಗಣಿತಗ್ರಂಥಗಳಲ್ಲಿ ಹೇಳಿದ್ದಲ್ಲದೆ ಗ್ರಹಸ್ಪುಟ, ಪಂಚಾಂಗ ಗಣಿತ, ಫಲಾದೇಶ, ಧರ್ಮಕರ್ಮ ಮುಂತಾದ ಇತರ ಯಾವ ಶಾಸ್ತ್ರೀಯ ವ್ಯವಹಾರಕ್ಕಾಗಿಯೂ ಹೇಳಿದ್ದಲ್ಲವಾದುದರಿಂದ ಧಾರ್ಮಿಕ ಕೃತ್ಯಗಳಲ್ಲಿ ಸರ್ವತ್ರ ನಿರಯನ ಗಣನೆಯೇ ಶಾಸ್ತ್ರವಿಹಿತವಾದುದೆಂದು ಸರ್ವರೂ ಒಪ್ಪತಕ್ಕದ್ದಾಗಿದೆ. ಇದನ್ನಿವರು ತಿಳಿದೂ ಒಪ್ಪಿಕೊಳ್ಳದಿದ್ದರೆ, ಅಥವಾ ಈ ವಿಷಯದಲ್ಲಿ ಇವರಿಗೇನಾದರೂ ಸಂಶಯವೇ ಇದ್ದುದಾಗಿದ್ದರೆ— ಇವರು ತಮ್ಮ ನವೀನದೃಕ್ಪಕ್ಷದ ಅಗ್ರೇಸರರೆಂದು ಮನ್ನಿಸುವ ದಿವಂಗತ **ಶ್ರೀ. ವೆಂಕಟೇಶಕೇತಕರರೇ** ತಮ್ಮ ಸುಪ್ರಸಿದ್ಧ **ಜ್ಯೋತಿರ್ಗಣಿತದ** ತ್ರಿಪ್ರಶ್ನಾಧ್ಯಾಯದಲ್ಲಿ— " **ಅಯನಾಂಶವರ್ಜಿತಂ ತದ್ಯೋಗ್ಯತರಂ ಭವತಿ ಧರ್ಮಕಾರ್ಯೇಷು ।** " ಅಂದರೆ— ಧಾರ್ಮಿಕ ಕಾರ್ಯಗಳಿಗೆ ಶಾಸ್ತ್ರಪ್ರಸಿದ್ಧವಾದ ನಿರಯನ ( ನಕ್ಷತ್ರಾತ್ಮಕ ) ಮೇಷಾದಿಗಣನೆಯೇ ವಿಹಿತವೂ, ಅತಿಯೋಗ್ಯವೂ ಆಗಿರುತ್ತದೆ. ಅರ್ಥಾತ್ ಇವರ ವಿಭಾಗಾತ್ಮಕ, ಸಾಯನಮೇಷಾದಿಗಣನೆಯು ನಿಷಿದ್ಧವಾದುದು ಎಂದು ನಿಸ್ಸಂಕೋಚವಾಗಿ ಪ್ರಕಟಿಸಿರುವುದನ್ನು ತಿಳಿದುಕೊಂಡಾದರೂ ಇವರು ತಮ್ಮ ಸಾಯನಗಣನೆಯು ಧರ್ಮಕರ್ಮಗಳಿಗೆ ಯೋಗ್ಯವಾದ್ದೆಂಬ ದುರ್ವಾದವನ್ನು ಬಿಟ್ಟುಕೊಡಬೇಕು. ಇವರು ಕಲ್ಪಿಸಿಕೊಂಡಿರುವ ವಿಭಾಗಾತ್ಮಕಮೇಷಾದಿರಾಶಿಗಳೆಂಬುದು ಅಪ್ರಸಿದ್ಧ, ಧರ್ಮಕರ್ಮಗಳಲ್ಲಂತೂ ಅತ್ಯಂತ ನಿಷಿದ್ಧವಾದುದೆಂಬುದನ್ನು ಇವರ ನವೀನದೃಕ್ಪಕ್ಷದವರೇ ಆದರೂ ಯಾರೊಬ್ಬರೂ ಅಲ್ಲಗಳೆಯುವಂತಿಲ್ಲ. ಈ ಯಾವುದನ್ನೂ ಇವರು ಲಕ್ಷಿಸದೆ ಮೊದಲು ಹಾಗಿತ್ತು; ಕಡೆಗೆ ಹೀಗಾಯಿತು; ಕ್ರಮೇಣ ಹಾಗೂ ಹೀಗೂ ಆಯಿತು; ಅಂದರೆ ಈಗ (?) ಹೀಗೋ— ಹಾಗೋ— ಹೇಗೂ ಆಗಬಹುದೆಂಬ ಅರ್ಥಬರುವಂತೆ ಇವರು ಯದ್ವಾ ತದ್ವಾ ವಿಕಲ್ಪಮಾಡುವುದರಿಂದ ಆಗುವ ಸಮರ್ಥನೆಯಾದರೂ ಯಾವುದು ? ಶಾಸ್ತ್ರಾರ್ಥಗಳಲ್ಲಿ ಜನರಿಗಿರುವ ಆದರ—ಶ್ರದ್ಧೆಗಳನ್ನಷ್ಟು ಕಡಿಮೆಮಾಡುವ ಉದ್ದೇಶವಿದೆಂಬುದೊಂದು ಸಮರ್ಥನೆಯಾಗಬಹುದಲ್ಲದೆ ಇವರ ಅಯನ ಸಮರ್ಥನೆಯಂತೂ ಹೇಗೂ ಆಗುವುದಿಲ್ಲ.

ಇದೂ ಸಾಲದೆ ಪುಟ ೩೧—೩೨ ರಲ್ಲಿ " ಶೂನ್ಯಾಯನಾಂಶ ಕಾಲದಿಂದ ಮೇಷಾದಿಸಂಕ್ರಾಂತಿಗಳೇ ವಿಷುವಾದಿಗಳೆಂತಲೂ, ಕರ್ಕಟ— ಮಕರ ಸಂಕ್ರಾಂತಿಗಳೇ ಅಯನಸಂಕ್ರಾಂತಿಗಳೆಂತಲೂ ಸಾಮಾನ್ಯಜನತೆಯಲ್ಲೊಂದು

ಮೂಢಭಾವನೆಯು ಉದ್ಭವಿಸಹತ್ತಿತು;" ಎಂಬ ತಮ್ಮ ನವೀನ ಶೋಧವನ್ನು ಪ್ರಕಟಿಸಿದ್ದಾರೆ. ಸನಾತನ ವೈದಿಕ ಧರ್ಮವನ್ನನುಸರಿಸಿ ಬಂದಿರುವ ಸಾಮಾನ್ಯಜನತೆಯ ಪೂರ್ವೇತಿಹಾಸವನ್ನು ಈ ರೀತಿ ಶೋಧಮಾಡಿ ಪ್ರಕಟಿಸಿದ್ದಕ್ಕಾಗಿ ಇವರ ವಿಲಕ್ಷಣ ಬುದ್ಧಿಮತ್ತೆಯ ಬಗ್ಗೆ ಯಾರೂ ಆಶ್ಚರ್ಯಪಡಬೇಕಾಗಿದೆ. ಯಾಕಂದರೆ:— ಶೂನ್ಯಾಯನಾಂಶಕಾಲವೆಂದರೆ ಈಗ ಸುಮಾರು ಒಂದೂವರೆ ಸಾವಿರ ವರ್ಷಗಳ ಹಿಂದಿನ ಕಾಲ. ಅಲ್ಲಿಂದ ಈವರೆಗೆ ಆಗಿಹೋದ ಆರ್ಯಭಟ, ವರಾಹಮಿಹಿರ, ಬ್ರಹ್ಮಗುಪ್ತ, ಶ್ರೀಪತಿ, ಭಾಸ್ಕರಾಚಾರ್ಯ, ಗಣೇಶದೈವಜ್ಞರೇ ಮೊದಲಾದ ಅನೇಕಾನೇಕ ಗಣಕಶಿರೋಮಣಿಗಳಾಗಲಿ, ಹೇಮಾದ್ರಿ, ವಿದ್ಯಾರಣ್ಯ, ವೈದ್ಯನಾಥ, ಕಮಲಾಕರರೇ ಮೊದಲಾದ ಮಹಾ-ಮಹಾ ಧರ್ಮನಿಬಂಧಕರ್ತರಾಗಲಿ, ಜ್ಯೋತಿಷ, ಧರ್ಮಶಾಸ್ತ್ರಾದಿಗಳಲ್ಲಿ ಅಪ್ರತಿಮ ಪ್ರತಿಭಾಶಾಲಿಗಳಾದ ಇನ್ನೂ ಅನೇಕಾನೇಕ ಪಂಡಿತಪ್ರಕಾಂಡರಾಗಲಿ, ಇಷ್ಟೇ ಅಲ್ಲ; ಈವರೆಗಿನ ಯಾರೊಬ್ಬ ಪಂಚಾಂಗಕರ್ತರಾದರೂ ಸಹ ಜನರ ಆ ಮೂಢಭಾವನೆಯನ್ನು ಹೋಗಲಾಡಿಸದಿದ್ದುದಷ್ಟೇ ಅಲ್ಲದೆ ಅಂಥ ಮೂಢ (?) ಭಾವನೆಯನ್ನೇ ಆಧರಿಸಿ ತಮ್ಮ ಗ್ರಂಥಗಳನ್ನೂ ಪಂಚಾಂಗಗಳನ್ನೂ ಸಹ ರಚಿಸಿ ಅದರಂತೆಯೇ ಈವರೆಗೂ ಸಕಲಜನರೂ ಆಚರಿಸಿಬರುವಂತೆ ಮಾಡಿರುವಲ್ಲಿ ಈಗ ಇವರಂತಹ ವಿಚಿತ್ರಶೋಧಕರು ಜನ್ಮವೆತ್ತಿ ಅವರೆಲ್ಲರ ಮೂಢಭಾವನೆಯನ್ನು ಹೊರಗೆಡಹಿರುವುದರಿಂದ ಇವರ ಬುದ್ಧಿಶಕ್ತಿಯ ಅಳವು ಸಾಮಾನ್ಯರ ವಿಚಾರಕ್ಕೆ ಮೀರಿದ್ದಾಗಿರುವದು. ಇರಲಿ !

ಪುಟ ೩೨ ರಲ್ಲಿಯ " **ಸ್ಥಿರಭೇ ವಿಷ್ಣುಪದಂ** " ಎಂಬ ಗಾಲವವಚನವು ಅದೇ ಪುಟದ ಕೆಳಗೆ ಟಿಪ್ಪಣಿಯಲ್ಲಿ ಕಾಣಿಸಿರುವಂತೆ ಕಾಲಮಾಧವದಲ್ಲಿಯೂ ಉದಾಹರಿಸಲ್ಪಟ್ಟಿದ್ದು ಅದರಲ್ಲಿ ಶ್ರೀ ವಿದ್ಯಾರಣ್ಯರು —" **ತೈರೇತೈಃ ಸಂಜ್ಞಾಭೇದೈ ರಾಶಯೋ ವ್ಯವಹ್ರಿಯಂತೇ** । '' ತಾತ್ಪರ್ಯ:— ನಿರಯನ ಮೇಷಾದಿರಾಶಿಗಳಿಗೇನೇ ವಿಷುವಾದಿ ನಾಮಾಂತರಗಳಿರುತ್ತವೆ ಎಂದು ನಿಷ್ಕರ್ಷವಾಗಿ ಹೇಳಿರುತ್ತಾರೆ. ಮುಂದೆ ' **ಹರಿಪದಂ ಸ್ಥಿರಭೇ** ' ಎಂಬ ಶ್ರೀಪತಿ ವಚನದಲ್ಲಿ ನಿರಯನ ಮೇಷಾದಿ ಸಂಕ್ರಾಂತಿಗಳಿಗೇನೇ ವಿಷುವಾದಿ ಸಂಕೇತಗಳನ್ನು ಹೇಳಿದೆ ಎಂಬುದನ್ನು ಇವರು ಸಹ ಒಪ್ಪಿಕೊಂಡಿದ್ದಾರೆ. ಮುಂದಿನ ' **ಯಾವದ್ಭಿರಂಶೈಃ** ' ಎಂಬ ವಚನವಾದರೂ ಕರ್ಮಾರ್ಹವಾದ ಅಯನನಿರ್ಣಯಕ್ಕಾಗಿ ಹೇಳಿದ್ದಲ್ಲ. ಹೀಗೆ ಇವರು ಕಾಣಿಸಿರುವ ಯಾವ ವಚನವೂ ಇವರ ಅಯನವನ್ನು ಸಮರ್ಥಿಸುವುದಿಲ್ಲ. ಆದರೂ ಈ ವಚನಗಳೆಲ್ಲ ತಮ್ಮ ಸಾಯನ ಅಯನವನ್ನೇ ಸಮರ್ಥಿಸುತ್ತವೆಂದು ಇವರು ಕಲ್ಪಿಸಿಕೊಂಡು, ಪುಟ ೩೩ ರಲ್ಲಿ ಭಚಕ್ರದ ಪರಿಲೇಖಮಾಡಿ ಅಲ್ಲಿಯೂ ಸಹ ಶಾಸ್ತ್ರವಿರುದ್ಧವಾಗಿ ಸಾಯನರಾಶಿಗಳಿಗೇನೇ ವಿಷುವಾದಿ ಸಂಕೇತಗಳನ್ನು ಕಾಣಿಸಿ, ಮುಂದೆ ಪುಟ ೩೪, ೩೫ ರಲ್ಲಿ ಇವರ ಸಮರ್ಥನೆಗೆ ಏನೂ ಸಂಬಂಧವಿಲ್ಲದ ಸೂರ್ಯ

ಸಿದ್ಧಾಂತ, ನಿರ್ಣಯಸಿಂಧ್ವಾದಿ ವಚನಗಳನ್ನಷ್ಟು ಕಾಣಿಸಿ ಮೂಲಾರ್ಥದ ವಿಚಾರವನ್ನೇನೂ ಮಾಡದೆ ತಮ್ಮ ಅಯನದ ಸಮರ್ಥನೆಗೆಂದು ಪೂರ್ವಾಪರ ಸಂಬಂಧವಿಲ್ಲದ ಕೆಲವು ಕಲ್ಪನೆಯ ಮಾತುಗಳನ್ನು ಬರೆದಿದ್ದಾರೆ. ಅದರ ಇವರು ಕಾಣಿಸಿರುವ ‘ **ತದಾಧಾರಯುತೇಃ** ’ ಇತ್ಯಾದಿ ಸಿದ್ಧಾಂತವಚನಗಳಲ್ಲಿ ನಿರಯನ ಮೇಷಾದಿರಾಶಿಗಳೇ ನಿರೂಪಿಸಲ್ಪಟ್ಟಿವೆ ಎಂದೂ, ಇದರಂತೆ ‘ **ಭಾನೋರ್ಮಕರಸಂಕ್ರಾಂತೇಃ** । ’ ಎಂಬಲ್ಲಿಯೂ ಸಹ ನಿರಯನ ಮಕರ ಕರ್ಕಟಗಳೇ ನಿರ್ದೇಶಿಸಲ್ಪಟ್ಟಿರುವವೆಂದೂ, ‘**ಸಂಕ್ರಾಂತಿಷು ಯಥಾಕಾಲಃ**’ ಇತ್ಯಾದಿ ವಚನಗಳು ಆಯಾ ನಿರಯನ ಸಂಕ್ರಾಂತಿಗಳಿಗೆ ಸಂಬಂಧಪಟ್ಟ ಪುಣ್ಯಕಾಲವನ್ನು ಆಯಾ ಅಯನದಿನಗಳಲ್ಲಿಯೂ ಸೂಚಿಸಲಿಕ್ಕಾಗಿ ಮಾತ್ರ ಹೇಳಲ್ಪಟ್ಟವುಗಳೆಂದೂ ಶಾಸ್ತ್ರಮರ್ಯಾದೆ, ಹಾಗೂ ಶಿಷ್ಟಸಂಪ್ರದಾಯಗಳನ್ನು ತಿಳಿದಿರುವ ತಜ್ಞರಿಗೆಲ್ಲ ತಾನಾಗಿ ತಿಳಿಯುವಂತಿರುವುದರಿಂದ ಈ ಯಾವ ವಚನದಿಂದಲೂ ಇವರ ಸಾಯನ ಅಯನದ ಸಮರ್ಥನೆಯಾಗುವುದಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ.

ಇಷ್ಟರ ವರೆಗೆ ನಾವು ವಿವೇಚಿಸಿರುವ ವಿಷಯಗಳಿಂದ ಇವರು ಶ್ರುತಿ–ಸ್ಮೃತ್ಯಾದಿಶಾಸ್ತ್ರಗಳನ್ನೂ, ಶಾಸ್ತ್ರಕರ್ತರಾದ ಮಹರ್ಷಿಗಳನ್ನೂ, ಈ ವರೆಗೆ ಆಗಿಹೋದ ಮಹಾಪುರುಷರನ್ನೂ ಯಾವ ನೆಲೆಯಲ್ಲಿಟ್ಟು ತಮ್ಮ ಸಮರ್ಥನೆಯನ್ನು ಮಾಡಿಕೊಳ್ಳಲು ಹೊರಟಿದ್ದಾರೆನ್ನುವುದು ಸುವಿಚಾರಿಗಳಾದ ವಾಚಕರ ಲಕ್ಷ್ಯಕ್ಕೆ ಬಾರದೆ ಇರಲಿಕ್ಕಿಲ್ಲ. ಹೀಗೆ ಹೊರಗಿನ ಮಹಾಪುರುಷರ ಮತ್ತು ಅವರ ಗ್ರಂಥಗಳ ಶೋಧವನ್ನೆಲ್ಲ ಮುಗಿಸಿ ಪುಣ್ಯಕಟ್ಟಿಕೊಂಡ ಇವರು ತಮ್ಮ ಕುಲಸ್ಥರೆಂದು ಅಭಿಮಾನದಿಂದ ಹೇಳಿಕೊಳ್ಳುವ ಪ್ರಸಿದ್ಧ ಪುರುಷರ ಗ್ರಂಥವನ್ನು ಶೋಧಿಸದೆ ಬಿಟ್ಟರೆ ಇವರ ಶೋಧಕಬುದ್ಧಿಗೆ ಅದೊಂದು ಕೊರತೆಯಾಗಬಹುದೆಂತಲೋ ಏನೋ ಮುಂದೆ ಪುಟ ೩೫ ರಲ್ಲಿ “ ವಿದ್ಯಾಮಾಧವರು ಮೇಷಾದಿಸಂಕ್ರಾಂತಿಗಳಿಗೆ ವಿಷುವಾದಿ ಸಂಜ್ಞೆ ಕೊಟ್ಟಿದ್ದಾದರೂ ಶೂನ್ಯಾಯನಾಂಶಕಾಲದ ಪ್ರವೃತ್ತಿಯನ್ನು ಅನುಸರಿಸಿಯೇ ಆಗಿತ್ತೆಂ”ದು ಇನ್ನೊಂದು ಹೊಸ ಶೋಧಮಾಡಿದ್ದಾರೆ. ಇವರ ಈ ನವೀನ ಶೋಧದಿಂದ ತಮ್ಮ ಕಾಲಕ್ಕೆ ಸಲ್ಲದ ಯಾವುದೋ ಒಂದು ( ಶೂನ್ಯಾಯನಾಂಶ) ಕಾಲದ ಪ್ರವೃತ್ತಿಯನ್ನನುಸರಿಸಿ, ( ಇವರ ಮತದಂತೆ ತೀರ ಅಸಂಬದ್ಧ, ಅವಿಚಾರಿತ, ಮತ್ತು ಅಶಾಸ್ತ್ರೀಯವಾದ ) ಶಾಶ್ವತವಾದ ಗ್ರಂಥವನ್ನು ರಚಿಸಿರುವ ಇವರ ಪೂರ್ವಪುರುಷರ ‘**ಮೂಢಭಾವನೆ**’ಯನ್ನು ಈ ರೀತಿ ಲೋಕಕ್ಕೆ ಪ್ರಕಟಪಡಿಸಿದ ಇವರ **ಸ್ವಾಭಿಮಾನವರ್ಜಿತವಾದ** ನಿಷ್ಪಕ್ಷಬುದ್ಧಿಯು ಸ್ತುತ್ಯವೇ ಸರಿ. ಆದರೆ ವಿದ್ಯಾಮಾಧವರು ಶೂನ್ಯಾಯನಾಂಶಕಾಲದ ಪ್ರವೃತ್ತಿಯನ್ನನುಸರಿಸಿ ಸಂಕ್ರಾಂತಿ ಸಂಜ್ಞೆಗಳನ್ನು ಹೇಳಿದ್ದೆನ್ನಲಿಕ್ಕೆ ಇವರು ತೆಗೆದ ( ಅವರ ಚಕ್ರಾರ್ಧವ್ಯತೀಪಾತದ ನಿರ್ವಚನವೆಂಬ) ಹೇತುವು ಮಾತ್ರ ಅಷ್ಟು ಯುಕ್ತವಾದದ್ದಲ್ಲ. ಯಾಕಂದ

ಕ್ಕೆ ಯಾವಾಗಲೂ (ಸಾಯನ) ರವಿ-ಚಂದ್ರರ ಯೋಗವು ಆರು ರಾಶಿಯಾಗು ವಾಗ ವ್ಯತೀಪಾತದ ಸಂಭವವಾಗುವುದಾದರೂ ವಿದ್ಯಾಮಾಧವರು ಆರು ರಾಶಿಗಿಂತ ಕಡಿಮೆಯಾಗಿಯೇ ವ್ಯತೀಪಾತದ (ನಿರಯಸ) ಯೋಗಧ್ರುವವನ್ನು ಹೇಳಿದ್ದರಿಂದ ಅಯನಾಂಶಸಂಸ್ಕಾರವನ್ನು ಹಿಡಿದೇ ಅವರು ಹಾಗೆ ಹೇಳಿರು ವರೆಂದು ಸ್ಪಷ್ಟವಾಗುತ್ತದೆ. ಮತ್ತು ಮತಾಂತರವನ್ನು ಹೇಳಿದ ನಂತರ ಸರ್ವ ರೂ ಗಣಿತಶಾಸ್ತ್ರಾನುಸಾರವಾಗಿಯೇ ಅವನ್ನು ತಿಳಿದುಕೊಳ್ಳಬೇಕೆಂತ ತಮ್ಮ ನಿಶ್ಚಯವನ್ನು ಹೇಳಿದ್ದಾರೆ. ಇದರಿಂದ ಅವರು ಈ ಯಾವ ಭಾಗದಲ್ಲಿಯೂ ಅಯನಾಂಶವನ್ನೇ ಹೇಳಿಲ್ಲವೆನ್ನುವುದು ಎಷ್ಟು ಮಾತ್ರಕ್ಕೂ ಯುಕ್ತವಾಗಿಲ್ಲ. ಮೇಲಾಗಿ ಅವರು "**ಪಾಥೋನೇಽಂಶಕತೋಽಂಶಕಾರ್ಧಸಹಿತಾತ್ತ್ರ್ಯಕ್ತೇ ತ್ರಯೋವಿಂಶತೇಃ।**" ಎಂದಿರುವ ಈ (ಚಕ್ರಾರ್ಧಯೋಗಸಂಭವದ ಯೋಗ) ಧ್ರುವಕವು ಶೂನ್ಯಾಯನಾಂಶಕಾಲದ ಸ್ಥಿತಿಗೆ ಹೇಗೂ ಹೊಂದುವುದಿಲ್ಲ. ಆದುದ ರಿಂದ ವಿದ್ಯಾಮಾಧವರು ಶೂನ್ಯಾಯನಾಂಶಕಾಲದ ಪ್ರವೃತ್ತಿಯನ್ನನುಸರಿಸಿ ಹೇಳಿದ್ದೆಂದು ಇವರು ಹೇಳುವುದು ತೀರಾ ವಿಸಂಗತ. ಇದರಿಂದ ಇವರ ಸಮ ರ್ಥನೆಯಂತೂ ಹೇಗೂ ಆಗುವುದಿಲ್ಲ. ಇಷ್ಟೇ ಅಲ್ಲ; ವಿದ್ಯಾಮಾಧವರು (ನಿರಯ ನ) ಮೇಷಾದಿ ಸಂಕ್ರಾಂತಿಗಳಿಗೇನೇ ವಿಷುವಾದಿ ಸಂಜ್ಞೆಗಳನ್ನು ಕೊಟ್ಟಿದ್ದಾರೆಂ ಬುದನ್ನು ಇವರೂ ಇಲ್ಲಿ ಒಪ್ಪಿಕೊಂಡಿದ್ದು ಅದು ಇವರು ತೋರಿಸಿದ ಚಕ್ರಾರ್ಧ ವ್ಯತೀಪಾತ ನಿರ್ವಚನೆಯ ಉದಾಹರಣೆಯಿಂದಲೇ ಶೂನ್ಯಾಯನಾಂಶಕಾಲದ ಪ್ರವೃತ್ತಿಯನ್ನನುಸರಿಸಿ ಹೇಳಿದ್ದಲ್ಲವೆಂದು ಸಿದ್ಧವಾಗುವುದರಿಂದ ಶ್ರುತಿ-ಸ್ಮೃ ತ್ಯಾದಿ ಶಾಸ್ತ್ರಗಳಿಗೆಲ್ಲ ಸಮ್ಮತವಾಗಿರುವಂತೆ ಮೇಷಾದಿ (ನಿರಯನ) ಸಂಕ್ರಾಂ ತಿಗಳಿಗೆ ವಿಷುವಾದಿ ಸಂಜ್ಞೆಗಳು ನಿತ್ಯವಾಗಿರುವವೆಂದು ನಿರ್ಣಯಿಸಿಯೇ ವಿದ್ಯಾಮಾಧವರು ಹಾಗೆ ಹೇಳಿರುವರೆಂದೂ, ಇವರ ಹೇಳಿಕೆಯಂತೆ ಸಮಯ ಕ್ಕೆ ತಕ್ಕಂತೆ ಹೇಳಿದ ಮಾತಲ್ಲವೆಂದೂ ಇದರಿಂದಸ್ವಯಂ ಸಿದ್ಧವಾಗುವದು.

ಮುಂದೆ '**ಅಯನದ್ವಿತಯೇ ಶ್ರಾದ್ಧಂ**' (ಮಾತ್ಸ್ಯ) '**ಅಮಾ ವಾಸ್ಯಾಽಷ್ಟಕಾ ವೃದ್ಧಿಃ**' (ಯಾಜ್ಞವಲ್ಕ್ಯ) ಇತ್ಯಾದಿ ವಚನಗಳನ್ನು ಕಾಣಿಸಿ ಅವುಗಳಿಗೆ— "**ಅಯನವಿಷುವಯೋಃ ಸಂಕ್ರಾಂತಿತ್ವೇ ಸಿದ್ಧೇಽಪಿ ಪೃಥಗು ಪಾದಾನಂ ಫಲಾತಿಶಯಪ್ರತಿಪಾದನಾರ್ಥಂ**" '**ಪುಣ್ಯಂ ವಕ್ತುಮಯನಗ್ರ ಹಣಂ**' ಇತ್ಯಾದಿ ಮಿತಾಕ್ಷರ (ವಿಜ್ಞಾನೇಶ್ವರಯೋಗೀಂದ್ರರು), ವಿದ್ಯಾರಣ್ಯ, ಕಮಲಾಕರರೇ ಮೊದಲಾದ ಸುಪ್ರಸಿದ್ಧ ವ್ಯಾಖ್ಯಾತರು ಮಾಡಿರುವ ಅರ್ಥವ ನ್ನೆಲ್ಲ ನಿರಾಕರಿಸಿ ಯಾವ ವ್ಯಾಖ್ಯಾತರೂ ಮಾಡದಿರುವ ತಮ್ಮ ಹೊಸ ಅರ್ಥ ವನ್ನು ಕಲ್ಪಿಸಿದ್ದಾರೆ. ಇಲ್ಲಿ "ಮೇಷಾದಿ (ನಿರಯನ) ಸಂಕ್ರಾಂತಿಗಳಲ್ಲಿಯೇ ಸೇರಿರುವ ವಿಷುವಾಯನ ಸಂಕ್ರಾಂತಿಗಳನ್ನು ಬೇರೆಯಾಗಿ ಹೇಳಿದ್ದು ಫಲಾತಿ ಶಯವನ್ನು ಹೇಳುವುದಕ್ಕಾಗಿರುವುದು" ಎಂಬ ಮೇಲಿನ ವ್ಯಾಖ್ಯಾನಕರ್ತರ ಮತವನ್ನು ಇವರು ನಿರಾಕರಿಸುವಾಗ ಪುಟ ೩೬ರಲ್ಲಿ '**ಏತದ್ವಿಷ್ಣುಪದಂ**

**ನಾಮ ವಿಷುವಾದಧಿಕಂ ಫಲಂ।** ’ ಎಂಬ ವೃದ್ಧವಸಿಷ್ಠರ ವಚನದ ಮೇಲಿಂದ ವಿಷುವಕ್ಕಿಂತಲೂ ಅಧಿಕಫಲವಾದ ವಿಷ್ಣುಪದವನ್ನೂ ಬೇರೆಯಾಗಿ ಹೇಳಬೇಕಾಗಿತ್ತು ಎಂದು ಆಕ್ಷೇಪಿಸಿದ್ದಾರೆ. ಆದರೆ ಸರಿಯಾಗಿ ವಿಚಾರಿಸಿದರೆ ಈ ಆಕ್ಷೇಪವು ಇವರ ಸಾಯನವಾದಕ್ಕೂ ತಪ್ಪಿದ್ದಲ್ಲ. ಯಾಕಂದರೆ— ವಿಷುವ, ಅಯನ, ವಿಷ್ಣುಪದ, ಷಡಶೀತಿಮುಖಗಳೆಂಬ ಈ ಸಂಕೇತಗಳೆಲ್ಲವೂ ಇವರ ಮತದಂತೆ ಸಾಯನಗಳೇ ಆಗಿರುವುದರಿಂದ ಆ ಪೈಕಿ (ಸಾಯನ) ವಿಷುವಾಯನಗಳನ್ನು ಮಾತ್ರ ಪ್ರತ್ಯೇಕಿಸಿ ಹೇಳುವಲ್ಲಿ ಮೇಲಿನ ವೃದ್ಧವಸಿಷ್ಠವಚನದಂತೆ ಅಂಥ ವಿಷುವಕ್ಕಿಂತಲೂ ಅಧಿಕಫಲವಾದ (ಇವರ ಮತದಂತೆ ಸಾಯನವೇ ಆಗಿರುವ) ವಿಷ್ಣುಪದವನ್ನು ಸಹ “ ಪೃಥಗ್ಗ್ರಹಣ ” ಮಾಡಬೇಕಾಗುತ್ತಿತ್ತು ಹಾಗೆ ಮಾಡದೆ ಬಿಟ್ಟದ್ದು ಇವರ (ಸಾಯನವಿಷುವಾದಿವಾದಿ) ಪಕ್ಷಕ್ಕೂ ಅಯುಕ್ತವೇ ಆಗುವುದು. ಆದುದರಿಂದ ಮೇಲಿನ ಮಾತ್ಸ್ಯಾದಿ ವಚನಗಳಿಗೆ ಇವರನ್ನುವಂತೆ ಸಾಯನಪರವಾಗಿ ಅರ್ಥಮಾಡಿದರೂ ಇವರ ಆಕ್ಷೇಪವು ಪರಿಹಾರವಾಗುವುದಿಲ್ಲ. ಇನ್ನು ವಿಷ್ಣುಪದವು ಅಧಿಕಫಲವೆಂಬುದು ಮೂಲಕರ್ತರಿಗೆ ಸಮ್ಮತವಾದ್ದಲ್ಲ; ಆದ್ದರಿಂದ ಅದನ್ನು ಪೃಥಗ್ಗ್ರಹಣಮಾಡಿಲ್ಲವೆಂದು ಇವರು ಹೇಳುವುದಾದರೆ– ಈ ಹೇಳಿಕೆಯು ನಿರಯನ ವಿಷುವಾಯನ ಸಂಕ್ರಾಂತಿಗಳಿಗೂ ಸಮಾನವಾಗಿಯೇ ಹೊಂದುವುದರಿಂದ ಇವರ ಸಾಯನವಿಷುವಾಯನಗಳೇ ಮೂಲಕರ್ತರಿಗೆ ಸಮ್ಮತವಾದ್ದೆಂಬ ವಾದಕ್ಕೆ ಇದು ಏನೂ ಸಾಧಕವಾಗಿರುವುದಿಲ್ಲ. ಆದಕಾರಣ ಮಿತಾಕ್ಷರಾದಿ ಪ್ರಾಮಾಣಿಕವ್ಯಾಖ್ಯಾತರನ್ನು ವೃಥಾ ಆಕ್ಷೇಪಿಸಿದ ಭಾಗ್ಯವೊಂದು ಇವರಿಗೆ ಘಟಿಸಿರುವುದಲ್ಲದೆ ಇದರಿಂದ ಇವರ ಅಯನಸಮರ್ಥನೆಯು ಹೇಗೂ ಆಗುವುದಿಲ್ಲ.

“ ಹಾಗೂ ಆ ಮೂಲಕರ್ತರಿಗೆ ( ಮಿತಾಕ್ಷರಾದಿ ವ್ಯಾಖ್ಯಾನದಲ್ಲಿ ಹೇಳಿರುವ) ಹಾಗಿನ ಅಭಿಪ್ರಾಯವೇ ನಿಜವಾಗಿರುತ್ತಿದ್ದರೆ ಅವರು ‘**ಸಂಕ್ರಮೇಷ್ವಪಿ ಚಾನ್ಯೇಷು** ’ ‘ **ವಿಷುವಚ್ಚಾನ್ಯಸಂಕ್ರಮಃ** ’ ಇತ್ಯಾದಿ ವಿಧದಿಂದ ಶಬ್ದಗಳನ್ನು ಪ್ರಯೋಗಿಸಬೇಕಾಗಿತ್ತೆಂ”ದು ಇವರ ಇನ್ನೊಂದು ಆಕ್ಷೇಪವಿರುತ್ತದೆ. ಸ್ವಲ್ಪವಿಚಾರಿಸಿದರೆ ಈ ಆಕ್ಷೇಪವಾದರೂ ವ್ಯರ್ಥವೇ ಸರಿಯೆಂದು ತಿಳಿಯದಿರದು. ಯಾಕಂದರೆ ಶಬ್ದಗಳನ್ನು ಪ್ರಯೋಗಿಸುವಲ್ಲಿ ಮೂಲಕರ್ತರು ಸ್ವತಂತ್ರರಾಗಿರುವರು. ಆದರೆ ಅವರ (ಅದರಲ್ಲಿಯೂ ಶಾಸ್ತ್ರೀಯ, ಆರ್ಷ) ವಚನಗಳಿಗೆ ಅರ್ಥವನ್ನು ಮಾಡುವಾಗ ಬೇರೆ ಬೇರೆ ಆರ್ಷವಚನಗಳಿಗೂ, ಅನಾದಿಸಿದ್ಧಶಾಸ್ತ್ರಸಂಪ್ರದಾಯಕ್ಕೂ ಸರಿಯಾಗಿ ತಾತ್ಪರ್ಯವನ್ನು ತಿಳಿದುಕೊಳ್ಳಬೇಕೆಂದು ಶಾಸ್ತ್ರಮರ್ಯಾದೆಯಿರುತ್ತದೆ. ಅದರಂತೆ ಈ ವಿಷುವಾಯನಗಳ ವಿಷಯವಲ್ಲಿ ಆಶ್ವಲಾಯನರು– “ **ಸಂಕ್ರಾಂತಯೋಽಖಿಲಾಃ ಪುಣ್ಯಾಸ್ತಾಸಾಂ ಮುಖ್ಯಂ ವಿಷುದ್ವಯಂ। ಅಯನದ್ವಿತಯಂ ಚಾಪಿ ಪಿತೃದೇವಾರ್ಚನೇ ನೃಣಾಂ॥** ” ಅಂದರೆ— ದೇವ-ಪಿತೃಕಾರ್ಯಗಳಲ್ಲಿ ಎಲ್ಲ ಸಂಕ್ರಾಂತಿಗಳೂ

ಪುಣ್ಯಪ್ರದಗಳೇ ಸರಿ. ಆದರೂ ಆಪೈಕಿ ವಿಷುವತ್, ಮತ್ತು ಅಯನದ್ವಿ ಕೂಡಿ ಳ ಸಂಕ್ರಾಂತಿಗಳು ಮುಖ್ಯವಾಗಿರುತ್ತವೆ ಎಂಬುದಾಗಿಯೂ, ಇದರಂತೆಯೇ ವೃದ್ಧವಸಿಷ್ಠರು ಸಹ '**ದ್ವಾದಶಸಂಕ್ರಾಂತೀನಾಂ ಚತುಷ್ಟಯಂ ತದ್ವಿಶಿಷ್ಟತಮಂ |**' ಅಂದರೆ— ೧೨ ಸಂಕ್ರಾಂತಿಗಳ ಪೈಕಿ ಈ ವಿಷುವಾಯನಗಳೆಂಬ ೪ ಸಂಕ್ರಾಂತಿಗಳು ವಿಶೇಷವಾದದ್ದಾಗಿರುವುವೆಂಬೂ ಸ್ಫುಟವಾಗಿಯೇ (ಇವರ ಆಕ್ಷೇಪಕ್ಕೆ ಅವಕಾಶವಾಗದಂತೆ) ಶಬ್ದಗಳನ್ನು ಪ್ರಯೋಗಿಸಿರುವರು. ಇದರಂತೆ ಸ್ಪಷ್ಟಶಬ್ದಗಳನ್ನೇ ಪ್ರಯೋಗಿಸಿರುವ ಇನ್ನೂ ಅನೇಕ ಪ್ರಮಾಣವಚನಗಳನ್ನೂ, ಅನಾದಿ ಶಾಸ್ತ್ರಸಂಪ್ರದಾಯಸಿದ್ಧಶಿಷ್ಟಾಚಾರವನ್ನೂ ಚನ್ನಾಗಿ ತಿಳಿದು ಸರ್ವಜ್ಞಕಲ್ಪರೆನಿಸಿರುವ ಮಿತಾಕ್ಷರ, ಸಾಯಣಮಾಧವರಂತಹ ಜಗತ್ಪ್ರಸಿದ್ಧವ್ಯಾಖ್ಯಾನಕರ್ತರು ವಿಷುವಾಯನಗಳೆಲ್ಲ ೧೨ ಸಂಕ್ರಾಂತಿಗಳೊಳಗೇನೇ ಸೇರತಕ್ಕವುಗಳೆಂದು ಮೂಲವಚನಕ್ಕೆ ಶಾಸ್ತ್ರಮರ್ಯಾದೆಯಂತೆ ಅರ್ಥವನ್ನು ನಿಷ್ಕರ್ಷಿಸಿದ್ದು ಅದು ನಿಜವಾಗಿಯೂ ಮೂಲಕರ್ತರ ಅಭಿಪ್ರಾಯವೇ ಆಗಿರುತ್ತದೆಂಬುದು ಸಿದ್ಧಾಂತವೇ ಆಗಿದೆ. ಮೂಲವಾದ ಯಾಜ್ಞವಲ್ಕ್ಯಸ್ಮೃತಿಗಿಂತಲೂ ಹೆಚ್ಚಾಗಿ ಅದರ '**ಮಿತಾಕ್ಷರ**' ವೆಂಬ ವ್ಯಾಖ್ಯಾನವು ಲೋಕಪ್ರಸಿದ್ಧವಾಗಿದ್ದು, ಇಂತಹ ಸರ್ವಮಾನ್ಯವಾದ ಗ್ರಂಥದ ಮೇಲೂ ಸಹ ಇವರು ತಮ್ಮ 'ಸಮರ್ಥನೆ'ಗೆಂದು ಅಲ್ಲ-ಸಲ್ಲದ ಆಕ್ಷೇಪತೆಗೆದಿರುವುದರಿಂದ ಇವರು ಶಾಸ್ತ್ರವಚನಗಳ ಮೇಲೂ, ಶಾಸ್ತ್ರಮಾರ್ಗಪ್ರವರ್ತಕರಾಗಿ ಲೋಕಪ್ರಖ್ಯಾತರಾಗಿರುವ ಮಹಾಪುರುಷರ ಮೇಲೂ ಯಾವ ರೀತಿಯ **ಉದ್ಧಟತನವನ್ನು** ತೋರಿರುವರೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಹೀಗೆ— "**ಇತಿ ಯಾಜ್ಞವಲ್ಕ್ಯಮುನಿಶಾಸ್ತ್ರಗತಾ ವಿಸ್ಮೃತಿರ್ನ ಕಸ್ಯ ವಿಹಿತಾ ವಿದುಷಃ | ಪ್ರಮಿತಾಕ್ಷರಾಪಿ ವಿಪುಲಾರ್ಥವತೀ ಪರಿಷಿಂಚತಿ ಶ್ರವಣಯೋರಮೃತಂ ||**" ಅಂದರೆ— "ಮಿತವಾದ ಅಕ್ಷರಗಳಿಂದ ಬಹು ಶಾಸ್ತ್ರಾರ್ಥಗಳನ್ನು ಗರ್ಭೀಕರಿಸಿ ಯಾಜ್ಞವಲ್ಕ್ಯಮಹರ್ಷಿಗಳ ಸ್ಮೃತಿಶಾಸ್ತ್ರವನ್ನು ವಿಹಿತವಾಗಿ ವಿವರಿಸಿರುವ ಈ ಮಿತಾಕ್ಷರವೆಂಬ ವ್ಯಾಖ್ಯೆಯು ಸಕಲವಿದ್ವಜ್ಜನರ ಕಿವಿಗೂ ದಿವ್ಯವಾದ ( ಶಾಸ್ತ್ರಾರ್ಥನಿರ್ಣಯವೆಂಬ) ಅಮೃತರಸವನ್ನು ಸುರಿಸುವುದಾಗಿದೆ" ಎಂದು ಪ್ರಶಸ್ತಿಯನ್ನು ಹೊಂದಿರುವಂತೆ ಬೇರೆ ಪಂಡಿತರಿಗೆಲ್ಲ ಅಮೃತಾಯಮಾನವಾಗಿರುವ ಈ ಮಿತಾಕ್ಷರವ್ಯಾಖ್ಯಾನವನ್ನು ತಮ್ಮ ಅಯನಸಮರ್ಥನೆಗಾಗಿ ಪೇಚಾಡುತ್ತಿರುವ ಈ ಪಂಡಿತರೊಬ್ಬರು ಮಾತ್ರ ವಿಷತುಲ್ಯವಾಗಿ ಕಂಡು ಈ ಬಗೆಯಿಂದಾದರೂ ಇವರು ತಮ್ಮ ಅದ್ವಿತೀಯ (ಲೋಕೈಕ) ಪಂಡಿತತ್ವವನ್ನು ಸಾಧಿಸಿಕೊಂಡದ್ದು ಇವರ ವಿಲಕ್ಷಣಬುದ್ಧಿಮತ್ತೆಯ ಪರಮಾವಧಿಯ ದ್ಯೋತಕವಾಗಿದೆ.

ಇರಲಿ ! ಈ ಪ್ರಕಾರ ಇವರು ಶಾಸ್ತ್ರಾರ್ಥಗಳಲ್ಲಿ ಹಲವು ತರದ ಬಲಾತ್ಕಾರಗಳನ್ನು ನಡಿಸಿದರೂ ಇವರ ಆ ಪ್ರಲಾಪಗಳೆಲ್ಲ (ಸರ್ವತ್ರ) ಸಾಯ

ನವಾದದಕ್ಕಡೆಗೆ ತಿರುಗುವಂತಾಗಿ ಅದರಿಂದ ಇವರ (ಸಾಯನನಿರಯನಮಿಶ್ರಿತ) '**ಸಂಕೀರ್ಣಾಯನ**'ಪಕ್ಷದ್ದಾಗಲಿ, ನವೀನದೃಕ್ಪಂಚಾಂಗದ್ದಾಗಲಿ ಸಮರ್ಥನೆಯೇನೂ ಆಗದ್ದರಿಂದ ಕಡೆಗೆ ಸಂಕ್ರಮವೆಂದರೆ ಸೂರ್ಯನ ಮೇಷಾದಿ ೧೨ (ನಿರಯನ) ರಾಶಿಪ್ರವೇಶಕಾಲವೆಂತಲೂ, ಅಯನ-ವಿಷುವಗಳೆಂದರೆ (ಸಾಯನಮಕರ, ಸಾಯನಮೇಷಾದಿ) ಸಾಯನರಾಶಿಪ್ರವೇಶಕಾಲವೆಂತಲೂ ಅರ್ಥಬರುವಂತೆ ಹೇಳಿ ಹೀಗೆ ಅರ್ಥಮಾಡುವುದೇ ಸರಳವೂ, ಸಮಂಜಸವೂ ಆಗುವುದೆಂದು ತಮ್ಮ ಆ ಹಿಂದಿನ ಪ್ರಲಾಪಗಳಿಗೆಲ್ಲ ಹೊಂದದ ಹೊಸಪಲ್ಲವಿಯೊಂದನ್ನು ಹಾಡಿದ್ದಾರೆ. ಇವರ ಈ ಕಲ್ಪನೆಯಾದರೂ ಎಷ್ಟು ಅಯುಕ್ತವಾಗಿರುವುದೆಂಬುದು ಗಣಿತ, ಧರ್ಮಶಾಸ್ತ್ರಗಳಲ್ಲಿ ಅತ್ಯಲ್ಪ ಪರಿಚಯವಿರುವವರಿಗೂ ಕೂಡ ತಿಳಿಯುವಂತಿದೆ. ಇವರ ಹೇಳಿಕೆಯಂತೆ ೧೨ (ನಿರಯನ)ಸಂಕ್ರಾಂತಿಗಳಿಗಿಂತ ಬೇರೆಯಾಗಿರುವ ೨ (ಸಾಯನ)ವಿಷುವಸಂಕ್ರಾಂತಿ, ೨ (ಸಾಯನ) ಅಯನಸಂಕ್ರಾಂತಿಗಳನ್ನು ಧರ್ಮಶಾಸ್ತ್ರಗಳಲ್ಲಿ ಶ್ರಾದ್ಧಾದಿ ಕರ್ಮಾಚರಣೆಗಾಗಿ ಹೇಳಿರುವ(೧೨)ಸಂಕ್ರಾಂತಿಗಳಲ್ಲಿ ಸೇರಿಸಿಕೊಂಡರೆ ಒಟ್ಟಿಗೆ೧೬ಸಂಕ್ರಾಂತಿಗಳಾಗುವುದರಿಂದ* "**ಅಮಾ-ಯುಗ-ಮನು-ಕ್ರಾಂತಿ-ಧೃತಿ-ಪಾತ-ಮಹಾಲಯಾಃ। ಅಷ್ಟಕಾಽನ್ವಷ್ಟಕಾ-ಪೂರ್ವೇದ್ಯುಃಶ್ರಾದ್ಧೈರ್ನವತಿಶ್ಚ ಷಟ್॥**" ಅಂದರೆ- ದರ್ಶ ೧೨, ಯುಗಾದಿ ೪, ಮನ್ವಾದಿ ೧೪, ಸಂಕ್ರಾಂತಿ ೧೨, ವೈಧೃತಿ ೧೨, ವ್ಯತೀಪಾತ ೧೨, ಮಹಾಲಯ ೧೫, ಅಷ್ಟಕ ೫, ಅನ್ವಷ್ಟಕ ೫, ಪೂರ್ವೇದ್ಯುಗಳು ೫ ಕೂಡಾ ಧರ್ಮಶಾಸ್ತ್ರಗಳಲ್ಲೆಲ್ಲ ನಿಯತವಾಗಿ ಹೇಳಿರುವ 'ಷಣ್ಣವತಿ' (೯೬) ನಿತ್ಯಶ್ರಾದ್ಧಗಳೊಳಗೆ ಇವರ ಈ ಹೊಸ (ಸಾಯನ ವಿಷುವಾಯನಗಳೆಂಬ) ೪ ಸಂಕ್ರಾಂತಿಗಳೂ ಕೂಡಿ ಒಟ್ಟಿಗೆ ಶತ (೧೦೦) ಶ್ರಾದ್ಧಗಳಾಗುವವು. [ ಇವರೆನ್ನುವಂತೆ ಸಾಯನಗಳಾಗಿದ್ದು ಪ್ರತ್ಯೇಕ ಉಳಿದಿರುವ ವಿಷ್ಣುಪದ ೪, ಷಡಶೀತಿಮುಖಗಳು ೪ ಸೇರಿದರಂತೂ ಒಟ್ಟಿಗೆ ೧೦೮ ಶ್ರಾದ್ಧಗಳಾಗುವವು.] ಎಂಬಿಷ್ಟನ್ನಾದರೂ ಸಹ ಈ ಗಣಿತಪಂಡಿತರು ಯೋಚಿಸಿರಲಿಕ್ಕಿಲ್ಲವೇ? ಹಾಗೆ ೧೦೦(ಅಥವಾ ೧೦೮)ನಿತ್ಯಶ್ರಾದ್ಧಗಳನ್ನು ಯಾವ ಧರ್ಮಶಾಸ್ತ್ರದಲ್ಲಾದರೂ ಹೇಳಿರಬಹುದೇ ? ಇವೆಲ್ಲ ಎಂಥ ಬುದ್ಧಿವಿಕಲ್ಪನೆಯೋ ತಿಳಿಯದಾಗಿದೆ.

ಮುಂದೆ ಪುಟ ೩೭-೩೮ರಲ್ಲಿ ಇವರು ಕಾಣಿಸಿರುವ ಶ್ರೌತಪಷುಸೂತ್ರದ ವ್ಯಾಖ್ಯೆ, ಮತ್ತು ಕಾರಿಕಾಕಾರರಾದ ಗೋಪಾಲರ ವಚನಗಳು ಅಯನದಿನಗಳಲ್ಲಿ ರಾಶಿಚಕ್ರದಲ್ಲಿ ಸೂರ್ಯನು ಬರುವ ಯಾವುದೊಂದು ಸ್ಥಾನವೂ ಸ್ಥಿರವಿಲ್ಲದ ಕಾರಣ ಸಾಯನ ಉದಗ್ದಕ್ಷಿಣಾಯನಗಳು ನಿಯತವಾದವುಗಳಲ್ಲವೆಂಬ ಸಿದ್ಧಾಂತಪಕ್ಷವನ್ನೇ ಸ್ಪಷ್ಟಪಡಿಸಿರುತ್ತವೆ. ಮತ್ತು ಆ ವಚನಗಳು ನಾವು ಹಿಂದೆ ಆಸ್ತಿಕಪಂಚಾಂಗನಿರೂಪಣದ ೧೪ ನೆಯ ಪ್ರಶ್ನೆಯ ಉತ್ತರದಲ್ಲಿ ವಿವ

* ಇವರ ಗ್ರಂಥದ ಪುಟ ೩೫, ಪಂಕ್ತಿ ೧೬-೧೮ ನೋಡಿರಿ !

ರಿಸಿರುವಂತೆ ಸಾಯನ ಅಯನದಿನದಲ್ಲಿ ಛಾಯಾಪರಿವರ್ತನಾದಿಗಳು ಪ್ರತ್ಯಕ್ಷ ಸಂಭವಿಸುವ ನಿದರ್ಶನವನ್ನು ತೋರಿಸಿ ಅದರಿಂದ ಭಚಕ್ರಚಲನವನ್ನು ನಿರೂಪಿಸುವುದರ ಮೂಲಕ ನಿಯತಕಾಲದಲ್ಲಿಯೇ ಅಯನಪಶುಯಾಗವನ್ನು ವಿಧಿಸಿರುವ ಸೂತ್ರವಾಕ್ಯಕ್ಕೆ ಪೂರ್ವಪಕ್ಷವನ್ನು ಸಾಧಿಸಲಿಕ್ಕಾಗಿ ಹೇಳಿದ್ದಾಗಿದ್ದು ಮುಂದೆ ಅದನ್ನು ಪೂರ್ವಪಕ್ಷಮಾಡಿರುವುದರಿಂದಲೂ, ಸಾಯನಗಣನೆಯಿಂದ ನಿರೂಢಪಶುಯಾಗಮಾಡುವ ಶಿಷ್ಟಾಚಾರಪ್ರಸಿದ್ಧಿಯು ಸಹ ಇಲ್ಲವಾದುದರಿಂದಲೂ ಅವುಗಳಿಂದೆಲ್ಲ ಇವರ ಸಾಯನ ಅಯನದ ಸಮರ್ಥನೆಯಾಗುವುದಿಲ್ಲ. ಒಂದು ವೇಳೆ ಸಾಯನ ಅಯನದಿನವೇ ನಿರೂಢಪಶುಯಾಗಕ್ಕೆ ವಿಹಿತವಾದದ್ದೆಂದು ಇವರು ತಿಳಿದುಕೊಂಡರೂ ಕರ್ಮವಿಶೇಷದಲ್ಲಿ ನಿರೂಪಿಸಲ್ಪಟ್ಟಿರುವ ಕಾಲವು ಸರ್ವಕರ್ಮಗಳಲ್ಲಿಯೂ ಗ್ರಾಹ್ಯವೆಂದು ಹೇಗೂ ಆಗುವುದಿಲ್ಲ. ವೃಜ್ಮಂಡಲದಲ್ಲಿ ತೋರತಕ್ಕ ಸಾಯನ ಅಯನದಿನಗಳೂ, ಕರ್ಕಟ-ಮಕರ ಸಂಕ್ರಾಂತಿಸ್ಥಾನಗಳಿಂದ ಪರಿಗಣಿಸಲ್ಪಡತಕ್ಕ ಕರ್ಮಾರ್ಹವಾದ ದಕ್ಷಿಣೋತ್ತರಾಯಣಗಳೂ ಬೇರೆ ಬೇರೆಯಾಗಿರುವವೆಂದು ಈ ಹಿಂದೆ (೧೪ನೆಯ ಪ್ರಶ್ನೆಯ ಉತ್ತರದಲ್ಲಿ)ಯೇ ನಾವು ನಿರೂಪಿಸಿರುವುದರಿಂದ ಆ ಕುರಿತು ಇವರು ಬರೆದಿರುವುದೆಲ್ಲ ತೀರಾ ವ್ಯರ್ಥಪ್ರಲಾಪಗಳೇ ಆಗಿರುತ್ತವೆಂದು ಬೇರೆ ಹೇಳಬೇಕಾಗಿಲ್ಲ.

ಮುಂದಿನ ಪುಟ ೩೯–೪೧ರಲ್ಲಿಯ ಆರ್ಯಭಟ್ಟ, ಭಾಸ್ಕರಾಚಾರ್ಯ, ಗ್ರಹಲಾಘವಾದಿ ವಚನಗಳೆಲ್ಲ ನಾವು ಹಿಂದೆ ೧೪ ನೇ ಪ್ರಶ್ನೆಯ ಉತ್ತರದಲ್ಲಿ ಹೇಳಿರುವಂತೆ ದಿನಮಾನದ ಪರಮ ವೃದ್ಧಿ-ಕ್ಷಯಾದಿ ಸಮಯವನ್ನೂ ಕ್ರಾಂತಿ-ಪಲಭಾದಿಗಳನ್ನೂ ತಿಳಿಸಲಿಕ್ಕಾಗಿಯೇ ಹೇಳಿದ್ದೆಂಬುದು ಆ ವಚನಗಳಲ್ಲಿಯೇ ಸ್ಪಷ್ಟವಾಗಿ ಹೇಳಿರುವ '*ಅಯನಚರಾಪಮಲಗ್ನಾನಿ' 'ದ್ಯುದಲಭಾ ವಿಷುವದ್ದಿವಸೇಽಕ್ಷಭಾ' 'ಚರಪಲಯುತೋನಾಸ್ತು ಪಂಚೇಂದುನಾಡ್ಯಃ' 'ಗೋಲವಶೇನಾಪಕ್ರಮದಿಕ್' 'ತಸ್ಮಿನ್ದಿನೇ ಸಾಯನಭಾಗಭಾಸ್ವದುಕ್ತೇ' 'ಯಥೋತ್ತರಂ ರವಿರ್ಯಾತಿ ದಿನವೃದ್ಧಿಸ್ತಥಾಭವೇತ್' ಈ ಮೊದಲಾದ ವಾಕ್ಯಗಳಿಂದಲೇ ನಿಸ್ಸಂದೇಹವಾಗಿ ತಿಳಿಯುತ್ತಿರುವಾಗ ಮತ್ತು ಅವುಗಳಲ್ಲಿ ಕರ್ಮಾರ್ಹವಾದ ಅಯನವನ್ನು ಹೇಳುವ ವಿವಕ್ಷೆಯೇ ಇಲ್ಲದಿರುವಾಗ ಈ ವಚನಗಳೆಲ್ಲ ಸಾಯನ ಅಯನವೇ ಕರ್ಮಾರ್ಹವೆಂದು ಹೇಳುವ ಇವರ ಮಾತಿಗೆ ಸಮರ್ಥಕವೆಂದು ಹೇಳುವದು ತೀರಾ ವಿಸಂಗತವೇ ಸರಿ.

ಇನ್ನು ಪುಟ ೪೧ರ ಅಂತ್ಯದಲ್ಲಿ ಚಾಂದ್ರಾಯನಕಾಲಬದಲಾವಣೆಗೂ ಪ್ರಮಾಣವಚನಗಳು ಸಿಗುತ್ತವೆಂದು ಹೇಳಿ ಅದಕ್ಕಾಗಿ "ಮಾರ್ಗಶೀರ್ಷಾದಿಕೈಸ್ತ್ರಿಭಿರ್ಋತುಭಿಃ ಕಲ್ಪಿತಃ ಕಾಲಃ ಷಣ್ಮಾಸಾತ್ಮಕಮುತ್ತರಾಯ

* ಇಲ್ಲಿ ಅಯನವೆಂಬುದಕ್ಕೆ ಅಯನದೃಕ್ಸಂಸ್ಕಾರವೆಂದೂ ಅರ್ಥವಾಗುವುದು.

೩೦।" ಈ ಮೊದಲಾದ ವಚನಗಳನ್ನು ಕಾಣಿಸಿದ್ದಾರೆ. ಇಲ್ಲಿ ಇವರು ಈ ಚಾಂದ್ರಾಯನಪ್ರಸಂಗವನ್ನೆತ್ತಿಕೊಂಡಿರುವ ಉದ್ದೇಶವೇನೆಂಬುದು ಸರಿಯಾಗಿ ಸ್ಪಷ್ಟವಾಗುವುದಿಲ್ಲ. ಚಾಂದ್ರಾಯನ, ಮತ್ತು ಚಾಂದ್ರಋತುವಿನ ಲಕ್ಷಣವೇನೆಂಬುದನ್ನು ಕೂಡಾ ಇವರು ಸ್ಪಷ್ಟಪಡಿಸಿಲ್ಲ. ಇವರು ಕಾಣಿಸಿರುವ ವಚನಗಳಲ್ಲಿ ಎರಡೆರಡು ಚಾಂದ್ರಮಾಸಗಳಿಗೆ ಒಂದು ಋತುವೆಂದೂ, ಅಂತಹ ೩ ಋತುಗಳಿಗೆ ಒಂದು (ಚಾಂದ್ರ)ಅಯನವೆಂದೂ ಹೇಳಿರುವುದರಿಂದ ಆಪ್ರಕಾರ ಚಾಂದ್ರಾಯನದ ಆರಂಭವು ಯಾವುದೊಂದು ಚಾಂದ್ರಮಾಸ, ಋತುಗಳ ಆರಂಭದೊಟ್ಟಿಗೆ ಒಂದೇ ದಿನದಲ್ಲಿ (ಏಕಕಾಲದಲ್ಲಿ) ಆಗಬೇಕಾಗುತ್ತದೆ. ಇವರು ಈವರೆಗೆ ಚರ್ಚಿಸಿದ ಸೌರಾಯನವಂತೂ ನಿಯತವಾಗಿ ಯಾವುದೊಂದೇ ಚಾಂದ್ರಮಾಸದ ಆದಿಯಲ್ಲಿಯೇ ಆರಂಭಿಸುವುದು ತೀರ ಅಸಂಭವ. ಸೌರಾಯನದ ಅಪೇಕ್ಷೆಯಿಲ್ಲದೆ ಕೇವಲ ಸ್ವತಂತ್ರವಾದ ಚಾಂದ್ರಾಯನ, ಋತುಗಳನ್ನು ಕಲ್ಪಿಸುವಲ್ಲಿ ಅದಕ್ಕೂ, ಭಚಕ್ರಚಲನೆಗೂ ಸಂಬಂಧವಿಲ್ಲದಂತಾಗಿ ಅದರಿಂದ ಇವರು ' ಭಿನ್ನ-ಭಿನ್ನಚಾಂದ್ರಮಾಸಗಳಲ್ಲಿ ಚಾಂದ್ರಾಯನವು ಆರಂಭಿಸುತ್ತಿತ್ತೆ'ನ್ನಲಿಕ್ಕೆ ಆಧಾರವಾಗಿ ಕಾಣಿಸಿರುವ ವಚನಗಳೆಲ್ಲ ಕೇವಲ ಮತಭೇದವನ್ನು ಹೇಳತಕ್ಕವುಗಳೆಂದಿಷ್ಟೇ ಆಗುವುದಲ್ಲದೆ "ಭಚಕ್ರಚಲನದ ಮೂಲಕ ಆಯಾ ಕಾಲಕ್ಕೆ ಸರಿಯಾಗಿ ಅಯನಾರಂಭವು ಬದಲಾಯಿಸಲ್ಪಡುತ್ತಿತ್ತೆ"ಂಬ ಅವರ ಹೇಳಿಕೆಗೆ ಆ ವಚನಗಳಿಂದೇನೂ ಪ್ರಯೋಜನವಿಲ್ಲದಂತಾಗುವದು. ಇನ್ನು ಯಾವ ಚಾಂದ್ರಮಾಸದಲ್ಲಿ ಸೌರರೀತ್ಯಾ ಅಯನಾರಂಭವಾಗುವದೋ ಆ ಚಾಂದ್ರಮಾಸದ ಆರಂಭವೇ ಚಾಂದ್ರಋತುವಿಗೂ, ಚಾಂದ್ರಅಯನಕ್ಕೂ ಆರಂಭವೆಂದು ( ಚಾಂದ್ರಾಯನ-ಋತುಗಳ ಲಕ್ಷಣವನ್ನು ) ಇವರು ಕಲ್ಪಿಸುವುದಾದರೆ( ಇದರಿಂದ ಚಾಂದ್ರಾಯನ-ಋತುಗಳಿಗೂ, ಭಚಕ್ರಚಲನೆಗೂ ಪರಂಪರೆಯಿಂದ ಸಂಬಂಧವನ್ನು ಹೇಳಲಿಕ್ಕೆ ಬರುವಂತಿದ್ದರೂ) ಇವರ ನವೀನದೃಕ್ಪಂಚಾಂಗಕ್ಕೆ ಈ ಕಲ್ಪನೆಯು ಸಹ ಎಷ್ಟರಮಟ್ಟಿಗೂ ಕೂಡುವುದಿಲ್ಲ. ಯಾಕಂದರೆ— ಇವರ ದೃಕ್ಪಂಚಾಂಗದಂತೆ (ಸಾಯನ)ಉದಗಯನಾರಂಭವು ಕೆಲವು ವರ್ಷ ಮಾರ್ಗಶೀರ್ಷಮಾಸದಲ್ಲಿಯೂ, ಕೆಲವು ವರ್ಷ ಪೌಷಮಾಸದಲ್ಲಿಯೂ ಸಂಭವಿಸುತ್ತಿದ್ದು ಇವರ ಪಂಚಾಂಗದಲ್ಲಿ ಕಾಣಿಸುವ ಚಾಂದ್ರಋತುವನ್ನಾದರೂ ಆಯಾವರ್ಷಗಳಲ್ಲಿ ಪ್ರತ್ಯಕ್ಷಸಿದ್ಧವೆನಿಸುವ ಈ ಅಯನಾರಂಭಕ್ಕನುಸಾರವಾಗಿ ಮಾರ್ಗಶೀರ್ಷಮಾಸದಲ್ಲಾಗಲಿ, ಪೌಷಮಾಸದಲ್ಲಾಗಲಿ ಆರಂಭಿಸದೆ ಎಲ್ಲ ವರ್ಷಗಳ ಪಂಚಾಂಗಗಳಲ್ಲಿಯೂ ನಿಯತವಾಗಿ ಮಾರ್ಗಶೀರ್ಷಮಾಸದಲ್ಲಿಯೇ ( ಹೇಮಂತ ? ) ಋತುವಿನ ಆರಂಭವನ್ನು ಕಾಣಿಸುತ್ತಿರುವುದರಿಂದ ಇವರ ಈ ಕಲ್ಪನೆಯು ಸಹ ನಿರರ್ಥಕವಾಗಿದೆ. ಮತ್ತು ಉದಗಯನಾರಂಭದಲ್ಲಿಯೇ ಶಿಶಿರರ್ತುವಿನ ಆರಂಭವೆಂದು ಪ್ರತಿಪಾದಿಸಿರುವ ಇವರು ಚಾಂದ್ರ ಶಿಶಿರರ್ತುವನ್ನಾದರೂ ಚಾಂದ್ರ ಉದಗಯನಾ

ರಂಭದಲ್ಲಿಯೇ ಆರಂಭಿಸಬೇಕಾಗಿದೆ. ಮೇಲಾಗಿ ಇವರು ಈ ಚಾಂದ್ರಾಯನ ಕಾಲದ ಬದಲಾವಣೆಗೆ ಆಧಾರವಾಗಿ ಕಾಣಿಸಿರುವ ವಚನಗಳ ಆರ್ಷಮೂಲತ್ವವು ಆ ಗ್ರಂಥಗಳಲ್ಲಿ ಉಕ್ತವಾಗಿಲ್ಲವಾದುದರಿಂದಲೂ, ಒಂದು ವೇಳೆ ಈ ವಚನಗಳು ಸಮೂಲವೆಂದೇ ಮನ್ನಿಸುವದಾದರೂ " **ಮೀನಮೇಷಯೋರ್ಮೇಷವೃಷಯೋರ್ವಾ ವಸಂತಃ।** " ಎಂಬಂತೆ ಇವೆಲ್ಲ ಕಾಲಗಣನೆಯಲ್ಲಿ ಹೇಳಿರುವ ವೈಕಲ್ಪಿಕವಚನಗಳೆಂದು ತಿಳಿಯತಕ್ಕದ್ದಾಗಿರುವುದರಿಂದಲೂ, ಆ ವಚನಗಳಲ್ಲಿ ಚಾಂದ್ರಋತು, ಮತ್ತು ಅಯನಗಳು ಯಾವುದೊಂದು ಚಾಂದ್ರಮಾಸದ ಆದಿಯಲ್ಲಿಯೇ ಆರಂಭಿಸುತ್ತವೆಂಬ ಅರ್ಥವಿದ್ದು ಅದನ್ನು (ಇವರ ದೃಕ್ಪಂಚಾಂಗದಲ್ಲಿ ಮೇಲೆ ವಿವರಿಸಿರುವಂತೆ) ಇವರಾದರೂ ಮನ್ನಿಸುತ್ತಿಲ್ಲವಾದುದರಿಂದಲೂ, ಮತ್ತು ಈ ವಚನಗಳಲ್ಲಿ ಕರ್ಮಾರ್ಹವಾದ ಅಯನಗಳ ವಿಚಾರವೇ ಬಂದಿಲ್ಲವಾದುದರಿಂದಲೂ, ಚಾಂದ್ರಾಯನದ ವ್ಯವಹಾರವು ಕೇವಲ ಅಪ್ರಸಿದ್ಧವಾದುದರಿಂದಲೂ ಇಂತಹ ವಚನಗಳಿಂದ ಇವರ ದೃಕ್ಪಂಚಾಂಗದ ಸಮರ್ಥನೆಯಾಗಲಿ, ಅಯನಸಮರ್ಥನೆಯಾಗಲಿ ಹೇಗೂ ಆಗುವುದಿಲ್ಲ. ಇಷ್ಟೇ ಅಲ್ಲ; ೬ ಚಾಂದ್ರಮಾಸಗಳ ಪರಿಮಿತಿಯುಳ್ಳ ಚಾಂದ್ರಾಯನದಲ್ಲಿ ದಿನ-ರಾತ್ರಿಮಾನಗಳ ವೃದ್ಧಿ-ಕ್ಷಯದಿಂದಾಗಲಿ, ದಕ್ಷಿಣೋತ್ತರಗತಿಯಿಂದಾಗಲಿ, ಅಥವಾ ಬೇರೆ ಯಾವ ರೀತಿಯಿಂದಾದರೂ ಪ್ರತ್ಯಕ್ಷವೆಂಬ ಅಯನದ ಲಕ್ಷಣವನ್ನು ಕಲ್ಪಿಸಲಿಕ್ಕೆ ಹೇಗೂ ಶಕ್ಯವಿಲ್ಲವಾದುದರಿಂದ ಕರ್ಮಾರ್ಹವಾದ ಅಯನವು ಶಾಸ್ತ್ರವಚನಗಳಿಂದಲೇ ನಿರ್ಣಯವಾಗತಕ್ಕದ್ದಾಗಿದ್ದು ಪ್ರತ್ಯಕ್ಷದಿಂದ ಅದು ಸಿದ್ಧವಾಗತಕ್ಕದ್ದಲ್ಲವೆಂಬುದು ಈ ಚಾಂದ್ರಾಯನದ ನಿದರ್ಶನದಿಂದಲೇ ನಿರ್ವಿವಾದವಾಗಿ ಸಿದ್ಧವಾಗುತ್ತದೆ. ಹೀಗೆ ಯಾವರೀತಿಯಿಂದ ವಿಚಾರಿಸಿದರೂ ಇವರ ಅಯನಸಮರ್ಥನೆಯ ಪ್ರಸಂಗಕ್ಕೆ ಏನೂ ಸಂಬಂಧವಿಲ್ಲದ ಮೂಲತಃ ಬಾಧಕವೇ ಆಗಿರುವ ಈ ಚಾಂದ್ರಾಯನದ ಪ್ರಸಂಗವನ್ನು ಇವರಿಲ್ಲಿ ಎತ್ತಿದ್ದು ಇವರ ಅಧಿಕಪ್ರಸಂಗವೇ ಆಗಿರುತ್ತದೆ. ಇಂಥ ಅನರ್ಥಕವಾದ ವಿರುದ್ಧೋಪನ್ಯಾಸಗಳಿಂದ ಗ್ರಂಥದ ಪುಟಗಳನ್ನಷ್ಟು ಇವರು ಹೆಚ್ಚಿಸಿದ್ದಲ್ಲದೆ ಇವರ ಖಂಡನೆಯನ್ನು ಇವರೇ ಸಿದ್ಧಪಡಿಸಿಕೊಂಡಂತಾಗಿದೆ.

ಹೀಗೆ ಇವರು ತಮ್ಮ ಅಯನಸಮರ್ಥನೆಯ ಬಗ್ಗೆ ಕಾಣಿಸಿರುವ ವಿಷಯಗಳನ್ನೆಲ್ಲ ಆಮೂಲಾಗ್ರವಾಗಿ ವಿಚಾರಿಸಿದಲ್ಲಿ ಈ ಖಂಡನೆಯ ಆದಿಯಲ್ಲಿಯೇ ನಾವು ಹೇಳಿರುವಂತೆ ಸಾಮಾನ್ಯಜನರಿಗೂ ಸಹ ಸುಲಭವಾಗಿ ತಿಳಿಯಬಹುದಾದ ಅನೇಕ ತರದ ಪ್ರಮಾದ, ವಿರೋಧ, ವಿಕಲ್ಪ, ವಿತಂಡ, ಸ್ವವ್ಯಾಹತಿ, ವಿಸಂಗತಿ, ನಿರ್ಮೂಲತ್ವ, ಶಾಸ್ತ್ರಮರ್ಯಾದಾಹೀನತ್ವಾದಿ ಬಹುದೋಷಗಳಿಂದ ತುಂಬಿರುವ ಅಸಂಬದ್ಧಪ್ರಲಾಪಗಳ ಕಂತೆಯೇ ಇದಾಗಿದ್ದು ಇದರಲ್ಲಿ ತಿಲಾಂಶವಾದರೂ ಹುರುಳಿಲ್ಲವೆಂದು ಸ್ವಯಂ ಸಿದ್ಧವಾಗುತ್ತಿರುವಲ್ಲಿ, ಇವುಗಳಿಂದೆಲ್ಲ ಯಾವಾಗಲೂ ಜಲಿಸುತ್ತಲೇ ಇರುವ ಸ್ವಭಾವದ ಇವರ

(ಸಾಯನ)ಅಯನವೇ ರೂಢಿಯಲ್ಲಿ ಬಂದದ್ದೆಂತ ಸಿದ್ಧವಾಗುತ್ತದೆಂದು ಇವರು ಹೇಳುವುದು ಕೇವಲ ಅವಿಚಾರದ ಪರಮಾವಧಿಯೆಂದು ಬೇರೆ ಹೇಳಬೇಕಾಗಿಲ್ಲ. ಯಾಕಂದರೆ— ಪಾರಂಪರ್ಯದಿಂದ ರೂಢಿಯಲ್ಲಿದ್ದವು ( ನಿರಯನ) ಮಕರ–ಕರ್ಕಟಸಂಕ್ರಾಂತ್ಯವಧಿಕ ಅಯನಗಳೇ ಸರಿಯೆಂಬುದು ಕಳೆದ ಶುಕ್ಲ ಸಂವತ್ಸರದ ವರೆಗಿನ ಇವರ ಪಂಚಾಂಗಗಳಿಂದಲೇ ಪ್ರತ್ಯಕ್ಷವಾಗಿ ವ್ಯಕ್ತಪಡುತ್ತಿರುವಾಗ ಅದೇ ಮರುವರ್ಷ ಅಂದರೆ ಪ್ರಮೋದ ಸಂವತ್ಸರದಲ್ಲಿ ಒಂದೇ ಬಾರಿ ೨೩ ದಿನಗಳಷ್ಟು ಬದಲಾಯಿಸಿದ್ದು ಪರಂಪರೆಯಿಂದ ಬಂದ ಅಯನವೋ ? ಅಥವಾ ಇವರ ಸ್ವಬುದ್ಧಿಯ ಅಯನವೋ ? ಎಂಬುದು ಎಲ್ಲರಿಗೂ ಸಹಜವಾಗಿ ತಿಳಿಯತಕ್ಕದ್ದಾಗಿದೆ. ಈ ಪ್ರಕಾರ ನಾವಿಲ್ಲಿ ಕಾಣಿಸಿರುವ ವಿಷಯಗಳೆಲ್ಲ ಸಹಜವಾಗಿ ವಿಚಾರಿಸಿದರೆ ಇವರಿಗೂ ತಿಳಿಯಬಹುದಾಗಿದ್ದರೂ ದುಡುಕಿನಿಂದ ಆಗಿಹೋದ ಸ್ವಪ್ರವೃತ್ತಿಯನ್ನು ಸ್ವಾಭಿಮಾನಕ್ಕಾಗಿ ಸಮರ್ಥಿಸಲಿಕ್ಕೆ ತೊಡಗಿರುವ ಇವರ ವಿಚಾರಶಕ್ತಿಯು ಸ್ವಕೃತ್ಯಾಭಿನಿವೇಶದಿಂದ ಕುಂಠಿತವಾದದ್ದರಿಂದ ತಿಳಿದೂ ತಿಳಿಯದಂತಾಗಿ ಇವರ ವಿಚಾರವೆಲ್ಲ ಅವಿಚಾರವಾಗಿ ಪರಿಣಮಿಸಿರುವದು. ಆದುದರಿಂದ ಇಂತಹ ಅವಿಚಾರದ ಬರವಣಿಗೆಗಳಿಂದೆಲ್ಲ ಎಂದಿಗೂ ಇವರ ಅಯನಸಮರ್ಥನೆಯಾಗುವುದಿಲ್ಲ. ಮತ್ತು **ಅದು ಪಾರಂಪರ್ಯದಿಂದ ರೂಢಿಯಲ್ಲಿ ಬಂದದ್ದೆಂತಲೂ ಸಿದ್ಧವಾಗುವುದಿಲ್ಲ; ಆಗಲಿಲ್ಲ; ಆಗುವಂತೆಯೂ ಇಲ್ಲ.**



## ೩. "ಶಾಸ್ತ್ರವಿಹಿತಪಂಚಾಂಗನಿರ್ಣಯದ ಖಂಡನೆ"ಯ ಪ್ರತಿಖಂಡನೆಯು.

ಪುಟ ೬೨ ರಲ್ಲಿ "ಶಾಸ್ತ್ರವಿಹಿತಪಂಚಾಂಗನಿರ್ಣಯ"ವೆಂಬ (ಈ ಮುಂಚೆ ನಮ್ಮ ಕಡೆಯಿಂದ ಪ್ರಕಟವಾದ) ಗ್ರಂಥದ 'ಖಂಡನೆ' ಎಂದು ಹೇಳಿಕೊಂಡು ಅದರಿಂದ ಆ ಮುಂದಿನ ಪುಟಗಳನ್ನಷ್ಟು ತುಂಬಿಸಿದ್ದಾರೆ. ಆದರೆ ಆ ಭಾಗಕ್ಕೆ 'ಖಂಡನೆ' ಎಂಬ ಹೆಸರನ್ನಷ್ಟೇ ಕೊಟ್ಟಿರುವುದಲ್ಲದೆ ಅದ ರಲ್ಲಿ ಕಾಣಿಸಿರುವ ಮೂಲವಚನಗಳೊಂದೂ ಶಾಸ್ತ್ರವಿಹಿತಪಂಚಾಂಗನಿರ್ಣ ಯವನ್ನು ಖಂಡಿಸತಕ್ಕವುಗಳಲ್ಲ. ಅಷ್ಟೇ ಅಲ್ಲ; ಅವೆಲ್ಲವೂ ಶಾಸ್ತ್ರನಿರ್ಣಯವ ನ್ನು ಸಮರ್ಥಿಸತಕ್ಕವುಗಳೇ ಆಗಿವೆ. ಆ ಭಾಗದಲ್ಲಿ ಇವರು ತುಂಡು-ತುಣುಕು ಗಳಾಗಿ ಕಾಣಿಸಿರುವ ಆಯಾ ಮೂಲವಚನಗಳನ್ನು ಪೂರ್ವಾಪರಸಂಬಂಧಸ ಹಿತವಾಗಿ ವಿಚಾರಮಾಡಿದರೆ ಅವೆಲ್ಲ ಇವರ ಖಂಡನೆಗೆ ಏನೂ ಸಂಬಂಧವಿಲ್ಲ ವ ಮತ್ತು ತೀರ ವಿರುದ್ಧವಾದ ವಚನಗಳೆಂದೂ, ಖಂಡನೆಗೆಂದು ಬರೆದಿರುವ ಇವರ ಸ್ವಂತ ಮಾತುಗಳೆಲ್ಲ ಕೇವಲ ವಿಸಂಗತಕಲ್ಪನೆಗಳೇ ಆಗಿರುತ್ತವೆಂ ದೂ ಅಭಿಜ್ಞರಿಗೆಲ್ಲ ತಾನಾಗಿ ತಿಳಿಯುವಂತಿದೆ. ಆದುದರಿಂದ ಇವರು ಕಲ್ಪಿಸಿ ಕೊಂಡಿರುವ ಆ 'ಖಂಡನೆ'ಎಂಬುದರಲ್ಲಿ ಏನೂ ಹುರುಳಿಲ್ಲವೆಂದು ಬೇರೆ ಹೇ ಳಬೇಕಾಗಿಲ್ಲ. **ಹುಟ್ಟುವ ಮೊದಲೇ ಸತ್ತಿರುವ ಶಿಶುವಿನಂತೆ** ಮೂಲತಃ ಅಬ ಲವಾಗಿರುವ ಅಂತಹ **'ಅರ್ಥಹೀನಖಂಡನೆ'**ಯನ್ನು ಕುರಿತು ಪ್ರತಿಖಂಡನೆ ಯನ್ನು ಬರೆಯುವುದೆಂದರೆ ಪಿಷ್ಟಪೇಷಣದಂತೆ ಕೇವಲ ವ್ಯರ್ಥಶ್ರಮವೇ ಸರಿ. ಅದರಿಂದ ವಾಚಕರಿಗೂ ಕೂಡ ಶ್ರಮಕೊಟ್ಟು ವ್ಯರ್ಥವಾಗಿ ಕಾಲಹರಣ ಮಾಡುವ ಇಚ್ಛೆಯೂ ನಮಗಿರುವುದಿಲ್ಲ. ಈವರೆಗೆ ಶಾಸ್ತ್ರರೀತಿಯಂತೆ ನಾವು ಸಕಾರಣವಾಗಿ ಪ್ರತಿಪಾದಿಸಿರುವ ವಿಷಯಗಳನ್ನೆಲ್ಲ ಚನ್ನಾಗಿ ಅರಿತುಕೊಂಡಿ ರುವ ಸುವಿಚಾರಿಗಳಾದ ವಾಚಕರಿಗೆ **ಸಿದ್ಧಾಂತಪಂಚಾಂಗವೇ ಶಾಸ್ತ್ರವಿಹಿತ** ವಾದುದೆಂದೂ, **ದೃಕ್ಪಂಚಾಂಗವು ಸರ್ವಥಾ ಅಪ್ರಮಾಣವಾಗಿರುವುದೆಂದೂ** ಸಹಜವಾಗಿ ಗೊತ್ತಾಗುತ್ತದೆ. ಆದರೂ ಇವರ ಆ **"ಕಲ್ಪಿತಖಂಡನೆ"**ಯಿಂದ 'ಶಾಸ್ತ್ರವಿಹಿತಪಂಚಾಂಗನಿರ್ಣಯ'ವು ಖಂಡಿಸಲ್ಪಟ್ಟಿರುವುದೆಂಬ ಆಭಾಸವು ಸಹ ಯಾರಿಗೂ ಉಂಟಾಗಬಾರದೆಂದು ಆ ಖಂಡನೆಯ **ಪ್ರತಿಖಂಡನೆಯನ್ನು** ದಿಗ್ದರ್ಶನಮಾತ್ರವಾಗಿ ಸಂಕ್ಷೇಪಿಸಿ ಇಲ್ಲಿ ಬರೆಯುವೆವು.

'ಶಾಸ್ತ್ರವಿಹಿತಪಂಚಾಂಗನಿರ್ಣಯ'ದ ಪುಟ.೩ ರಲ್ಲಿ ಅಯನವು ಸೂರ್ಯಗತಿಯನ್ನು ಅವಲಂಬಿಸಿ ಶ್ರುತಿಯಲ್ಲಿ ಹೇಳಲ್ಪಟ್ಟಿರುವುದರಿಂದ ಅದು ಸೌರ (ಅರ್ಥಾತ್ ಚಾಂದ್ರಾದಿಮಾಸಗಳಿಗೆ ಸಂಬಂಧಿಸಿದ್ದಲ್ಲ)ವೆಂದು ಹೇಳಿ ದ್ದು ಅದಕ್ಕೆ ಆಧಾರವಾಗಿ '**ತಸ್ಮಾದಾದಿತ್ಯಃ ಷಣ್ಮಾಸೋ ದಕ್ಷಿಣೇನೈತಿ ಷಡು**

ತ್ರೇಣ ' ಎಂಬ ಶ್ರುತಿವಚನವನ್ನು ಕಾಣಿಸಿದೆ. ಅದನ್ನು ಇವರು ಖಂಡಿಸ ಹೋಗಿ ತಮ್ಮ ಗ್ರಂಥದ ಪುಟ ೪೩ ರಲ್ಲಿ 'ಅದು ಸಾಯನ ಸೌರಮಾನವನ್ನು ಪ್ರತಿಪಾದಿಸುವುದು' ಎಂದಿದ್ದಾರೆ. ಇದೇ ಇವರ ಖಂಡನೆ. ಇದರಿಂದ ಇವರು ಯಾವುದನ್ನು ಖಂಡಿಸಿದರು ? ಸೌರವೆಂದದ್ದನ್ನು ಸಾಯನವೆಂದು ವಿಕಲ್ಪಿಸಿದರೆ ಅದನ್ನು ಖಂಡಿಸಿದಂತಾಯಿತೇ ? ಅಯನವು ಇವರ ಕಲ್ಪನೆಯಂತೆ ಸಾಯನವೆಂತ ಕಲ್ಪಿಸಿದರೂ ಅದು ಸೌರವಲ್ಲವೆಂತಾಗುವುದೋ ? 'ಪದ್ಮಪತ್ರಮಿತ್ಯುಕ್ತೇ ಸದ್ಮಸತ್ರಮಿತ್ಯಾಹ' ಎಂಬಂತೆ ಪರರು ಹೇಳಿದ ವಿಷಯವೇನು ? ಅದಕ್ಕೆ ತಾವು ಹೇಳಬೇಕಾದದ್ದೇನು ? ಅದರಲ್ಲಿ ಖಂಡಿಸತಕ್ಕದ್ದೇನು ? ಎಂಬಿಷ್ಟನ್ನು ಸಹ ವಿಚಾರಿಸದೆ ಅಲ್ಲಿಂದಿಲ್ಲಿಗೂ 'ಸಾಯನ' 'ಸಾಯನ'ವೆಂಜೇ ಇವರು ಹಂಬಲಿಸುವುದನ್ನು ನೋಡಿದರೆ ಸಾಯನಕಲ್ಪನೆಯಲ್ಲಿಯೇ ಇವರ ಬುದ್ಧಿವುತ್ತಿಯೆಲ್ಲ ಲೀನವಾಗಿದೆಯೆಂದು ಸ್ಪಷ್ಟವಾಗುವುದು. ಆದುದರಿಂದ ಇವರು ತಮ್ಮ 'ಖಂಡನೆ' ಎಂಬುದನ್ನೆಲ್ಲ ಇಂತಹ ಅರ್ಥಹೀನಕಲ್ಪನೆಗಳಿಂದಲೇ ತುಂಬಿಸಿದ್ದಾಗಿದೆ. ಇಷ್ಟಾಗಿ ಮೇಷಾದಿಸಂಕ್ರಾಂತಿಗಳೆಲ್ಲವೂ ನಿರಯನಗಳೇ ಆಗಿರುತ್ತವೆಂಬುದನ್ನು ಇವರೂ ಸಹ ಮನ್ನಿಸುತ್ತಾರಾದ್ದರಿಂದ * ಅದರಂತೆ 'ಸಂಕ್ರಾಂತ್ಯಾ ಸೌರ ಉಚ್ಯತೇ |' 'ಸೌರೋ ರಾಶಿಷು ಸೂರ್ಯಸಂಕ್ರಮಣತಃ |' ಇತ್ಯಾದಿ ಶಾಸ್ತ್ರವಚನಗಳಿಂದ ಸೌರಮಾಸವೂ ಸಹ ನಿರಯನವೆಂದೇ ಸಿದ್ಧವಾಗುತ್ತಿದ್ದು, ಅದು ಇವರಿಗಾದರೂ ಸಮ್ಮತವೇ ಆಗಿರುತ್ತದೆಂಬುದು ಇವರ ದೃಕ್ಪಂಚಾಂಗದಿಂದಲೂ ಸ್ಪಷ್ಟವಾಗುತ್ತದೆ. ಆದುದರಿಂದ 'ತಸ್ಮಾದಾದಿತ್ಯಃ ' ಎಂಬ ಶ್ರುತಿಯಲ್ಲಿ ' ಷಣ್ಮಾಸಃ ' ಎಂದಿರುವುದಕ್ಕೆ ೬ ನಿರಯನಸೌರ ಮಾಸಗಳೆಂದೇ ಅರ್ಥವೆಂದು ನಿರ್ವಿವಾದವಾಗಿ ಸಿದ್ಧವಾಗುತ್ತದೆ. ಹೀಗಿರುವಲ್ಲಿ ಅದಕ್ಕೆ ಇವರು 'ಸಾಯನಸೌರಮಾನ'ವೆಂದು ವಿಕಲ್ಪಿಸಿದ್ದು ಅದು ಸಂಕ್ರಾಂತಿಗಳೂ, ಸೌರಮಾಸಗಳೂ ನಿರಯನಗಳೇ ಆಗಿರುತ್ತವೆಂದು ಇವರು ಮನ್ನಿಸಿರುವುದಕ್ಕೆ ತೀರ ಅಸಂಗತವೂ, ವಿರುದ್ಧವೂ ಆಗಿರುತ್ತದೆ. ಇನ್ನು ತಮ್ಮ 'ಅಯನಸಮರ್ಥನೆ'ಯಲ್ಲಿ ವಿವರಿಸಿದ್ದೇವೆಂದು ಇವರು ಹೇಳುವುದನ್ನೆಲ್ಲ ಈ ಹಿಂದೆ ಅದರ ಖಂಡನೆಯಲ್ಲಿಯೇ ನಾವು ಸಕಾರಣವಾಗಿ ಖಂಡಿಸಿರುತ್ತೇವಾದ್ದರಿಂದ ಪುನಃ ಇಲ್ಲಿ ಖಂಡಿಸಬೇಕಾದ್ದಿರುವುದಿಲ್ಲ.

ಪುಟ ೪೩ ರಲ್ಲಿ " ಶ್ರೌತಸ್ಮಾರ್ತಕರ್ಮಾನುಷ್ಠಾನೇ ತು ಮಕರಕರ್ಕಟಸಂಕ್ರಾಂತ್ಯಾದಿಕ ವಿಷ್ವಾಯನದ್ವಯಕಾಲಃ | " ಇತ್ಯಾದಿ ಕಾಲಮಾಧವ, ವೈದ್ಯನಾಥೀಯ, ಸ್ಮೃತಿರತ್ನಾಕರಗಳ ನಿರ್ಣಯಗಳು ತಮ್ಮ ಸಾಯನ ಅಯನಕ್ಕೆ ಸಾಧಕವಾದ ಸಾಯನ ಮಕರ-ಕರ್ಕಸಂಕ್ರಾಂತಿಗಳನ್ನೇ ಬೋಧಿಸುತ್ತವೆಂದು ಬರೆದಿದ್ದಾರೆ. ಆದರೆ ಆ ಕಾಲಮಾಧವಾದಿ ಗ್ರಂಥಗಳಲ್ಲಿ ಇವರು

---

* ಇವರ ಗ್ರಂಥದ ಪುಟ ೪೮, ಪಂಕ್ತಿ ೧೯-೨೦ ಮುಂತಾದ ಕಡೆಗಳಲ್ಲಿಯೂ, ಇವರ ಪಂಚಾಂಗಗಳಲ್ಲಿಯೂ ನೋಡಿರಿ !

ಕಲ್ಪಿಸಿಕೊಂಡಿರುವ 'ಸಾಯನಸಂಕ್ರಾಂತಿ' 'ಸಾಯನಮಕರ' ಈ ಮುಂತಾದ ಸಾಯನಾರ್ಥದ ಶಬ್ದವನ್ನು ಸಹ ಪ್ರಯೋಗಿಸಿರದೆ ಸರ್ವತ್ರ ನಿರಯನ ಸಂಕ್ರಾಂತಿಗಳೇ ಹೇಳಲ್ಪಟ್ಟಿರುವವೆಂದು ಆಯಾ ಗ್ರಂಥಗಳಲ್ಲಿ ಹೇಳಿರುವ ಸಂಕ್ರಾಂತಿನಿರ್ಣಯದಿಂದಲೇ ಸ್ಪಷ್ಟವಾಗುತ್ತದೆ. ಮತ್ತು ಸಂಕ್ರಾಂತಿಗಳ ಸಂಖ್ಯೆಯನ್ನೂ, ವಿಷುವಾದಿಸಂಕೇತಗಳನ್ನೂ ನಿರೂಪಿಸುವಾಗ '**ದ್ವಾದಶೈವ ಸಮಾಖ್ಯಾತಾಃ।**' '**ಸಂಕ್ರಮಾ ದ್ವಾದಶ ಸ್ಮೃತಾಃ।**' ಈ ಮೊದಲಾದ ದೇವೀಪುರಾಣ, ವೃದ್ಧವಸಿಷ್ಠಾದಿ ವಚನಗಳನ್ನು ಕಾಣಿಸಿ ಸಂಕ್ರಾಂತಿಗಳು ಒಟ್ಟಿಗೆ ಹನ್ನೆರಡೇ ಸರಿಯೆಂದೂ*, ಮೇಷಾದಿ (ನಿರಯನ) ಸಂಕ್ರಾಂತಿಗಳಿಗೇನೇ ವಿಷುವಾದಿ ಸಂಕೇತಗಳು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿವೆ ಎಂದೂ ಕಾಲಮಾಧವದಲ್ಲಿಯೇ ಅತಿಸ್ಪಷ್ಟವಾಗಿ ಹೇಳಿದ್ದು ಎಲ್ಲ ನಿರ್ಣಯಗ್ರಂಥಗಳಲ್ಲಿಯೂ ಹೀಗೆಯೇ ನಿರ್ಣಯಿಸಲ್ಪಟ್ಟಿದೆ. ಇದರಿಂದ ನಿರ್ಣಯಗ್ರಂಥಗಳಲ್ಲಿ '**ಕರ್ಕಟಮಕರಾವಯನಸಂಜ್ಞಕೌ**' ಎಂಬ ಮಾಧವೋಕ್ತಿಯಂತೆ "**ನಿರಯನಮಕರಕರ್ಕಟಸಂಕ್ರಾಂತಿಗಳೇ ಆಯನಸಂಕ್ರಾಂತಿಗಳೆಂದು ಬೋಧಿಸಲ್ಪಟ್ಟಿವೆ** ಎಂದು ಸ್ಪಷ್ಟವಾಗುತ್ತದೆ.

ಇದೂ ಅಲ್ಲದೆ ಅದೇ ಕಾಲಮಾಧವಾದಿ ಗ್ರಂಥಗಳಲ್ಲಿ ದಕ್ಷಿಣೋತ್ತರಾಯಣಾರಂಭಗಳ ಪುಣ್ಯಕಾಲ ವಿಶೇಷವನ್ನು ನಿರೂಪಿಸುವಾಗ "**ಅತೀತಾನಾಗತೇ ಪುಣ್ಯೇ ದ್ವೇ ಉದಗ್ದಕ್ಷಿಣಾಯನೇ। ತ್ರಿಂಶತ್ಕರ್ಕಟಕೇ ನಾಡ್ಯೋ ಮಕರೇ ವಿಂಶತಿಃ ಸ್ಮೃತಾಃ॥**" ಈ ಮುಂತಾದ ವಚನಗಳನ್ನು ಕಾಣಿಸಿ, ದಕ್ಷಿಣೋತ್ತರಾಯಣಾರಂಭ ಸಂಕ್ರಾಂತಿಗಳೆಂದರೆ ಕರ್ಕಟ ಮಕರ ಸಂಕ್ರಾಂತಿಗಳೆಂದೇ ಹೇಳಿದ್ದು ಆ ಪೈಕಿ **ಉತ್ತರಾಯಣಾರಂಭದಲ್ಲಿ ಸಂಕ್ರಾಂತಿಯ ನಂತರದ ಕಾಲವೇ ವಿಶಿಷ್ಟ ಪುಣ್ಯಕಾಲವೆಂದು** ನಿರ್ಣಯಿಸಲ್ಪಟ್ಟಿದೆ. ಇಲ್ಲಿ ಹೇಳಿರುವ ಕರ್ಕಟ ಮಕರಗಳು ಸಹ ಸಾಯನಗಳೆಂದು ವಿಕಲ್ಪಿಸಲಿಕ್ಕೆ ಅವಕಾಶವಿರುವುದಿಲ್ಲ. ಯಾಕಂದರೆ:— ಆ ಗ್ರಂಥಗಳಲ್ಲಿ ಸಾಯನರಾಶಿ ಪ್ರವೇಶ ದಿನಗಳನ್ನು '**ಮೇಷಾಯನ**' '**ವೃಷಾಯನ**' ಮುಂತಾದ ಹೆಸರಿನಿಂದ ಮುಂದೆ ಪ್ರತ್ಯೇಕವಾಗಿ ಹೇಳಿದ್ದು, ಅಲ್ಲಿ:— "**ಅಯನೇ ವಿಂಶತಿಃ ಪೂರ್ವಾ ಮಕರೇ ವಿಂಶತಿಃ ಪರಾ।**" ಅಂದರೆ ಮಕರಾಯನದಲ್ಲಿ ಅರ್ಥಾತ್ ಇವರು ಹೇಳುವ '**ಸಾಯನ ಮಕರ ಸಂಕ್ರಾಂತಿಯಲ್ಲಿ ಪೂರ್ವಕಾಲವೇ ಪುಣ್ಯ; ನಿರಯನ ಮಕರ ಸಂಕ್ರಾಂತಿಯಲ್ಲಿ ಉತ್ತರಕಾಲವೇ ಪುಣ್ಯ**'ವೆಂಬ, ಸಾಯನ ನಿರಯನಗಳಿಗೆ ಪ್ರತ್ಯೇಕವಾಗಿರುವ ಪುಣ್ಯಕಾಲ ನಿರ್ಣಯವೂ ಹೇಳಲ್ಪ

---

* ಇವರ ಕಲ್ಪನೆಯಂತೆ ವಿಷುವಾದಿ ಸಂಕ್ರಾಂತಿಗಳು ಸಾಯನಗಳೆಂದೂ, ಮೇಷಾದಿ ಸಂಕ್ರಾಂತಿಗಳು ನಿರಯನಗಳೆಂದೂ ಕಲ್ಪಿಸಿದರೆ ಒಟ್ಟಿಗೆ ೨೪ ಸಂಕ್ರಾಂತಿಗಳಾಗುವುವು ಇವರ ಗ್ರಂಥದ ಪುಟ ೪೫, ಪಂಕ್ತಿ ೧೭ ರಲ್ಲಿಯೂ, ಪುಟ ೩೩ ರಲ್ಲಿ ಕೊಟ್ಟಿರುವ ಭಚಕ್ರದ ಆಕೃತಿಯಲ್ಲಿಯೂ ನೋಡಿರಿ !

ಟ್ಟಿದೆ. ಈ ನಿರ್ಣಯದಂತೆ ಹಿಂದೆ ನಿರೂಪಿಸಿರುವ ಉತ್ತರಾಯಣಾರಂಭದಲ್ಲಿ ಉತ್ತರಕಾಲವೇ ಪುಣ್ಯವೆಂಬ **ಶಾಸ್ತ್ರ ನಿರ್ಣಯವು ನಿರಯನ ಮಕರ ಸಂಕ್ರಾಂತಿಗೆ ಮಾತ್ರ ಹೊಂದುವದಲ್ಲದೆ** ಇವರು ಕಲ್ಪಿಸಿಕೊಂಡಿರುವ **ಸಾಯನ ಮಕರ ಸಂಕ್ರಾಂತಿಗೆ ಸರ್ವಥಾ ಹೊಂದುವದಿಲ್ಲ**ವೆಂದು ಎಲ್ಲರಿಗೂ ತಿಳಿಯುವಂತಿದೆ. ಆದಕಾರಣ ಈ ಮುಂತಾದ ಹಲವು ವಿಷಯಗಳಿಂದ ಕಾಲಮಾಧವಾದಿಗಳಲ್ಲಿ ಕರ್ಮಾರ್ಹವಾದ ಅಯನ ನಿರ್ಣಯಕ್ಕಾಗಿ ಹೇಳಿದ ವಚನವು ಸಾಯನ ಮಕರ-ಕರ್ಕ ಸಂಕ್ರಾಂತಿಗಳನ್ನೇ ಬೋಧಿಸುತ್ತದೆಂಬ ಇವರ ಕಲ್ಪನೆಯು ಆಯಾ ಗ್ರಂಥಗಳ ತಾತ್ಪರ್ಯಕ್ಕೂ, ನಿರ್ಣಯಕ್ಕೂ ತೀರ ವಿರುದ್ಧವಾಗಿರುತ್ತದೆಂದು ಅದೇ ಗ್ರಂಥಗಳಿಂದಲೇ ಸಿದ್ಧವಾಗುತ್ತದೆ. ಇಷ್ಟೇ ಅಲ್ಲ; ನಿರಯನ ಮೇಷಾದಿ ಸಂಕ್ರಾಂತಿಗಳಿಗೇನೇ ವಿಷುವಾದಿ ಸಂಕೇತಗಳಿರುತ್ತವೆಂದೂ, ನಿರಯನ ಮಕರ-ಕರ್ಕಟ ಸಂಕ್ರಾಂತಿಗಳಿಂದಲೇ ಅಯನಾರಂಭವನ್ನು ಪರಿಗ್ರಹಿಸತಕ್ಕದ್ದೆಂದೂ ಆ ಗ್ರಂಥಗಳಲ್ಲಿ ಸ್ಪಷ್ಟವಾಗಿರುವುದರಿಂದ ಇವರ **ಸಾಯನ ವಿಷುವಾದಿ ಕಲ್ಪನೆಯೂ, ಅಯನ ಕಲ್ಪನೆಯೂ ಸರ್ವಥಾ ಅಶಾಸ್ತ್ರೀಯ**ವಾದ ವಿಪರೀತ ಕಲ್ಪನೆಯೆಂದೇ ಸಿದ್ಧಾಂತವಾಗುತ್ತದೆ.

**'ಸೌರ್ಯಂತು ಸೂರ್ಯಸಂಭೂತಂ।'** ಇತ್ಯಾದಿ ಗರ್ಗವಚನದಿಂದ ನಿರಯನ ಅಯನವೇ ಸಿದ್ಧಾಂತವಾಗುವದೆಂದೂ, ಅದಕ್ಕೆ ಸಾಯನಪರವಾಗಿ ಅರ್ಥಮಾಡಿದರೂ ಇವರ ದೃಕ್ಪಂಚಾಗದ ಸಮರ್ಥನೆಯಾಗುವುದಿಲ್ಲೆಂದೂ ಹಿಂದೆ ಅಯನ ಸಮರ್ಥನೆಯ ಖಂಡನೆಯಲ್ಲಿಯೇ ವಿವರಿಸಿರುತ್ತೇವೆ. **'ವರ್ಷಾಯನರ್ತು'** ಎಂಬ ವಚನವು ಶಾಸ್ತ್ರದಿಂದಲೂ, ನ್ಯಾಯದಿಂದಲೂ, ಪದಸನ್ನಿಧಿಯಿಂದಲೂ ನಿರಯನ ಅಯನವನ್ನೇ ದೃಢಪಡಿಸುತ್ತದೆ. ಸಿದ್ಧಾಂತಶಿರೋಮಣಿಯಲ್ಲಿ ಕರ್ಮಾರ್ಹವಾದ ಅಯನ ನಿರ್ಣಯವನ್ನು ಸಾಯನ ರವಿಗತಿಯಿಂದ ಹೇಳಿದ್ದಿಲ್ಲ. **'ರವೇಶ್ಚಕ್ರಭೋಗೋऽರ್ಕವರ್ಷಂ ಪ್ರದಿಷ್ಟಂ।'** ಎಂಬ ವಚನದಲ್ಲಿ ಚಕ್ರಭೋಗ ಅಂದರೆ ನಿರಯನಸೌರವರ್ಷವೇ ದೇವಾಸುರರ ಅಹೋರಾತ್ರವೆಂದು ಹೇಳಿದ್ದು ಆ ಅಹೋರಾತ್ರ ವಿಭಾಗವನ್ನು ಮಾತ್ರ ಇಲ್ಲಿ ಹೇಳಿಲ್ಲವಾದ್ದರಿಂದ ಶಾಸ್ತ್ರತಃ ನಿರಯನ ಅಯನವೆಂದೇ ಸಿದ್ಧವಾಗುವುದು. **'ವಿಷುವದ್ವೃತ್ತಂ ದ್ಯುಸದಾಂ।'** ಇತ್ಯಾದಿ ವಚನಗಳು ಸೂರ್ಯನ ಉದಗ್ದಕ್ಷಿಣಗೋಲಸ್ಥಿತಿಯನ್ನೇ ದೇವಾಸುರರ ದಿನರಾತ್ರಿಕ್ರಮದಿಂದ ಹೇಳಿದ್ದು ಇವರ ಸಾಯನ ಉದಗಯನಾರಂಭದಲ್ಲಿಯೂ ಸಹ ಸೂರ್ಯನ ಉದಗ್ಗೋಲಸ್ಥಿತಿಯು ಘಟಿಸುವದಿಲ್ಲವಾದುದರಿಂದ ಇದು ಧರ್ಮಕರ್ಮಾನುಷ್ಠಾನಕ್ಕಾಗಿ ಹೇಳಿದ ವಚನವಲ್ಲವೆಂದು ಸಾಯನ ಅಯನವಾದಿಗಳಾದ ಇವರಾದರೂ ಒಪ್ಪಲೇಬೇಕಾಗಿದೆ.

ಪುಟ ೪೪ ರಲ್ಲಿ **'ಉದಗಯನಂ ಮಕರಾದೌ।'** ಇತ್ಯಾದಿ ವರಾಹಮಿಹಿರರ ವಚನಗಳು ಶೂನ್ಯಾಯನಾಂಶಕಾಲಕ್ಕೆ ಮಾತ್ರವೆಂದು ಹೇಳಿದ್ದಾಗಿ

ರದೆ ಶಾಸ್ತ್ರ ನಿರ್ಣಯಾನುಸಾರವಾಗಿ ಸಾರ್ವಕಾಲಿಕವಾಗಿಯೇ ಹೇಳಿದ್ದೆಂದು ಹಿಂದೆ ಅಯನಸಮರ್ಥನೆಯ ಖಂಡನೆಯಲ್ಲಿಯೇ ಸ್ಪಷ್ಟಪಡಿಸಿರುತ್ತೇವೆ. ಆದ್ದ ರಿಂದ **ಆ ವಚನಗಳು ಎಲ್ಲ ಕಾಲಕ್ಕೂ ಉಪಯುಕ್ತವಾಗಿರುತ್ತವೆ. 'ಸಾಂ ಪ್ರತಂ'** ಎಂಬುದಕ್ಕೆ ಆ ಕಾಲದ್ದೆಂದು ಅರ್ಥ ಮಾಡತಕ್ಕದ್ದಲ್ಲ. **'ಯುಕ್ತಾ ರ್ಥೇ ಸಾಧನಾರ್ಥೇ ಚ ಸಾಂಪ್ರತಂ।** ಇತ್ಯಾದಿ ವಚನದಂತೆ ಯುಕ್ತವಾದ್ದು, ಅಥವಾ ಸಹಜವಾದ್ದು ಎಂಬ ಅರ್ಥವು ಗ್ರಾಹ್ಯವಿರುತ್ತದೆ. **ದ್ರಾಹ್ಯಾಯಣ ಸೂತ್ರಭಾಷ್ಯವಚನಕ್ಕೆ** ಕಾರಣವನ್ನೇನೂ ಹೇಳದೆ ಅದು ಶೂನ್ಯಾಯನಾಂಶ ಕಾಲದ ಪ್ರವೃತ್ತಿಯನ್ನು ಅವಲಂಬಿಸಿ ಹೇಳಿದ್ದೆಂತ ಬರೆದಿದ್ದಾರೆ. ಆದರೆ ಅದ ರಂತೆ ಬೇರೆ ಬೇರೆ ಕಾಲದ ಎಲ್ಲ ಗ್ರಂಥಗಳಲ್ಲಿಯೂ, ಆರ್ಷ ಶಾಸ್ತ್ರಗಳಲ್ಲಿಯೂ ಮಕರ ಕರ್ಕಟಾದಿಯಾಗಿಯೇ ಕರ್ಮಾರ್ಹ ಅಯನಾರಂಭವನ್ನು ಹೇಳಿರು ವುದರಿಂದ ಆ ವಚನವು ಶಾಸ್ತ್ರ ನಿರ್ಣಯದಂತೆ **ಸಾರ್ವಕಾಲಿಕವಾದುದೆಂದೇ ಸಿದ್ಧವಾಗುತ್ತದೆ. 'ಮಕರಾದಿರಾಶಿಷಟ್ಕಂ'** ಎಂಬ ವಚನವು ಶಾ. ನಿ. ಪಂ. ಪುಟ ೪ ರಲ್ಲಿ ವಸಿಷ್ಠಸಂಹಿತಾವಚನವೆಂದು ಕಾಣಿಸಿದೆ. ಇವರು ಬರೆದಿರು ವಂತೆ **'ವೃದ್ಧವಸಿಷ್ಠಸಿದ್ಧಾಂತ'** ವಚನವೆಂದು ಕಾಣಿಸಿಲ್ಲ. ಮತ್ತು ಆ ಸಂ ಹಿತಾವಚನದಲ್ಲಿ ಹೇಳಿದ್ದು **'ಸಾಯನರಾಶಿ'** ಎಂತ ಕಲ್ಪಿಸಲಿಕ್ಕೆ ಸಹ ಯಾರಿ ಗೂ ಶಕ್ಯವಿಲ್ಲವೆಂಬದನ್ನು ಈ ಹಿಂದೆ ಪುಟ ೭೩ ರಲ್ಲಿಯೇ ವಿಶದಪಡಿಸಿರುತ್ತೇ ವೆ. ಆದಕಾರಣ ಈ ವಚನದಲ್ಲಿ **ನಿರಯನ ಮಕರಕರ್ಕಾದಿಯಾದ ಕರ್ಮಾ ರ್ಹ ಅಯನವೇ ನಿರೂಪಿಸಲ್ಪಟ್ಟಿರುವುದೆಂದೂ,** ಗಣಿತೋಪಯೋಗಿಯಾದ ಸಿದ್ಧಾಂತ ಗ್ರಂಥದಲ್ಲಿ ಹೇಳಿರುವ **'ಪರಕ್ರಾಂತಿಮಿತೇಃಕ್ಷ್ವಾಂಶೇ'** ಇತ್ಯಾದಿ ವಚನವು ಕ್ರಾಂತಿ, ಚರಾದಿಗಳ ಉಪಪತ್ತಿಯನ್ನು ವಿಶದಪಡಿಸತಕ್ಕ ಅಯನ ದಿನವನ್ನು ಕುರಿತು ಹೇಳಿದ್ದೆಂದೂ ಆಯಾ ಪ್ರಕರಣದಿಂದಲೇ ಸಿದ್ಧ ವಾಗುವುದು.

**'ಕೇವಲಾರ್ಕೇಣ ಸರ್ವಸ್ಮಿನ್'** ಎಂಬ ವಚನವು ಶ್ರುತಿ, ಸ್ಮೃತಿ, ಶಿಷ್ಟಾಚಾರಗಳನ್ನೆಲ್ಲ ವಿಚಾರಿಸಿಯೇ ಹೇಳಿದ್ದಾಗಿದ್ದು **'ದೇವತಾರಾನು ವಾಪ್ಯಾದಿ'** ಎಂಬ ವಚನವೂ, ಬೋಧಾಯನ, ಕಾತ್ಯಾಯನಾದಿ ಸೂತ್ರಗಳ ತಾತ್ಪರ್ಯವೂ ಕರ್ಮಾರ್ಹವಾದ ನಿರಯನ ಅಯನವನ್ನು ಎಂದಿಗೂ ಬಾಧಿ ಸತಕ್ಕವುಗಳಲ್ಲ. ಸತ್ಯವ್ರತೋಕ್ತಿಯಲ್ಲಿ **'ಉದಙ್ಮುಖೇ' 'ದಕ್ಷಿಣಾಶಾಮುಖೇ'** ಎಂಬ ಶಬ್ದಗಳಿಂದ ಕ್ರಾಂತಿವೃತ್ತದಲ್ಲಿ ಸ್ಥಿರವಾಗಿರುವ ನಿರಯನ ಮಕರ ಕರ್ಕಟಾದಿ ರಾಶಿ ಸ್ಥಿತಿಯೇ ಲಕ್ಷಿಸಲ್ಪಟ್ಟಿರುತ್ತದೆಂದು ಶಾಸ್ತ್ರತಃ ಸಿದ್ಧವಾಗು ತ್ತದೆ. ಇನ್ನು ಯಾವದಾದರೊಂದು ಕರ್ಮಕ್ಕೆ ಸಾಯನಾಯನವೇ ಆಗಬೇಕೆಂ ದು ಶಾಸ್ತ್ರಶಿಷ್ಟಾಚಾರಗಳಿಂದೆಲ್ಲ ಸಿದ್ಧಪಡಿಸಲಿಕ್ಕೆ ಇವರಿಗೆ ಶಕ್ಯವಿರುವುದಾದರೆ (ಅದು ಹೇಗೂ ಶಕ್ಯವಿಲ್ಲ.) ಹಾಗೆ ಸಿದ್ಧಪಡಿಸುವಲ್ಲಿಯೂ ಸಹ ಒಂದು ವಿಷ ಯಕ್ಕೆ ಮಾತ್ರ ಸಂಬಂಧಿಸಿದ್ದು ಎಲ್ಲ ವಿಷಯಗಳಿಗೂ ಅನ್ವಯಿಸತಕ್ಕದ್ದೆಂತ

ಆಗುವದಿಲ್ಲ. ಬೃಹಸ್ಪತಿಸವ, ಗೋದಾವರೀಸ್ನಾನಾದಿ ಕೆಲವು ಕರ್ಮಗಳಿಗೆ ಉಪಯುಕ್ತವೆಂದು ಹೇಳಿರುವ ಬಾರ್ಹಸ್ಪತ್ಯಮಾನವು ಸಕಲಕರ್ಮಗಳಿಗೂ ವಿಹಿತವಾದ್ದೆಂದು ಸಿದ್ಧವಾಗುವುದಿಲ್ಲ. '**ಸರ್ವೇ ಮಾಸಾ ವಿವಾಹಸ್ಯ**' ಇತ್ಯಾದಿ ವಚನಗಳು ಅಧಿಕಮಾಸಾದಿಗಳಲ್ಲಿ ವಿವಾಹಾದಿಗಳು ವಿಹಿತವಾದವುಗಳಲ್ಲವೆಂಬ ಮಾತ್ರದಿಂದ ಅವಿಚಾರಿತವಚನಗಳೆಂದು ಹೇಳಲಿಕ್ಕಾಗದು. ಇಂತಹ ಸಂದರ್ಭದಲ್ಲಿ ಲಕ್ಷಣೆಯಿಂದ ಅರ್ಥತಿಳಿಯತಕ್ಕದ್ದು ಶಾಸ್ತ್ರಪದ್ಧತಿಯಾಗಿರುತ್ತದೆ. ಮೇಲಾಗಿ ಈ '**ಕೇವಲಾರ್ಕೇಣ**' ಎಂಬ ಶ್ಲೋಕದ ಉತ್ತರಾರ್ಧವು '**ಅಪಕ್ರಮುಚರಾದೌತು....**' ಎಂದಿದ್ದು ಅಲ್ಲಿ '**ಆದಿ**' ಎಂಬ ಶಬ್ದದಿಂದ ಶಾಸ್ತ್ರತಃ ಸಾಯನರವಿಯ ಅವಶ್ಯಕತೆಯುಳ್ಳ ವಿಷಯಗಳೆಲ್ಲವೂ ಸಂಗ್ರಹಿಸಲ್ಪಟ್ಟವೆ. ಹೀಗೆ ಯಾವ ರೀತಿಯಿಂದ ವಿಚಾರಿಸಿದರೂ ಈ ವಚನವು '**ಅವಿಚಾರದಿಂದ ಹೇಳಿದ್ದೆಂತ ಸಿದ್ಧವಾಗುವದಿಲ್ಲ.**' ಅಷ್ಟು ಮಾತ್ರವಲ್ಲ; ಪುಟ ೪೫ ರಲ್ಲಿ "ಇದು ಅವಿಚಾರದಿಂದಲೇ ಹೇಳಿದ್ದೆಂತ ಸಿದ್ಧವಾಗುವುದು" ಎಂದಿರುವ **ಇವರ ಮಾತೇ ಅವಿಚಾರದ್ದೆಂದು ಸಿದ್ಧವಾಗುವುದು.** ಇನ್ನು ಇವರು ಹೆಸರು ಕಾಣಿಸಿರುವ ಕಾಲಮಾಧವ, ಪುರುಷಾರ್ಥಚಿಂತಾಮಣಿ ಮುಂತಾದ ಸಮಸ್ತ ಗ್ರಂಥಗಳಲ್ಲಿಯೂ ನಿರಯನ ಮಕರ-ಕರ್ಕಟಾದಿಯಾಗಿ ಆರಂಭಿಸತಕ್ಕದ್ದೇ ಕರ್ಮಾರ್ಹವಾದ ಅಯನಲಕ್ಷಣವೆಂದು ಸ್ಪಷ್ಟವಾಗುವುದರಿಂದ ಈ ವಚನದಲ್ಲಿ ನಿರಯನ ಅಯನವನ್ನೇ ಕರ್ಮಾರ್ಹವೆಂದು ಹೇಳಿದ್ದು ಅಂತಹ ಅಯನ ಲಕ್ಷಣಕ್ಕೂ, ಅವುಗಳಲ್ಲಿ ಹೇಳಿರುವ ಅಯನ ನಿರ್ಣಯಕ್ಕೂ ಸರಿಯಾಗಿಯೇ ಇರುತ್ತದೆ. ಆದುದರಿಂದ ಈ ವಚನವು ಶಾಸ್ತ್ರಸಿದ್ಧ, ಕರ್ಮಾರ್ಹವಾದ **ನಿರಯನ ಅಯನವನ್ನು ಸರ್ವಾತ್ಮನಾ ಸಮರ್ಥಿಸುತ್ತದೆ.** ಮತ್ತು ಅಯನಾಂಶವು ಕರ್ಮಾರ್ಹವಾದ ಅಯನ ನಿರ್ಣಯಕ್ಕೆ ಬೇಕಾದ್ದಲ್ಲ. ಕ್ರಾಂತಿ-ಚರಾದಿ ಸಾಧನೆಗೆ ಮಾತ್ರ ಉಪಯುಕ್ತವಾದದ್ದು; ಎಂಬ ಶಾಸ್ತ್ರನಿರ್ಣಯದಂತೆ ವಿಷಯಭೇದದಿಂದ ಅಯನಾಂಶದ ವ್ಯವಸ್ಥೆಯನ್ನು ಹೇಳುವುದರಿಂದ **ವದತೋ ವ್ಯಾಹತಿಯಾಗುವುದಿಲ್ಲ.**

ಶಾಸ್ತ್ರವಿಹಿತಪಂಚಾಂಗನಿರ್ಣಯದ ಪುಟ ೪ ರಲ್ಲಿ '**ಪೂರ್ವಪದಾತ್ಸಂಜ್ಞಾಯಾಮಗಃ**' ಎಂಬ ವ್ಯಾಕರಣಸೂತ್ರ (ನಿಯಮ) ದಂತೆ '**ಉತ್ತರಾಯಣ**' ವೆಂಬ ಶಬ್ದದ ಅಂತ್ಯಾಕ್ಷರವು '**ಣ**' ಎಂದಿರುವುದರಿಂದ ಅದು ಮಕರಸಂಕ್ರಾಂತ್ಯಾದಿಯಾಗಿ ಎಣಿಸತಕ್ಕ ೬ ಸೌರಮಾಸಗಳ ಕಾಲಾವಧಿಯನ್ನು ಬೋಧಿಸುವ ಸಂಜ್ಞಾವಿಶಿಷ್ಟ (ಸಾಂಕೇತಿಕ) ಶಬ್ದವಾಗಿರುತ್ತದೆಂದು ತೋರಿಸಿದೆ. ಇದನ್ನು ಸಹ ಇವರು ಪುಟ ೪೫ ರಲ್ಲಿ ಆಕ್ಷೇಪಿಸಿ ತಮಗೇನೂ ಸಾಧಕವಲ್ಲದ ಚಂಪೂರಾಮಾಯಣದ ಟೀಕೆಯೊಳಗಿನ **ರಾಮಾಯಣವೆಂಬ** ಶಬ್ದದ ನಿರ್ವಚನವನ್ನು ಉದಾಹರಿಸಿ, ಅದರಂತೆ ತಮ್ಮ ಸಾಯನ ಅಯನಕ್ಕಾದರೂ ಉತ್ತರಾಯಣ 'ವೆಂತಲೇ ರೂಪಸಿದ್ಧಿಯಾಗುವುದೆಂದೂ, ಮತ್ತು

ಆ ಶಬ್ದವು ತಮ್ಮ ಸಾಯನಾಯನವನ್ನೇ ಸಮರ್ಥಿಸುತ್ತದೆಂತಲೂ ಹೇಳಿದ್ದಾ
ರೆ. ಇದರಿಂದ ಭಾಷಾಶಾಸ್ತ್ರದಂತೆ ನಿರ್ವಿವಾದವಾಗಿರತಕ್ಕ ವಿಷಯದಲ್ಲಿಯೂ
ಸಹ ಇವರು ಅಜ್ಞಾನದಿಂದಲೋ, ಸ್ವಮತಾಗ್ರಹದಿಂದಲೋ ಹೇಗೆ ಅಪಲಾ
ಪಮಾಡುತ್ತಿರುವರೆಂದು ಅಭಿಜ್ಞರಿಗೆ ತಿಳಿಯದಿರಲಿಕ್ಕಿಲ್ಲ. ಇವರು ಉದಾಹರಿ
ಸಿರುವ ರಾಮಾಯಣವೆಂಬ ಶಬ್ದವಾದರೂ (ಯೋಗರೂಢ) ಸಂಜ್ಞೆಯೇ ಆಗಿ
ರುವುದೆಂದು ಎಲ್ಲರೂ ಒಪ್ಪತಕ್ಕದ್ದಿದೆ. ಯಾಕಂದರೆ— ಇವರು ಕೊಟ್ಟಿರುವ
ಟೀಕೆಯಲ್ಲಿ ಅದರ ನಿರ್ವಚನಮಾಡಿರುವ ಪ್ರಕಾರವೇ ರಾಮನ ಸ್ಥಾನವೆಂಬ
ಅರ್ಥವಿರುವಲ್ಲೆಲ್ಲ ಆಶಬ್ದವು ಪ್ರಯೋಗಿಸಲ್ಪಡತಕ್ಕದ್ದಾಗಿಲ್ಲ. ಮತ್ತು ವರ್ಣ
ಕತ್ವದಿಂದ ರಾಮನ ಸ್ಥಾನವಾಗಿರದ ರಾವಣಾದಿ ವರ್ಣನೆಗಳುಳ್ಳ ಭಾಗಗಳು
ರಾಮಾಯಣವಲ್ಲವೆಂತಲೂ ಆಗುವುದಿಲ್ಲ. ಆದುದರಿಂದ ಈ ರಾಮಾಯಣ
ವೆಂಬ ಶಬ್ದವು ನಿರ್ದಿಷ್ಟವಾದ ಒಂದು ಗ್ರಂಥದ ಸಂಕೇತ ಅಂದರೆ ಸಂಜ್ಞೆ
ಯೇ ಆಗಿರುತ್ತದೆಂತ ಸಿದ್ಧವಾಗುತ್ತದೆ. ಮತ್ತು ಈ ವಿಷಯವು ಅದೇ ಚಂಪೂ
ರಾಮಾಯಣದ ಟೀಕೆಯಲ್ಲಿ 'ಶೂರ್ಪ- ಣ'ಖಾ' ಎಂಬ ಶಬ್ದನಿರ್ವಚನಮಾ
ಡಿರುವಲ್ಲಿಯೂ ಸಹ ಸ್ಪಷ್ಟವಾಗುವುದು. ಆದುದರಿಂದ— "ಅವಯವಾರ್ಥ
ವಿಶಿಷ್ಟಪದಾರ್ಥಾಂತರಮನವಬೋಧ್ಯ ಅವಯವಾರ್ಥೇನ ವಿಶಿಷ್ಟಮವಿಶಿ
ಷ್ಟಂ ವಾ ಸಂಜ್ಞಿನಂ ನಿತ್ಯಂ ಯಾ ಬೋಧಯತಿ ಸಾ ಸಂಜ್ಞಾ" ತಾತ್ಪರ್ಯ-
ಶಬ್ದಾರ್ಥಕ್ಕೆ ಸರಿಹೊಂದುವ ಇತರ ವಿಷಯಗಳನ್ನು ಬಿಟ್ಟು ಶಬ್ದಾರ್ಥದಿಂ
ದ ಕೂಡಿರಲಿ, ಇಲ್ಲದಿರಲಿ ವಿವಕ್ಷಿತವಿಷಯವನ್ನೇ ನಿತ್ಯವಾಗಿ ಯಾವುದು
ಬೋಧಿಸುವುದೋ ಅದು 'ಸಂಜ್ಞೆ' ಎನ್ನಲ್ಪಡುವುದು. ಇದರಂತೆ ಇವರ
ಸಾಯನಾಯನವು ಸೂರ್ಯನ ಉತ್ತರ-ದಕ್ಷಿಣದಿಕ್ಕಿನ ಗಮನಕಾಲವೆಂಬ
ಅವಯವಾರ್ಥವನ್ನು ಹೊಂದಿಕೊಂಡೇ ಉತ್ತರ, ಅಥವಾ ದಕ್ಷಿಣಾಯನವೆಂ
ದು ಹೇಳಿಸಿಕೊಳ್ಳಬೇಕಾಗಿರುವುದರಿಂದ, ಅದರ ಸ್ಥಾನವಾದರೂ ಅಯನಗತಿ
ವಶದಿಂದ ನಿತ್ಯವೂ ಬದಲಾಯಿಸುತ್ತಲೇ ಇರುವುದರಿಂದ ಅದಕ್ಕೊಂದು ಶಾಸ್ತ್ರ
ಪ್ರಸಿದ್ಧವಾದ ನಿತ್ಯಸಂಕೇತವಿರುವ ಸಂಭವವೇ ಇಲ್ಲ. ಮತ್ತು ಹೀಗೆ ಪ್ರಯೋ
ಗಿಸಲ್ಪಡುವ ಉತ್ತರಾಯಣವೆಂಬ ಶಬ್ದವು ಸಂಜ್ಞೆಯೆಂದು ಸಿದ್ಧವಾಗದ
ಹೊರತು ಅದಕ್ಕೆ 'ಣ'ತ್ವವು ಬರುವುದಿಲ್ಲ. ಆದುದರಿಂದ ಇವರ ಸಾಯನಾ
ಯನವೆಂಬ ಅರ್ಥದಲ್ಲಿ ಆ ಶಬ್ದವನ್ನು ಪ್ರಯೋಗಿಸುವುದಾದರೆ ಉತ್ತರಾಯ
'ನಂ' ಎಂತಲೇ ಪ್ರಯೋಗಿಸಬೇಕೆಂದು ವ್ಯಾಕರಣ ಶಾಸ್ತ್ರದಿಂದ ಸಿದ್ಧವಾಗು
ತ್ತದೆ. ಮತ್ತು ಸಾಯನಗಣನೆಯಲ್ಲಿ ಸಾಂಕೇತಿಕಾರ್ಥಕ್ಕೆ ಅವಕಾಶವಿಲ್ಲವೆಂ
ದೂ, ಆದ್ದರಿಂದಲೇ ಮುಂದಿನ ಅಯನ ಶಬ್ದದಲ್ಲಿರತಕ್ಕ 'ನ'ಕಾರಕ್ಕೆ ಣಕಾ
ರಾದೇಶವು ಆಗುವುದಿಲ್ಲೆಂದೂ, ಮೇಷಾಯನಂ, ವೃಷಾಯನಂ, ಕರ್ಕಾಯ
ನಂ, ಮಕರಾಯನಂ, ಈ ಮುಂತಾದ ಪ್ರಯೋಗಗಳಿಂದ ಸ್ಪಷ್ಟವಾಗಿ ತಿಳಿ
ದು ಬರುವದು. ಇನ್ನು ಶ್ರೌತ-ಸ್ಮಾರ್ತ ಕರ್ಮಾನುಷ್ಠಾನಾಂಗವಾಗಿ ಶಾಸ್ತ್ರವಿ

ಹಿತವಾಗಿರುವ ಮಕರ ಸಂಕ್ರಾಂತಿಯಿಂದ ಎಣಿಸತಕ್ಕ ೬ ಸೌರಮಾಸಗಳಿಗೆ ಉತ್ತರಾಯಣವೆಂಬ '**ಹೆಸರು**' ಶಾಸ್ತ್ರಪ್ರಸಿದ್ಧವಾಗಿಯೇ ಇರುವುದರಿಂದಲೂ ಮತ್ತು ಆ ಹೆಸರು (ಸಂಜ್ಞೆಯು) ಆ ಆರುಮಾಸಗಳಲ್ಲಿ ಸೂರ್ಯನ ಉತ್ತರ ದಿಕ್ಕಿನ ಗಮನವೆಂಬ ಅವಯವಾರ್ಥವನ್ನೇ ಲಕ್ಷಿಸಿ ಪ್ರಯೋಗಿಸಲ್ಪಡತಕ್ಕದ್ದಲ್ಲವಾದುದರಿಂದಲೂ, ನಾರಾಯಣ-ಬಾದರಾಯಣ ಮುಂತಾದ ಶಬ್ದಗಳಂತೆ ಅಂತ್ಯಾಕ್ಷರವು ಣಕಾರವಾಗಿರತಕ್ಕ ಉತ್ತರಾಯಣವೆಂಬ ಸಂಜ್ಞಾವಿಶಿಷ್ಟ (ಯೋಗರೂಢ) ಶಬ್ದಕ್ಕೆ ವ್ಯಾಕರಣ ಶಾಸ್ತ್ರದಂತೆ ಮಕರ ಸಂಕ್ರಾಂತಿಯಿಂದ ಎಣಿಸತಕ್ಕ ೬ ಸೌರಮಾಸಗಳ ಕಾಲವೆಂದೇ ಅರ್ಥವಾಗುವುದಲ್ಲವೆ, ಇವರ ಸಾಯನಾಯನಕಾಲವೆಂಬ ಅರ್ಥವಾಗುವುದಿಲ್ಲವೆಂದು ಕೇವಲ ಭಾಷಾಶಾಸ್ತ್ರದಿಂದಲೂ ಸಿದ್ಧವಾಗುತ್ತದೆ. ಹೀಗೆ ವಾಸ್ತವವಾಗಿ ಶಾಸ್ತ್ರಪ್ರಸಿದ್ಧವಾಗಿರುವ 'ಉತ್ತರಾಯಣಂ' ಎಂಬ ಶಬ್ದವು ಕರ್ಮಾರ್ಹವಾದ ನಿರಯನ-ಮಕರ ಸಂಕ್ರಾಂತಿಯಿಂದಾರಂಭಿಸತಕ್ಕ ಅಯನವನ್ನೇ ಬೋಧಿಸುತ್ತಿದ್ದು ಇವರ ಸಾಯನಾಯನದ ಸಮರ್ಥನೆಗೆ ತೀರ ಬಾಧಕವಾಗಿದ್ದಾಗ್ಯೂ ಅದನ್ನು ತೀರಾ ವಿಪರ್ಯಾಸ ಮಾಡಿ ಇವರು ಹೇಗೆ ತಮ್ಮ ಪಕ್ಷವನ್ನು ಸಮರ್ಥಿಸಿಕೊಳ್ಳುತ್ತಿರುವರೆಂಬುದು ಸುಜ್ಞವಾಚಕರಿಗೆ ತಿಳಿಯದಿರಲಿಕ್ಕಿಲ್ಲ. ನಿರ್ವಿವಾದವಾಗಿರತಕ್ಕ ಶಬ್ದಶಾಸ್ತ್ರದ ವಿಷಯವನ್ನೇ ಇವರು ಈ ರೀತಿ ವಿಕಲ್ಪಿಸಿ ಜಗ್ಗುತ್ತಿರುವಾಗ ಪ್ರಕರಣ, ವಿಷಯ, ಸಂದರ್ಭಾದಿ ವಿಶೇಷಗಳ ಹೊಂದಿಗೆಯನ್ನೇನೂ ತಿಳಿಯದೆ ಸಾಮಾನ್ಯರಿಗೆ ಸರಿಯಾಗಿ ಅರ್ಥವಾಗದಿರುವ ಜ್ಯೋತಿಃಶಾಸ್ತ್ರ, ಧರ್ಮಶಾಸ್ತ್ರ ಮತ್ತು ವೇದಾದಿ ಗಂಭೀರ ವಚನಗಳ ಅರ್ಥವನ್ನು ಹೇಗೆ ವಿಪರೀತಮಾಡಿರಬಹುದೆಂಬುದು **ಸ್ಥಾಲೀಪುಲಾಕನ್ಯಾಯ**ದಿಂದ ವಾಚಕರ ಲಕ್ಷ್ಯಕ್ಕೆ ಬರಬೇಕಾಗಿ ಈ ವಿಷಯವನ್ನು ಇಷ್ಟು ವಿಶದವಾಗಿ ಇಲ್ಲಿ ವಿವರಿಸಿರುವೆವು.

'**ಷಡ್ವಾ ಋತವಃ ಸಂವತ್ಸರಃ**' ಇತ್ಯಾದಿ ಶ್ರುತಿ ವಚನಗಳು (ಪುಟ ೪೬ ರಲ್ಲಿ) ಚಾಂದ್ರ ಸಂವತ್ಸರವನ್ನೇ ಬೋಧಿಸುತ್ತವೆ ಎಂದಿದ್ದಾರೆ. ಆದರೆ '**ಷಡ್ವಾ ಋತವಃ**' '**ದ್ವಾದಶಮಾಸಾಃ**' ಎಂಬ ವಚನಗಳು ಸೌರ ಸಂವತ್ಸರಕ್ಕೂ ಅನ್ವಯಿಸತಕ್ಕದ್ದೆಂಬುದು ಇವರೇ ಕಾಣಿಸಿದ ಕಾಲಮಾಧವ, ಪುರುಷಾರ್ಥ ಚಿಂತಾಮಣಿ ಮುಂತಾದ ಗ್ರಂಥಗಳಿಂದಲೇ ಸ್ಪಷ್ಟವಾಗುತ್ತಿದ್ದು ಶಾ. ವಿ. ಪಂ. ನಿರ್ಣಯದಲ್ಲಿ ಈ ವಚನಗಳು ಸೌರವತ್ಸರವನ್ನು ಮಾತ್ರವೇ ಬೋಧಿಸುತ್ತವೆಂದು ಹೇಳಿಲ್ಲವಾದುದರಿಂದಲೂ, '**ತ್ರಯೋದಶಮಾಸಾಃ ಸಂವತ್ಸರಃ**' ಎಂಬ ವಚನವು '**ಸ ಚಾಂದ್ರಾಬ್ದ ಏವ ಸಂಘಟತೇ**' ಅಂದರೆ ಚಾಂದ್ರವತ್ಸರಕ್ಕೆ ಮಾತ್ರ ಕೂಡುತ್ತದೆಂದು ಶಾ. ವಿ. ಪಂ. ಪುಟ ೬ ರಲ್ಲಿಯೇ ಸ್ಪಷ್ಟೀಕರಿಸಿರುವುದರಿಂದಲೂ ಇವರ ಆ ಕಲ್ಪಿತ ಖಂಡನೆಯು **ವ್ಯರ್ಥಪ್ರಲಾಪವೂ, ಶಾಸ್ತ್ರವಿರುದ್ಧವೂ** ಆಗಿರುತ್ತದೆ. ಕಾಲ ಮಾಧವದಲ್ಲಿ '**ಏಕಸ್ಮಿನ್ ಋತೌ**' ಇತ್ಯಾದಿ ವಚನವು ಚಾಂದ್ರಋತುಸ್ವರೂಪವನ್ನು [illegible] ಆಧಾರವಾ

ಗಿ 'ಮಧುಶ್ಚ ಮಾಧವಶ್ಚ' ಇತ್ಯಾದಿ ವಚನಗಳು ಉದಾಹರಿಸಲ್ಪಟ್ಟಿರುವುವಲ್ಲದೆ ಮುಂದೆ ಸೌರ ಋತುಗಳನ್ನು ಸಹ ಪ್ರತ್ಯೇಕವಾಗಿ ಹೇಳಿರುತ್ತಾರೆ. ಮತ್ತು 'ದ್ವಾದಶಮಾಸಾಃ ಸಂವತ್ಸರಃ' ಎಂಬ ವಚನವನ್ನು ಕಾಣಿಸಿ ಅದರ ವಿವರಣೆಯಲ್ಲಿ 'ಮಾಸತ್ರೈವಿಧ್ಯೇನ ಸಂವತ್ಸರಸ್ತ್ರಿವಿಧಃ' ಎಂಬ ವಚನದಿಂದ ಸೌರವತ್ಸರವನ್ನೂ ಸಂಗ್ರಹಿಸಿ ಹೇಳಿದ್ದಾರೆ. ಪುರುಷಾರ್ಥಚಿಂತಾಮಣಿಯಲ್ಲಿಯೂ ಸಹ ಮೇಲಿನ ಶ್ರುತಿವಚನಗಳನ್ನು ಉದಾಹರಿಸಿಯೇ ಸೌರವತ್ಸರವೂ, ಸೌರ ಋತುವೂ ನಿರೂಪಿಸಲ್ಪಟ್ಟಿವೆ. ಹೀಗಿರುವಲ್ಲಿ ಈ "ಶ್ರುತಿವಚನಗಳು ಚಾಂದ್ರಮಾನ ಬೋಧಕಗಳೇ ಸರಿ" ಎಂದು ಇವರು ಹೇಳಿದ್ದು ಆ ಕಾಲಮಾಧವ, ಪುರುಷಾರ್ಥಚಿಂತಾಮಣಿ ಮುಂತಾದ ಯಾವುದೊಂದು ಗ್ರಂಥಕ್ಕೂ ಸಮ್ಮತವಾದ್ದಲ್ಲ. ಇನ್ನು ಇಲ್ಲಿ ಇವರು ಮಧು, ಮಾಧವಾದಿ ಮಾಸಗಳೆಂದರೆ ಚೈತ್ರಾದಿ ಚಾಂದ್ರಮಾಸಗಳೇ ಆಗಿರುತ್ತವೆಂಬ ತಾತ್ಪರ್ಯವನ್ನು ತಾವಾಗಿಯೇ ಎತ್ತಿ ಹೇಳಿರುವುದರಿಂದ ಇವರನ್ನು ನವೀನ ದೃಕ್ಪಂಚಾಂಗದ ನಿರ್ಮಾಣಕ್ಕೆ ಹಚ್ಚಿ ಪ್ರೋತ್ಸಾಹಿಸಿರುವ ಶ್ರೀ ಯಮುರ್ಜುಂಜ ಶಂಕರ ಜೋಯಿಸರೇ ಮೊದಲಾದ ಇವರ ದೃಕ್ಪಕ್ಷೀಯರು ವೈಜಯಂತೀ, ಕೇತಕೀ ಮೊದಲಾದ ತಮ್ಮ ದೃಕ್ಪಂಚಾಂಗಗಳಲ್ಲಿ ಮೀನಾಯನ, ಮೇಷಾಯನಾದಿ ದಿನಗಳಲ್ಲಿಯೇ ಮಧು, ಮಾಧವಾದಿ ಮಾಸಾರಂಭವನ್ನು ಕಾಣಿಸಿ, ಅವುಗಳಿಗೆ ಸಾಯನ ಸೌರಮಾನತ್ವವನ್ನು ಕಲ್ಪಿಸಿದ್ದು, ಪ್ರತ್ಯಕ್ಷ ಶ್ರುತಿವಿರುದ್ಧವಾದ ಕೇವಲ ಅಶಾಸ್ತ್ರೀಯ ಕಲ್ಪನೆಯೆಂದು ಕಂಠೋಕ್ತವಾಗಿ ಇವರೇ ಸಾರಿದಂತಾಗಿದೆ. ಇದರಿಂದ ಈ ಭಾಗದಲ್ಲಿ ನಮ್ಮ ಶ್ರಮವು ಕಡಿಮೆಯಾದ ಬಗ್ಗೆ ನಾವಾದರೂ ಸಂತೋಷಪಡತಕ್ಕದ್ದೇ ಸರಿ. ಇವರು ಕಾಣಿಸಿರುವ 'ಏಕಂ ವಾ ಏತದ್ದೇವಾನಾಮಹಃ' ಎಂಬ ವಚನವು ಶಾಸ್ತ್ರತಃ ನಿರಯನ ಸೌರವರ್ಷವನ್ನೇ ಬೋಧಿಸುತ್ತದೆ. 'ಕೃತ್ತಿಕಾಃ ಪ್ರಥಮಂ' ಇತ್ಯಾದಿ ವಚನಗಳು ಇವರ ಸಾಯನವಾದವನ್ನು ಸರ್ವಥಾ ಸಮರ್ಥಿಸತಕ್ಕವುಗಳಲ್ಲವೆಂಬುದನ್ನು ಈ ಹಿಂದೆಯೇ ಪುಟ ೬೬ರಿಂದ ೭೨ ರ ವರೆಗೆ ಸಕಾರಣವಾಗಿ ವಿವರಿಸಿದ್ದೇವೆ. ಹೀಗೆ ಶಾ. ವಿ. ಪಂ. ಪುಟ೬ ರಲ್ಲಿ ಹೇಳಿರುವ "ಸ ತು (ಸೌರಾಬ್ದಃ) ಸಾಯನೋ ವಾ ನಿರಯನೋ ವೇತಿ ಸಂಶಯೇ............ನಿರಯನ ಸೌರಮಾನಮೇವ ಶ್ರುತಿಸಮ್ಮತಮಿತಿ ಸಿದ್ಧಂ" ಎಂಬುದು ಶಾಸ್ತ್ರ ಸಿದ್ಧಾಂತವೇ ಆಗಿರುತ್ತದೆ. ಮತ್ತು ಶಾಸ್ತ್ರ ವಿರುದ್ಧವಾದ ಸಾಯನ ಗಣನೆಯನ್ನು ಕರ್ಮಾಚರಣೆಗಳಿಗೆಲ್ಲ ನಿರ್ಣಾಯಕವಾಗಿ ಶ್ರುತಿಯಲ್ಲಿ ಹೇಳುವ ಸಂಭವವೇ ಇಲ್ಲವಾದುದರಿಂದಲೂ, ನಿರಯನಗಣನೆಯೇ ಆರ್ಷಪರಂಪರೆಗೂ, ವೈದಿಕ ಧರ್ಮದ ಸಂಪ್ರದಾಯಕ್ಕೂ ಸಮ್ಮತವಾದದ್ದೆಂದು ದೃಕ್ಪಕ್ಷದ ಅಖಂಡ ಮುಖಂಡರೇ ಸಾರಿರುವುದರಿಂದಲೂ, ಸಾಯನ ಸೌರಮಾನವು ಇವರ ದೃಕ್ಪಂಚಾಂಗಕ್ಕೂ ಸಹ ವಿರುದ್ಧವಾಗಿರುವುದರಿಂದಲೂ " ನಿರಯನ ಸೌರಮಾನವೇ ಶ್ರುತಿ

ಸಮ್ಮತವೆಂದು ಸಿದ್ಧ ಮಾಡುವುದು ತಪ್ಪಾಗುತ್ತದೆ.'' ಎಂದು ಇವರು **ಹೇಳಿದ್ದೇ ಕೇವಲ ತಪ್ಪಾಗಿರುತ್ತದೆ.**

ಪುಟ ೪೬ ರಲ್ಲಿ ಇವರು ಕಾಣಿಸಿದ ಮುಹೂರ್ತಚಿಂತಾಮಣಿ, ಪೀಯೂಷಧಾರಾಟೀಕಾ, ಕಾಲಮಾಧವಗಳಲ್ಲಿ ಮಾಸ, ಋತು, ಅಯನಾರಂಭಾದಿ ಕರ್ಮಾರ್ಹಕಾಲನಿರ್ಣಯಕ್ಕೆಂದು ಸಾಯನ ಸಂಕ್ರಾಂತಿಗಳನ್ನು ಎಲ್ಲಿಯೂ ಹೇಳಿರದೆ ಸ್ನಾನ ಜಪಾದಿಗಳಿಗೆ ನಿರಯನ ಸಂಕ್ರಾಂತಿಯಂತೆ ಸಾಯನ ದಿನವೂ ಅನುಕೂಲವೆಂಬುದನ್ನಷ್ಟೇ ಹೇಳಿದ್ದು, ಅದನ್ನು ಶಾ. ವಿ. ಪಂ.ದಲ್ಲಿ ಉದಾಹರಿಸಿದ್ದರಿಂದ ಇವರ ಸಾಯನಗಣನೆಗೆ ಏನೂ ಸಾಧಕವುಂಟಾಗಿಲ್ಲ. **'ಅಯನಾಂಶಕತುಲ್ಯೇನ'** ಎಂಬ ವಚನವಾದರೂ ಇದೇ ತಾತ್ಪರ್ಯವುಳ್ಳದ್ದಾಗಿದೆ. **''ಅಯನದ್ವಿತಯೇ ಶ್ರಾದ್ಧಂ''** ಮುಂತಾದ ಇವರು ಕಾಣಿಸಿದ ಮುಂದಿನ ವಚನಗಳೆಲ್ಲ ಸಾಯನ ವಿಷುವಾಯನಾದಿಗಳನ್ನು ಬೋಧಿಸುತ್ತವೆಂಬ ಇವರ ಕಲ್ಪನೆಯನ್ನು ಈ ಹಿಂದೆಯೇ ಪುಟ ೮೭ ರಿಂದ ೯೫ ರ ವರೆಗೆ ವಿಸ್ತಾರವಾಗಿ ಚರ್ಚಿಸಿ ಖಂಡಿಸಿರುತ್ತೇವೆ. ಆದಕಾರಣ **'ನಿರಯನಸೌರಮಾನಮೇವ ಸ್ಮೃತಿಸಮ್ಮತಮಿತಿ ಸಿದ್ಧಂ'** ಎಂಬುದು ಯುಕ್ತವೇ ಆಗಿರುತ್ತದೆಂದು ಬೇರೆ ಸಿದ್ಧಪಡಿಸಬೇಕಾಗಿರದೆ ಅದು ಯುಕ್ತವಲ್ಲವೆಂಬ **ಇವರ ಹೇಳಿಕೆಯೇ ತೀರ ಅಯುಕ್ತವಾಗಿರುವುದೆಂದು ಸಿದ್ಧವಾಗುತ್ತದೆ.**

ಪುಟ ೪೭ ರಲ್ಲಿ ಇವರು ಕಾಣಿಸಿದ **'ಮೇಷಾದೌ ಚ ತುಲಾದೌ ಚ'** ಇತ್ಯಾದಿ **'ದಿನಶಬ್ದಸ್ಯ ವಾಚಕಃ'** ಎಂಬ ವರೆಗಿನ ವಚನಗಳು ದಿನಮಾನದ ವೃದ್ಧಿಕ್ಷಯಗಳನ್ನಷ್ಟೇ ಲಕ್ಷಿಸಿ ಹೇಳಿದ್ದೆಂತ ಆಯಾ ವಚನಗಳಲ್ಲಿಯೇ ಸ್ಪಷ್ಟವಾಗಿರುವುದರಿಂದಲೂ, ಮತ್ತು ಅಂತಹ ವಚನಗಳು ಶಾ. ವಿ. ಪಂ. ಪುಟ ೭ರಲ್ಲಿ ಕಾಣಿಸಿದ **'ದ್ವೌಮಾಸೌ ಚಾರ್ಕಜಾವೃತುಃ। ಋತುತ್ರಯಂ ಚಾಪ್ಯಯನಂ'** ಈ ಮುಂತಾದ ಮಾಸಾದಿ ವತ್ಸರಪರ್ಯಂತವಾದ ಕಾಲಗಣನೆಯನ್ನೆಲ್ಲ ನಿರಯನಮಾನದಿಂದಲೇ ನಿರೂಪಿಸಿರುವ ವಿಷ್ಣುಪುರಾಣಾದಿಗಳ **'ನಿರವಕಾಶ'** ವಚನಗಳನ್ನು ಹೇಗೂ ಬಾಧಿಸತಕ್ಕವುಗಳಲ್ಲವಾದುದರಿಂದಲೂ **'ನಿರಯನ ಸೌರಮಾನಮೇವ ಪುರಾಣಸಮ್ಮತಮಿತಿಸಿದ್ಧಂ'** ಎಂತ ಬರೆದದ್ದು ಅತ್ಯಂತ ಯೋಗ್ಯವಾಗಿದ್ದು ಅದು ಅಯೋಗ್ಯವೆಂಬ **ಇವರ ಮಾತೇ ಕೇವಲ ಅಯೋಗ್ಯವಾಗಿರುವುದು. 'ನಿರಯನ ಗಣನಯೈವ ಸರ್ವೋಽಪಿ ವ್ಯವಹಾರೋ ಯುಕ್ತಃ'** ಎಂಬ ಪೀಯೂಷಧಾರಾವಚನವು ಶ್ರುತಿ, ಸ್ಮೃತಿ, ಶಿಷ್ಟಾಚಾರಗಳಿಗೆಲ್ಲ ಸರಿಯಾಗಿಯೇ ಇರುವುದರಿಂದ ಹಿಂದೆ ಪುಟ೯೯ ರಲ್ಲಿ ಕಾಣಿಸಿರುವ **'ಕೇವಲಾರ್ಕೇಣ ಸರ್ವಸ್ಮಿನ್'** ಎಂಬ ವಚನದಂತೆಯೇ ಇದಾದರೂ ಸರ್ವಶಾಸ್ತ್ರಸಮ್ಮತವಾದ ನಿರ್ಣಯ ವಚನವೇ ಆಗಿರುತ್ತದೆ. ಇಲ್ಲಿ **"ವ್ಯವಹಾರಃ"** ಎಂಬ ಶಬ್ದದಿಂದ ಸಂಕಲ್ಪಾದಿಗಳಲ್ಲಿಯೂ ಇತರ ವ್ಯವಹಾರಗಳಲ್ಲಿಯೂ ಪರಂಪರೆಯಿಂದ ರೂಢವಾಗಿ [illegible] ಪ್ರಸಿದ್ಧಿಯು ಸೂಚಿತ

ನಾಗಿರುವುದರಿಂದ ಕೇವಲ ಅಪ್ರಸಿದ್ಧವೂ, ಅವ್ಯವಹಾರ್ಯವೂ ಆಗಿರುವ ಚಲಸಂಕ್ರಾಂತಿಯಲ್ಲಿ ಮಾಸ, ಅಯನಾದಿಗಳ ಆರಂಭವನ್ನು (ಕರ್ಮಾಂಗ ವಾಗಿ) ವ್ಯವಹರಿಸುವುದು ತಪ್ಪೇ ಆಗಿರುವುದಲ್ಲದೆ ಯಾರಾದರೂ ಪುಣ್ಯಾರ್ಥಿ ಗಳು ಸ್ನಾನ, ಜಪಾದಿಗಳನ್ನು ಸ್ವಕಾಮನೆಯಿಂದ ಆಚರಿಸಿದರೆ ಈ ನಿರ್ಣಯ ವಚನದಂತೆ ಅದು ತಪ್ಪಾಗುವುದಿಲ್ಲ. ಮತ್ತು ಗಣಿತಸಾಧನೆಯ ಬಗ್ಗೆ ಹೇಳಿ ದ ಕೆಲವು ನಿಯತವಿಷಯವನ್ನೂ, ಧರ್ಮಕರ್ಮಾದಿ ವ್ಯವಹಾರವನ್ನೂ ಪ್ರತ್ಯೇ ಕಿಸಿ ವಿಷಯಭೇದದಿಂದ ವ್ಯವಸ್ಥೆಯನ್ನು ನಿರೂಪಿಸಿರುವ ‘ನನು ಸಾಯನಗ ಣನಾ..........ಅಸಂಕೀರ್ಣೋ ವ್ಯವಹಾರೋ ಯುಕ್ತಃ’’ ಎಂಬ ವಾಕ್ಯಕ್ಕೆ ಆ ನಿರ್ಣಯದಿಂದ ಬೆಲೆಯಿಲ್ಲದಂತೆ ಆಗುವುದೂ ಇಲ್ಲ. ‘ಅಯನಾಂಶಾಃ ಪ್ರದಾತವ್ಯಾಃ’ ‘ತತ್ಸಂಸ್ಕೃತಾದ್ಗ್ರಹಾತ್’’ ಎಂಬ ವಚನಗಳಲ್ಲಿ ಲಗ್ನ, ಕ್ರಾಂ ತಿ, ಚರಾದಿ ನಿಯತವಿಷಯಗಳ ಗಣಿತದಲ್ಲಿ ಮಾತ್ರ ಅಯನಾಂಶವನ್ನು ಉಪಯೋಗಿಸಲಿಕ್ಕೆ ಹೇಳಿದ್ದು ಅದರಿಂದ ಸಂಸ್ಕಾರಫಲವನ್ನು ಸಾಧಿಸಿದ ನಂತರ ‘ಕೃತೇ ಕರ್ಮಣಿ ತೇ ತ್ಯಾಜ್ಯಾಃ’ ಅಂದರೆ– ಮುಂಚೆ ಸೇರಿಸಿಕೊಂ ಡ ಆ ಅಯನಾಂಶವನ್ನು ಕಳೆದುಬಿಡಬೇಕೆಂದು ಸ್ಪಷ್ಟವಾಗಿ ಹೇಳಿರುವುದರಿಂ ದಲೂ, ಮತ್ತು ಹಿಂದೆ ನಾವು ಆಯನಸಮರ್ಥನೆಯ ಖಂಡನೆಯಲ್ಲಿ ಕಾಣಿಸಿ ರುವಂತೆ ಇವರ ಪಕ್ಷದ ಮುಖಂಡರಾದ ಶ್ರೀ|| ಕೇತಕರರೇ ಸಾಯನಗಣನೆ ಯು ಧರ್ಮಕೃತ್ಯಗಳಲ್ಲಿ ಯೋಗ್ಯವಾದುದಲ್ಲವೆಂಬ ಅರ್ಥವನ್ನು ವ್ಯಕ್ತಪಡಿಸಿ ರುವುದರಿಂದಲೂ ಧರ್ಮಕರ್ಮಾರ್ಹವಾದ ಕಾಲಗಣನೆಯಲ್ಲಿ ಎಲ್ಲಿಯೂ,– ಶಾಸ್ತ್ರತಃ ವಿಷುವದ್ವಯ, ಅಯನದ್ವಯಗಳಿಗೂ ಸಹ ಅಯನಾಂಶಸಂಸ್ಕಾ ರವು ಬೇಡವೆಂದೇ ಸಿದ್ಧವಾಗುತ್ತದೆ.

ಇನ್ನು ಮುಹೂರ್ತಚಿಂತಾಮಣಿಯ ‘ಪೀಯೂಷಧಾರಾ’ ಟೀಕೆ ಯು ಇವರ ಸಾಯನ ವಿಷುವಾದಿವಾದಕ್ಕೆ ವಿಷಾಕ್ತ ಅಸಿಧಾರೆಯಂತಿದ್ದುದ ರಿಂದ ಅದನ್ನಿವರು ಎಷ್ಟೇ ತೆಗಳಿದರೂ ಅದರಿಂದ ಇವರಿಗೆ– ಇವರ ಪಕ್ಷಕ್ಕೆ ಇವರ ಪಂಚಾಂಗಕ್ಕೆ ಸಹ ಏನೂ ಬಲವು ಸಿಗಲಾರದು. ಆ ಗ್ರಂಥವು ಸಪ್ರ ಮಾಣವಾಗಿ ಇವರ ಸಾಯನವಾದವನ್ನು ಸರ್ವಾತ್ಮನಾ ಖಂಡಿಸಿರುತ್ತದೆಂದು ಅದನ್ನು ಅವಲೋಕಿಸಿರುವ ವಿದ್ವಜ್ಜನರಿಗೆಲ್ಲ ತಿಳಿದಿರತಕ್ಕದ್ದೇ ಆಗಿದೆ.

ಪುಟ ೪೮ ರಲ್ಲಿ ಇವರ ಸಹಕಾರಿಗಳ ‘ಅಯನಮೀಮಾಂಸಾ’ ಎಂ ಬ ಲೇಖನದ ಅರ್ಥವನ್ನು ತಿಳಿಯದೆ ‘ತಪ್ಪುಗ್ರಹಿಕೆಯಿಂದ ಇತ್ಯಾದಿ........ ಬ್ರುವಂತಿ’ ಎಂತ ಬರೆದದ್ದು ಎಂದಿದ್ದಾರೆ. ಆದರೆ ಶಾ. ವಿ. ಸಂ. ದಲ್ಲಿ ಅಯ ನಮೀಮಾಂಸೆಯ ಹೆಸರನ್ನು ತೆಗೆದುಕೊಂಡು ಆ ವಾಕ್ಯವನ್ನು ಬರೆದಿಲ್ಲವಾದ ಕಾರಣ ಅದು ಅಯನಮೀಮಾಂಸೆಯನ್ನೇ ಕುರಿತು ಬರೆಯಲ್ಪಟ್ಟದ್ದೆಂದು ಇವರು ಕಲ್ಪಿಸಿಕೊಂಡಿದ್ದೇ ಇವರ ತಪ್ಪುಗ್ರಹಿಕೆಯಾಗಿರುತ್ತದೆ. ಮುಂದೆ ತಿಥಿ ನಕ್ಷತ್ರಾದಿಗಳ, ಮೇಷಾದಿಸಂಕ್ರಾಂತಿಗಳ, ಹಾಗೂ ಚೈತ್ರಾದಿಮಾಸಗಳ

ಸಾಧನೆಗೆಲ್ಲ ನಿರಯನಭೋಗವನ್ನೂ, ವಿಷುವಾಯನಗಳ ಸಾಧನೆಗೆ ಮಾತ್ರ ಸಾಯನ ಸೂರ್ಯನನ್ನೂ ಮನ್ನಿಸಿರುತ್ತದೆಂದು ಬರೆದಿದ್ದಾರೆ. ಆದರೆ ಆ ಪ್ರಕಾರ ಸಾಯನ ನಿರಯನಗಳ ವ್ಯವಸ್ಥೆಯನ್ನು ಹೇಳಿರುವ ಸ್ಪಷ್ಟವಾದ ಒಂದು ಶಾಸ್ತ್ರವಚನವನ್ನಾದರೂ ಇವರು ತೋರಿಸಿಲ್ಲ. ಹಾಗೆ ತೋರಿಸಲಿಕ್ಕೆ ಶಕ್ಯವೂ ಇಲ್ಲ. ಹೀಗಿರುವಾಗ ಶಾಸ್ತ್ರವ್ಯವಸ್ಥೆಯನ್ನು ಬಿಟ್ಟು ಅವರವರ ಮನಬಂದಂತೆ ಕಲ್ಪಿಸಿಕೊಳ್ಳುವುದಾದರೆ ಇಂತಹ ಅಶಾಸ್ತ್ರೀಯವಾದ ವಿಕಲ್ಪನೆಗಳನ್ನು ಯಾರು ಎಷ್ಟು ಬೇಕಾದರೂ ಹುಟ್ಟಿಸಿಕೊಳ್ಳಬಹುದು. ಪರಂತು ಅಂತಹ ವಿಕಲ್ಪಗಳೇ ಶಾಸ್ತ್ರಸಿದ್ಧಾಂತವೆಂದು ವಾದಿಸುವುದು ಮಾತ್ರ **ಕೇವಲ ದುರ್ವಾದವಾಗಿರುತ್ತದೆಂಬುದನ್ನು ಇನ್ನಾದರೂ ಇವರು ತಿಳಿದಿರಲಿ!** ಅನಂತರ 'ಅಯನಮೀಮಾಂಸೆಯಲ್ಲಿ '**ಚಲಸಂಸ್ಕೃತತಿಗ್ಮಾಂಶೋಃ**' ಇತ್ಯಾದಿ ವಚನಗಳಿಂದ ಸಾಯನರವಿಸಂಕ್ರಮವು ಸಂಕ್ರಾಂತಿಯೆಂತಲೇ ಎಣಿಸಲ್ಪಡುತ್ತದೆಂಬುದನ್ನಿಷ್ಟೇ ಸಾಧಿಸಿರುತ್ತದೆ." ಎಂದು ಬರೆದಿದ್ದಾರೆ. ಆದರೆ ಯಾವ ಯಾವ ವಿಷಯದ ಬಗ್ಗೆ ಹಾಗೆ ಎಣಿಸಲ್ಪಡುತ್ತದೆಂಬ ವಿಷಯವಿಭಾಗವನ್ನೇನೂ ಅದರಲ್ಲಿ ಹೇಳಿಲ್ಲವಾದುದರಿಂದ '**ಅನುಕ್ತಂ ಸ್ಯಾದಸಮ್ಮತಂ**।' ಎಂಬಂತೆ ವಿಷಯಭೇದವಿಲ್ಲದೆ ಅವಿಶೇಷವಾಗಿ ಸರ್ವ ವಿಷಯಗಳಲ್ಲಿಯೂ ಸಾಯನಸಂಕ್ರಾಂತಿಗಳನ್ನೇ ಮನ್ನಿಸಿದಂತಾಗಿದೆ. ಮತ್ತು ಆ ಮೀಮಾಂಸೆಯ ಪುಟ ೬, ಪಂಗ್ತಿ ೨೨ ರಲ್ಲಿ '**ದ್ವಾದಶ ಸಂಕ್ರಾಂತಯಃ ಸಾಯನಾ ಏವೋಕ್ತಾಃ**। ಎಂತಲೂ ಪುಟ ೭ ರ ಅಂತ್ಯ ೮ ರ ಆದಿಯಲ್ಲಿ '**ಸರ್ವಮಪಿ ಸಾಯನಮೇವ**' ಎಂತಲೂ ಹೀಗೆಯೇ ಇನ್ನೂ ಅನೇಕ ವಾಕ್ಯಗಳು ಇರುವುದರಿಂದ ಸರ್ವತ್ರ ಸಾಯನಸಂಕ್ರಾಂತಿಯೇ ಶಾಸ್ತ್ರಸಮ್ಮತವಾದ್ದೆಂಬ ಆಭಾಸಕ್ಕೆ ಆಸ್ಪದವಾಗಿದೆ. ಆದುದರಿಂದ ಶಾ. ವಿ. ಪಂ. ಪುಟ ೮ ರಲ್ಲಿ ''**ಇತ್ಯಾದಿ.... ಸಾಯನಸಂಕ್ರಾಂತೇರೇವ ಸಂಕ್ರಾಂತಿಪದವಾಚ್ಯತ್ವಂ...ಬ್ರುವಂತಿ**।'' ಎಂಬುದು ಇವರ ಕಲ್ಪನೆಯಂತೆ ಅಯನಮೀಮಾಂಸೆಯನ್ನೇ ಕುರಿತು ಬರೆದದ್ದೆಂತ ಕಲ್ಪಿಸಿದರೂ ಅದು **ತಪ್ಪುಗ್ರಹಿಕೆಯಿಂದ ಬರೆದದ್ದೆಂತ ಆಗುವುದಿಲ್ಲ.** ಸೂರ್ಯಸಿದ್ಧಾಂತದ ಮಧ್ಯಾಧಿಕಾರದಲ್ಲಿಯೇ ರೇವತ್ಯಂತದಿಂದ ಅರ್ಥಾತ್ ಅಶ್ವಿನೀ ನಕ್ಷತ್ರಾದಿಯಿಂದ ೩೦-೩೦ ಭಾಗಗಳಿಗೆ ಒಂದೊಂದು ರಾಶಿಯನ್ನು ವಿಭಾಗಿಸಿದ್ದು ಅಂತಹ 'ರಾಶಿ'ಗಳೂ, ಅಲ್ಲಿ ಹೇಳಿರುವ ಸೌರವರ್ಷಪ್ರಮಾಣವೂ, ಎಲ್ಲ ಗ್ರಹರ ಗತಿಗಳೂ ನಿರಯನವಾಗಿಯೇ ಇರುತ್ತವೆಂಬುದು ನಿರ್ವಿವಾದವಾಗಿರುವುದರಿಂದ ಅದೇ ಮಧ್ಯಾಧಿಕಾರದ 'ಸಂಕ್ರಾಂತಿ' ಶಬ್ದಾರ್ಥದ ವಿವರಣೆಯಲ್ಲಿ '**ಸೂರ್ಯಮಂಡಲಕೇಂದ್ರಸ್ಯ ರಾಶ್ಯಾದಿಪ್ರದೇಶಸಂಚರಣಕಾಲಃ**' ಎಂಬ ಟೀಕೆಯೊಳಗಿನ 'ರಾಶಿ'ಶಬ್ದವು ನಿರಯನಮೇಷಾದಿರಾಶಿಗಳನ್ನು ಮಾತ್ರ ಬೋಧಿಸುವದಲ್ಲದೆ ಇವರು ಕಲ್ಪಿಸಿದಂತೆ ಸಾಯನ ರಾಶಿಗಳನ್ನು ಬೋಧಿಸುವುದೇ ಇಲ್ಲ. ಹಾಗೆ ಸಾಯನ ರಾಶಿಗಳನ್ನು ಬೋಧಿಸುತ್ತದೆಂದು ಕಲ್ಪಿಸಿದರೆ ಆ ಟೀಕೆಗೂ

ಮೂಲವಾದ ಸಿದ್ಧಾಂತಕ್ಕೂ, ಗಣಿತಕ್ಕೂ, ಉಪಪತ್ತಿಗೂ ಸಹ ಅತ್ಯಂತವಿರೋಧವಾಗುತ್ತದೆಂಬು ಸಿದ್ಧಾಂತಶಾಸ್ತ್ರಜ್ಞರಿಗೆಲ್ಲ ತಿಳಿದಿರತಕ್ಕದ್ದೇ ಆಗಿದೆ. ಆದುದರಿಂದ ಆ ವಚನವು ಇವರ **ಸಾಯನರಾಶಿ, ಸಾಯನಸಂಕ್ರಾಂತಿ ಕಲ್ಪನೆಗಳಿಗೆ ತೀರ ಬಾಧಕವಾಗಿರುತ್ತದೆ.**

ಪುಟ ೪೯ ರಲ್ಲಿ '**ಚಲಸಂಕ್ರಮಕಾಲೇ ಮಂಡಲಮಧ್ಯಸ್ಯ**' ಇತ್ಯಾದಿ ವಾಕ್ಯವು ಇವರ ಗೋಲಾನಭಿಜ್ಞತೆಯನ್ನು ವ್ಯಕ್ತಪಡಿಸುವುದಿಲ್ಲವೇ? ಎಂದಿದ್ದಾರೆ. ಆದರೆ ಆ ವಾಕ್ಯಕ್ಕೆ ನಾವು ಮೇಲೆ ಕಾಣಿಸಿರುವಂತೆ ಪೂರ್ವಾಪರ ಸಂಬಂಧ ಸಹಿತ ಶಾಸ್ತ್ರೀಯವಾಗಿ ಅರ್ಥಮಾಡಿದರೆ ಅದರಲ್ಲಿನ '**ರಾಶ್ಯಾದಿ**' ಎಂಬ ಶಬ್ದಕ್ಕೆ ನಿರಯನ ಮೇಷಾದಿ ರಾಶಿಗಳೆಂತಲೇ ಸ್ಪಷ್ಟವಾಗಿ ಅರ್ಥವಾಗುತ್ತಿದ್ದು ಅಂಥ ರಾಶ್ಯಾದಿಪ್ರವೇಶವು ಇವರ ಚಲಸಂಕ್ರಮದಲ್ಲಿ ಹೇಗೂ ಆಗುವುದಿಲ್ಲವಾದುದರಿಂದ ಆ ವಾಕ್ಯವನ್ನು ಇವರು ಆಕ್ಷೇಪಿಸಿದ್ದು **ಇವರ ಗೋಲಾನಭಿಜ್ಞತೆಯನ್ನೇ ವ್ಯಕ್ತಪಡಿಸುವುದು.**

ಮುಂದೆ '**ಅಯನಾದಯನಂ**' '**ತದಾಧಾರಯುತೇಃ**' ಇತ್ಯಾದಿ ಸಿದ್ಧಾಂತವಚನಗಳಲ್ಲಿ ನಿರೂಪಿಸಲ್ಪಟ್ಟಿರುವ ರಾಶಿಗಳೆಲ್ಲ ಸಾಯನಗಳೇ ಆಗಿರುತ್ತವೆಂಬ ಕಲ್ಪನೆಯನ್ನು ಕಾಣಿಸಿದ್ದಾರೆ. ಇದರಿಂದ ಈ ವಚನಗಳ ಮಧ್ಯದಲ್ಲಿರುವ **ಸ್ಫುಟೈರ್ಭಗಣಸಂಚರಾತ್ । ಕ್ಷೇತ್ರಾಣ್ಯೇವಮಜಾದೀನಾಂ ತಿರ್ಯಗ್ಜ್ಯಾಭಿಃ ಪ್ರಕಲ್ಪಯೇತ್ ॥**' ಎಂಬುದರ ತಾತ್ಪರ್ಯವನ್ನು ಇವರು ಗ್ರಹಿಸಲಿಲ್ಲವೆಂದು ಸ್ಪಷ್ಟವಾಗುತ್ತದೆ. ಮತ್ತು ಇವರೇ ಕಾಣಿಸಿರುವ '**ಮೀನಾಂತೇ ವಿಷುವತ್ಕಕ್ಷಾಯಾಂ**............' ಇತ್ಯಾದಿ ಟೀಕೆಯ ಅರ್ಥವನ್ನಾದರೂ ಇವರು ಸರಿಯಾಗಿ ಗ್ರಹಿಸಿದಂತೆ ತೋರುವುದಿಲ್ಲ. ಪರಂತು ಇಲ್ಲಿ ಹೇಳಿರುವ ಮೇಷಾದಿ ರಾಶಿಗಳೆಲ್ಲ ಸಾಯನಗಳೆಂಬ **ಇವರ ಕಲ್ಪನೆಯು** ಅದೇ ಹಿಂದಿನ ಪುಟದಲ್ಲಿ ಇವರೇ ಕಾಣಿಸಿರುವ "ಮೇಷಾದಿ ಸಂಕ್ರಾಂತಿಗಳ ಸಾಧನೆಗೆ ನಿರಯನಭೋಗವನ್ನೇ ಮನ್ನಿಸಿರುತ್ತದೆಂಬ" ಇವರ ಹೇಳಿಕೆಯಿಂದಲೂ, ಪುಟ ೩೩ ರಲ್ಲಿ ಇವರೇ ಕೊಟ್ಟಿರುವ ಭಚಕ್ರದ ಆಕೃತಿಯಿಂದಲೂ, **ಸ್ಪಷ್ಟವಾಗಿ ಖಂಡಿಸಲ್ಪಡುವುದರಿಂದ** ಪುನಃ ಇದನ್ನು ಖಂಡಿಸುವ ಬಗ್ಗೆ ನಾವು ವೃಥಾ ಲೇಖನವನ್ನು ವಿಸ್ತರಿಸಬೇಕಾದ ಅವಶ್ಯವಿರುವುದಿಲ್ಲ.

ಪುಟ ೫೦ ರಲ್ಲಿ ಕಾಣಿಸಿದ ಸಾಂಪಾತಿಕಭಗಣಪೂರ್ತಿ, ಸಾಯನಭಗಣಪೂರಣವೆಂಬುದೆಲ್ಲ ಕೇವಲ ಸ್ವಾಭಿಮತದ್ಯೋತಕವಾದ ಕಲ್ಪಿತ ಶಬ್ದಗಳಾಗಿದ್ದು ನಿಜವಾದ ಭಗಣಪೂರಣವು ನಿರಯನ ರಾಶಿಭೋಗದಿಂದ ಮಾತ್ರವೇ ಆಗುವುದರಿಂದಲೂ, ಅಯನಚಲನದ ಮೂಲಕ ಸಾಯನ ರಾಶಿಭೋಗದಿಂದ ನಿಜವಾದ ಭಗಣಪೂರ್ತಿಯು ಆಗುವುದಿಲ್ಲವಾದುದರಿಂದಲೂ, ಮತ್ತು '**ಅಯನಾದಯನಂ**' ಎಂಬ ಶ್ಲೋಕದಲ್ಲಿ ಕ್ರಾಂತಿ ವೃತ್ತವನ್ನು ಸಾಕ್ಷಾತ್ತಾಗಿ ನಿರೂ

ಪಿಸಿದ್ದು, ಸಂಕ್ರಾಂತಿ-ಹಾಗೂ ದಕ್ಷಿಣೋತ್ತರಾಯಣಗಳನ್ನು ಈ ವೃತ್ತದ ಮೂಲಕವೇ ನಿರೂಪಿಸತಕ್ಕದ್ದಾಗಿರುವುದರಿಂದಲೂ, ಸೂರ್ಯನ ಮೇಷಾದಿರಾಶಿಭೋಗವೂ ಭಗಣಪೂರ್ತಿಯೂ ಈ ವೃತ್ತದಲ್ಲಿಯೇ ಆಗತಕ್ಕದ್ದೆಂದು ಈ ಶ್ಲೋಕದಲ್ಲಿಯೂ, ಇವರ ಟೀಕೆಯಲ್ಲಿಯೂ ಸ್ಪಷ್ಟವಾಗಿದ್ದು ಅಂತಹ ಮೇಷಾದಿರಾಶಿಸ್ವರೂಪವನ್ನು ಅವಲಂಬಿಸಿಯೇ ಸಂಕ್ರಾಂತಿಯೂ, ದಕ್ಷಿಣೋತ್ತರಾಯಣಗಳೂ, ಭಗಣಪೂರ್ತಿಯೂ ನಿರ್ಣಯಿಸಲ್ಪಡತಕ್ಕವುಗಳಾಗಿರುವುದರಿಂದಲೂ ಶಾ. ವಿ. ಪಂ. ದಲ್ಲಿ '**ಸಾಯನಮಾನಾನುಸಾರತೋ ಮೇಷಾದಿರಾಶಿವಿಭಾಗಕಲ್ಪನಾದಿಕಂ ಕುರ್ವಂತಿ। ತದಸತ್**' ಎಂತ ಬರೆದುದು ಸಿದ್ಧಾಂತಜ್ಞಗೋಲಜ್ಞರಿಗೆಲ್ಲ ಶೋಭಿಸತಕ್ಕದ್ದೇ ಆಗಿದೆ.

ಮುಂದೆ ಸೂರ್ಯಸಿದ್ಧಾಂತದಲ್ಲಿ '**ತ್ರಿಂಶತ್ಕೃತ್ಯಃ........**' ಎಂಬಲ್ಲಿ ಹೇಳಿದ ಭಚಕ್ರದ ಪರಿಲಂಬನ (ಆಂದೋಲನ) ಸ್ಥಿತಿಯ ಮಿಥ್ಯಾತ್ವ (ಸುಳ್ಳುತನ)ವು ಇನ್ನು ೪೦೦ ವರ್ಷಗಳೊಳಗೆ ಪ್ರತ್ಯಕ್ಷ ಕಾಣುವುದು.' ಎಂದು ಅನಿಷ್ಟಕರವಾದ ಬಹು ದೂರದ ಭವಿಷ್ಯವೊಂದನ್ನು ಹೇಳಿಬಿಟ್ಟಿದ್ದಾರೆ. ಇವರ ಈ ಭವಿಷ್ಯದ ಅನುಭವವಾಗಲಿಕ್ಕೆ ೪೦೦ ವರ್ಷಗಳು ಕಳೆಯಬೇಕಾಗಿರುವುದರಿಂದ ಸದ್ಯಕ್ಕಂತೂ ಈ ಭವಿಷ್ಯದ ಸತ್ಯತೆಯನ್ನು ನಿರ್ಣಯಿಸಲಿಕ್ಕೆ ಯಾರಿಗೂ ಶಕ್ಯವಿರುವುದಿಲ್ಲ. ೪೦೦ ವರ್ಷಗಳಷ್ಟು ಸುದೀರ್ಘ ಕಾಲದ ವರೆಗೆ ಇವರ ಭವಿಷ್ಯದ ನಿರೀಕ್ಷಣೆ ಮಾಡಿಕೊಂಡಿರಲಿಕ್ಕೆ ಸಾಕಷ್ಟು ಅವಕಾಶವನ್ನು ಪಡೆದುಕೊಂಡಿಲ್ಲದ ಇವರ ಗ್ರಂಥದ ವಾಚಕರೆಲ್ಲರೂ ಈಗಿಂದೀಗಲೇ, ಇವರ ಕಲ್ಪನೆಯ ಸತ್ಯಾಸತ್ಯತೆಯನ್ನು ನಿರ್ಣಯಿಸಿಕೊಳ್ಳಬಹುದಾದ ಇನ್ನೊಂದು ಮಾರ್ಗವಿದೆ. ಏನಂದರೆ:— ಇವರ ಪಂಚಾಂಗ ಪ್ರಕಟನೆಯು ಶುರುವಾದಂದಿನಿಂದ ಕಳೆದ ಶುಕ್ಲಸಂವತ್ಸರದ ವರೆಗಿನ ಇವರ ಎಲ್ಲ ಪಂಚಾಂಗಗಳಲ್ಲಿ ಕರ್ಮಾರ್ಹವಾದ ದಕ್ಷಿಣೋತ್ತರಾಯಣಗಳನ್ನು ಒಂದೇ ಪ್ರಕಾರ ನಿರಯನ-ಕರ್ಕಟ-ಮಕರ ಸಂಕ್ರಾಂತಿಗಳಿಂದಲೇ ಆರಂಭಿಸಿ ಬರೆದಿದ್ದಾರೆ. ಮುಂದೆ ಪ್ರಮೋದಸಂವತ್ಸರದ ಈಚಿನ ಪಂಚಾಂಗಗಳಲ್ಲಿ ಮಾತ್ರ ಆ ಸಂಕ್ರಾಂತಿಗಳಿಂದ ೨೩—೨೪ ದಿವಸಗಳ ಮುಂಚಿತವಾಗಿಯೇ ದಕ್ಷಿಣೋತ್ತರಾಯಣಗಳನ್ನು ಬರೆಯುತ್ತಿದ್ದಾರೆ. ಇವೆರಡರಲ್ಲಿ ಯಾವುದಾದರೊಂದು ಶಾಸ್ತ್ರತಃ ಸುಳ್ಳಾಗಲಿಕ್ಕೇ ಬೇಕಷ್ಟೇ! 'ಭಚಕ್ರದ ಚಲನದ ಮೂಲಕ ಕರ್ಮಾರ್ಹವಾದ ಅಯನಾರಂಭಕಾಲವಾದರೂ ಬದಲಾಗುತ್ತದೆ'ಂಬ ಇವರ ಕಲ್ಪನೆಯನ್ನೇ ನಿಜವೆಂದು ತಿಳಿದರೂ ಶುಕ್ಲ ಸಂ।ದ ಉತ್ತರಾಯಣಾರಂಭದ ನಂತರ ಪ್ರಮೋದ ಸಂ।ದ ದಕ್ಷಿಣಾಯನವು ಬರುವುದರೊಳಗೆ ಮಧ್ಯದ ಆರು ಮಾಸಗಳಲ್ಲಿಯೇ ೨೩—೨೪ ದಿನಗಳ ಅಂತರ ಬರುವಷ್ಟು ಅಯನಾಂಶ (ಗತಿ) ಭೇದವಾಗುವದೆಂದು ಇವರ ನವೀನ ದೃಗ್ಗಣಿತ ಗ್ರಂಥಗಳಲ್ಲಿಯೂ ಸಹ ಹೇಳಿದ್ದಿಲ್ಲವಾದುದರಿಂದ ಆ ಪೈಕಿ ಯಾವುದಾದರೊಂದು ಸುಳ್ಳಿರುವುದೆಂದು ಇವರಾದರೂ

ಒಪ್ಪಲೇಬೇಕಾಗಿದೆ. ಇನ್ನು ಇವರ ಹಿಂದಿನ ಕ್ರಮವೇ ಸುಳ್ಳಾದ್ದೆನ್ನುವುದಾದರೆ ಅಷ್ಟುಕಾಲ ಸುಳ್ಳನ್ನು ಅಭ್ಯಾಸ(ಆವೃತ್ತಿ) ಮಾಡಿದವರು ಮತ್ತೊಂದು ಹೊಸ ಸುಳ್ಳನ್ನು ಯಾಕೆ ಕಲ್ಪಿಸಿಕೊಂಡಿರಬಾರದೆಂಬುದಕ್ಕೆ (ಬಹುಶಃ ಹಾಗಾಗುವ ಸಂಭವವೇ ಹೆಚ್ಚಿಗೆ ಇರುತ್ತದೆ. ಅಥಕ್ಕೆ) ಸಮರ್ಪಕವಾದ ಸಮಾಧಾನ ಸಿಗುವುದು ಕಷ್ಟವಾಗಿರುತ್ತದೆ. ಮತ್ತು ಹಿಂದೆ ಘಟಿಸಿದ ತಮ್ಮ ಸುಳ್ಳುತನಕ್ಕಾಗಿ ಶಾಸ್ತ್ರತಃ ಸರಿಯಾದ ನಿವೃತ್ತಿಯನ್ನಾದರೂ ಹೊಂದಬೇಕಾಗುತ್ತದೆ. ಇನ್ನು ಈಚೆಗಿನ ಇವರ ಹೊಸ ಪ್ರವೃತ್ತಿಯೇ ಸುಳ್ಳಾದ್ದೆಂತ ಒಪ್ಪಿಕೊಂಡರಂತೂ ಅವಶ್ಯವಾಗಿ ಇನ್ನಾದರೂ ಅದನ್ನು ತಿದ್ದಿಕೊಳ್ಳಬೇಕಾಗುತ್ತದೆ. ಹೇಗಿದ್ದರೂ ಈ ಉಭಯವಿಧಗಳಲ್ಲಿಯೂ ಸಂಕ್ರಮಣ ಹೊಂದಿರುವ ಕಾರಣ ಇವರ ಕೃತಿಯ ಸದೋಷತ್ವವೂ, **ಸುಳ್ಳುತನವೂ** ಸ್ವಯಂಸಿದ್ಧವಾಗಿರುವುದರಿಂದ ಇಂಥವರು ವರ್ತಮಾನಕಾಲದ ಯಾರೊಬ್ಬರಿಗೂ ಅನುಭವ ಹೊಂದಲಿಕ್ಕೆ ಸಾಧ್ಯವಿಲ್ಲದ ರೀತಿಯಲ್ಲಿ ಬಹುದೀರ್ಘಕಾಲದ ಅವಧಿಯನ್ನಿಟ್ಟು ಹೇಳಿದ **ಭವಿಷ್ಯವಾದರೂ** ಸ್ವಭಾವತಃ **ಸುಳ್ಳೆಂದೇ ಸಿದ್ಧವಾಗುವುದು.*** ಅಲ್ಲದೆ ಸೂರ್ಯಸಿದ್ಧಾಂತವು ಉಪದಿಷ್ಟವಾದಂದಿನಿಂದ ಅಂದರೆ:— **'ಅಲ್ಪಾವಶಿಷ್ಟೇ ತು ಕೃತೇ'** ಇತ್ಯಾದಿ ವಚನದಂತೆ ಕಳೆದ ಕೃತಯುಗಾಂತ್ಯದಿಂದ ಈ ವರೆಗೆ ಆಗಿಹೋದ ಮಹರ್ಷಿಗಳು, ಅವತಾರಪುರುಷರು, ಮಹಾಮಹಿಮರು, ಶ್ರೋತ್ರಿಯರು, ಘನವಿದ್ವಾಂಸರು, ಅಷ್ಟೇ ಅಲ್ಲ; **ಖರೇತನದ ಪಂಡಿತರು** ಸಹ ಅವ್ಯಾಹತವಾಗಿ ಪ್ರಮಾಣೀಕರಿಸಿ ಬಂದಿರುವ ಮತ್ತು ವೈದಿಕಧರ್ಮಾನುಯಾಯಿಗಳಾದ ಆಸ್ತಿಕ ಮಹಾಜನರೆಲ್ಲರಿಗೂ ಅತ್ಯಂತ ಪ್ರಮಾಣಭೂತವಾಗಿರುವ ಸೂರ್ಯಸಿದ್ಧಾಂತದಂತಹ ಪ್ರಾಮಾಣಿಕಗ್ರಂಥವು ಸುಳ್ಳುತನದ ಪ್ರಸಿದ್ಧಿಗೆ ಕಾರಣರಾದ ಯಾವ ಪಂಡಿತರ ಭವಿಷ್ಯದಿಂದಲೂ ಎಂದಿಗೂ **ಸುಳ್ಳಾಗಲಾರದು.** ಮತ್ತು **'ಅಥಾಯನಾಂಶಾಃ ಕರಣಾಬ್ದಲಿಪ್ತಾಃ'** ಇತ್ಯಾದಿ ವಚನಗಳು ಆಯಾ ಕಾಲದ ಅಯನಪ್ರವೃತ್ತಿಯನ್ನಷ್ಟೇ ಲಕ್ಷಿಸಿ ಹೇಳಲ್ಪಟ್ಟಿದ್ದು ಅವುಗಳಿಂದ ಸಹ **'ತ್ರಿಂಶತ್ಕೃತ್ಯಃ'** ಎಂಬಲ್ಲಿ ಹೇಳಿದ್ದರ **ಮಿಥ್ಯಾತ್ವವು ಸಿದ್ಧವಾಗುವುದಿಲ್ಲ.**

ಪುಟ ೫೧ ರಲ್ಲಿ— **'ದಕ್ಷಿಣೋತ್ತರಾಯಣಾರಂಭಸ್ಯ'** ಇತ್ಯಾದಿಗಳಿಂದ ಸಾಯನಾಯನ ಸಮರ್ಥಕರ ಮೇಲೆ **ಕೆಲವು** ದೋಷಾರೋಪಮಾಡಿದ್ದು ಅಸಂಗತವೆಂದಿದ್ದಾರೆ. ಸರಿ! ಆದರೆ ಶ್ರುತಿ, ಸ್ಮೃತಿ, ಶಿಷ್ಟಾಚಾರಗಳಿಗೆಲ್ಲ ವಿರುದ್ಧವಾಗಿರುವ ಸಾಯನಾಯನವನ್ನು ಸಮರ್ಥಿಸುವುದು **ಹಲವು** ದೋಷಗಳಿಗೆ ಕಾರಣವಾಗಿದ್ದು ಆ ಪೈಕಿ ಕೆಲವು ದೋಷಗಳನ್ನು ಮಾತ್ರ ಶಾ. ವಿ. ಸಂ. ದಲ್ಲಿ ಹೇಳಿದ್ದು ಸಾಕಲ್ಯವಾಗಲಿಲ್ಲವಾದರೂ ಅದು **ಅಸಂಗತವೆಂತಾಗುವುದಿಲ್ಲ.** ಅದರಿಂದ ಆ ಗ್ರಂಥಕರ್ತರ ಉದಾರತನವಷ್ಟೇ ವ್ಯಕ್ತವಾಗುತ್ತದೆ.

*ಮುಂದೆ ಭೀಷ್ಮನಿರ್ಯಾಣಕಾಲವನ್ನು ವಿವೇಚಿಸಿದ್ದು ಅದರಿಂದ ಈ ವಿಷಯವು ಸರಿಯಾಗಿ ದೃಢಪಡುವುದು

ಇನ್ನು ಅವರು ಕಲ್ಪಿಸಿಕೊಂಡ ಅಸಂಗತಿಯನ್ನು ತೋರಿಸಲಿಕ್ಕೆಂದು– "ಪೂರ್ವದಲ್ಲಿ ಸೌರವರ್ಷವನ್ನೂ, ಅಯನವನ್ನೂ ತಮ್ಮ ಸಾಯನೋತ್ತರಾಯನದ ಆದಿಯಲ್ಲಿಯೇ ಆರಂಭಿಸುತ್ತಿದ್ದರು; ಮುಂದೆ ತಮ್ಮ ಅಯನವನ್ನು (ಅದೊಂದನ್ನು) ಮಾತ್ರ ಸಾಯನವಾಗಿಟ್ಟುಕೊಂಡು ಉಳಿದ ಸಂಕ್ರಾಂತಿ ಸೌರವರ್ಷಾದಿಗಳನ್ನೆಲ್ಲ ನಿರಯನ ಮೇಷಾದಿಯಿಂದಲೇ ರೂಢಿಯಲ್ಲಿ ತಂದರು; ಅವಕ್ಕೂ ಮುಂದೆ ಶೂನ್ಯಾಯನಾಂಶಕಾಲದಿಂದ ಆ ಅಯನದ ಆರಂಭವು ಸಹ ನಿರಯನ ಕರ್ಕಮಕರಸಂಕ್ರಾಂತಿಗಳಿಂದಲೇ ರೂಢಿಯಲ್ಲಿ ಬರಹತ್ತಿತು;" ಈ ಮುಂತಾದ ಪೂರ್ವಾಪರ ಸಂಬಂಧವಿಲ್ಲದ ಮತ್ತು ನಿರಾಧಾರವಾದ ಸ್ವಕಪೋಲಕಲ್ಪಿತ ವಿಕಲ್ಪ, ಕುಕಲ್ಪಗಳನ್ನೆಲ್ಲ ಬರೆದು ಪುಟಗಳನ್ನಷ್ಟು ತುಂಬಿದ್ದಾರೆ. ಆದರೆ ಇವರ ಈ ಅರ್ಥಹೀನವಾದ ಬೊಬ್ಬಾಟವೆಲ್ಲ ಹೇಗೆ **ಅಶಾಸ್ತ್ರೀಯವೂ, ಅಸಂಗತವೂ, ತುಚ್ಛವೂ,** ಆಗಿರುತ್ತದೆಂಬುದನ್ನು ಈ ಹಿಂದೆ ಅಯನ ಸಮರ್ಥನೆಯ ಖಂಡನೆಯಲ್ಲಿಯೇ ವಿಸ್ತಾರವಾಗಿ ಪ್ರತಿಪಾದಿಸಿರುತ್ತೇವೆ. ಆದ್ದರಿಂದ ಇಂತಹ ನಿರಾಧಾರವಾದ ಕಲ್ಪನೆಯನ್ನೆಲ್ಲ ಪುನಃ ಇಲ್ಲಿ ಖಂಡಿಸಬೇಕಾದ ಅಗತ್ಯವಿರುವುದಿಲ್ಲ. ಇದೂ ಅಲ್ಲದೆ ಇವರ ಹಲವು ತರದ ವಿಕಲ್ಪನೆಗಳಿಗೆ ಆಧಾರವಾಗಿರುವ '**ಶೂನ್ಯಾಯನಾಂಶಕಾಲ**' ನೆಂಬುದಕ್ಕೆ ಶಾಸ್ತ್ರತಃ ಒಂದು ಕ್ಷಣಮಾತ್ರವಾದ ಸ್ಥಿತಿಯು ಕೂಡಾ ಇರುವುದಿಲ್ಲ. ಅಂದರೆ ಭಚಕ್ರವು ನಿರಂತರವಾಗಿ ಚಲಿಸುತ್ತಲೇ ಇರುವ ಮೂಲಕ ಅಯನಾಂಶವೇನೂ ಇಲ್ಲದಂತಾಗುವ ಸ್ಥಿತಿಯು ಕೇವಲ ನಿಮಿಷಮಾತ್ರವಾಗಿ ಘಟಿಸಬಹುದಲ್ಲದೆ ಅದರ ಪೂರ್ವೋತ್ತರ ಕ್ಷಣಗಳಲ್ಲಿ ಸಹ ಆ (ಶೂನ್ಯಾಯನಾಂಶ) ಸ್ಥಿತಿಯು ಸ್ಥಿರವಾಗಿರುವುದಿಲ್ಲ. ಹೀಗೆ ಹಿಂದೆ ಮುಂದಿಲ್ಲದ ಕೇವಲ ನಶ್ವರವಾದ ಕ್ಷಣಿಕ ಸ್ಥಿತಿಯನ್ನೇ ಸ್ಥಿರವೆಂದು (ಸುಳ್ಳಾಗಿ) ತಿಳಿದುಕೊಂಡು ಸಮಸ್ತ ಶಾಸ್ತ್ರವ್ಯವಹಾರಗಳೂ ರೂಢವಾದವು ಎಂದು ಇವರು ಕಲ್ಪಿಸಿರುವುದು **ಇವರ ಅತಿ ಸಾಹಸವೇ ಸರಿ.** ಇಷ್ಟೇ ಅಲ್ಲ; ಬೇರೆ ಬೇರೆ ಧರ್ಮಶಾಸ್ತ್ರಗ್ರಂಥಗಳಲ್ಲೆಲ್ಲ ಆಯಾ ಕಾಲದ ಅಯನಾಂಶಗಳನ್ನು ಹೇಳಿಯೂ ಕರ್ಮಾರ್ಹವಾದ ದಕ್ಷಿಣೋತ್ತರಾಯಣಾರಂಭವನ್ನು ನಿರಯನ ಕರ್ಕಟ-ಮಕರಸಂಕ್ರಾಂತಿಗಳಿಂದಲೇ ಹೇಳಿರುವುದರಿಂದ ಇವರ ಈ ಅತಿಸಾಹಸದ ಕಲ್ಪನೆಯಾದರೂ ತೀರ ನಿರರ್ಥಕವಾಗಿರುತ್ತದೆಂದು ಈ ಹಿಂದೆಯೇ ಅಲ್ಲಲ್ಲಿ ಸ್ಪಷ್ಟಪಡಿಸಿರುತ್ತೇವೆ.

ಇನ್ನು ಅದೇ ೫೧ ನೇ ಪುಟದ ಪಂಗ್ತಿ ೨೬—೨೭ ರಲ್ಲಿ ಮಾಸಾದಿಯಲ್ಲಿ ಪಕ್ಷವೂ, ವರ್ಷಾದಿಯಲ್ಲಿ ಮಾಸವೂ ಆರಂಭವಾದಂತೆ ಸೌರವರ್ಷಾದಿಯಲ್ಲಿ ಸೌರಾಯನ, ಋತುಗಳು ಯಾಕೆ ಆರಂಭವಾಗಬಾರದೆಂದು ನಮಗೊಂದು ವಿಕಟಪ್ರಶ್ನೆಯನ್ನಿಟ್ಟಿದ್ದಾರೆ. ಮತ್ತು ಇವರು ಈ ಪ್ರಶ್ನೆಯನ್ನಿಟ್ಟ ಧಾಟಿಯ ಮೇಲಿಂದ ಇದು ಉತ್ತರಿಸಲಿಕ್ಕೆ ಅಸಾಧ್ಯವಾದ ದುರಂತಪ್ರಶ್ನೆಯೆಂದು ಇವರು ಭಾವಿಸಿಕೊಂಡಂತೆ ತೋರುತ್ತದೆ. ಪಾಪ! ಶಾಸ್ತ್ರಪ್ರಮಾಣಗಳನ್ನೆಲ್ಲ

ಬಿಟ್ಟು ಕೇವಲ ಸ್ವಕಪೋಲಕಲ್ಪನೆಯಲ್ಲಿಯೇ ತಲ್ಲೀನರಾಗಿರುವ ಇಂತಹ ಪಂಡಿತರಿಗೆ ಹಾಗೆನ್ನಿಸುವುದು ಸಹಜವೇ ಸರಿ. ಆದರೆ ಶಾಸ್ತ್ರಾರ್ಥವನ್ನು ತಿಳಿದುಕೊಂಡು ಅದನ್ನು ಪ್ರಮಾಣೀಕರಿಸುವವರಿಗೆ ಇಂತಹ ಪ್ರಶ್ನೆಯೇ ಹುಟ್ಟುವುದಿಲ್ಲ. ಯಾಕಂದರೆ— ವಿಧಿ–ನಿಷೇಧಗಳಿಗೂ, ಕರ್ಮಕಾಲನಿರ್ಣಯಕ್ಕೂ ಶಾಸ್ತ್ರವೇ ಪರಮಪ್ರಮಾಣವಾಗಿದ್ದು ಅದರಂತೆ ಸೌರವರ್ಷಾದಿಯಲ್ಲಿಯೇ ಸೌರಾಯನವನ್ನು ಆರಂಭಿಸತಕ್ಕದ್ದೆಂಬ ಶಾಸ್ತ್ರವಿಧಿಯೇನೂ ಇಲ್ಲದೆ, ತದ್ವಿರುದ್ಧವಾಗಿ ಮೇಷಾದಿಯಿಂದ ಸೌರವರ್ಷವನ್ನೂ, ಕರ್ಕಟ-ಮಕರಸಂಕ್ರಾಂತಿಗಳಿಂದಲೇ ಅಯನಗಳನ್ನೂ ಆರಂಭಿಸಬೇಕೆಂದು ಸಕಲ ಶಾಸ್ತ್ರಗಳ ನಿರ್ಣೀತಾರ್ಥವಾಗಿರುವುದರಿಂದಲೂ, '**ಮೀನಮೇಷಯೋರ್ಮೇಷವೃಷಭಯೋರ್ವಾ ವಸಂತಃ**' ಎಂಬ ವೈಕಲ್ಪಿಕವಚನದಂತೆ ಸೌರವರ್ಷಾದಿಯಲ್ಲಿ ಸೌರ ಋತುವನ್ನು ಆರಂಭಿಸಲಿಕ್ಕೆ ಬಾಧಕವೇನೂ ಇಲ್ಲವಾದುದರಿಂದಲೂ ಇವರ ಈ ವಿಕಟಪ್ರಶ್ನೆಗೆ ಅವಕಾಶವೇ ಇರುವುದಿಲ್ಲ. ಆದುದರಿಂದ ಈ ಪ್ರಶ್ನೆಯು ಇವರ **ಮಹಾಮೌಢ್ಯವನ್ನು ಪ್ರದರ್ಶಿಸತಕ್ಕ ಧ್ವಜಸ್ತಂಭದಂತಿದೆ.** ಇನ್ನಾದರೂ ಈ ಪಂಡಿತರು "ಹಾಗೆ ಶಾಸ್ತ್ರವಾಗಲೀ, ಶಿಷ್ಟಾಚಾರವಾಗಲಿ ಇಲ್ಲದಿರುವುದರಿಂದಲೇ ಸೌರವರ್ಷಾದಿಯಲ್ಲಿ ಅಯನಾರಂಭವು ಆಗತಕ್ಕದ್ದಲ್ಲವೆಂದೂ, ಶಾಸ್ತ್ರಸಮ್ಮತವಾಗಿರುವುದರಿಂದ ಋತುವಿನ ಆರಂಭವು ಆಗಬಹುದೆಂತಲೂ ಮತ್ತು ಇದರಿಂದ ಇವರ ಪ್ರಶ್ನೆಯನ್ನು ನಾವು ಉತ್ತರಿಸಿದೆವೆಂತಲೂ ತಿಳಿದುಕೊಳ್ಳಲಿ! ಇನ್ನು ಇವರ ಪ್ರಶ್ನೆಗೆ ಪ್ರತಿಯಾಗಿ—'ಯಂತ್ರವೇಧ, ಛಾಯಾಸಾಧನಾದಿ ಸೂಕ್ಷ್ಮವಿಷಯಗಳಿಗೆಲ್ಲ ಅತ್ಯವಶ್ಯಕವಾಗಿರುವ ಅಕ್ಷ, ಅಯನ, ಲಂಬನಾದಿ ದೃಕ್ಸಂಸ್ಕಾರಗಳನ್ನೆಲ್ಲ ಮಾಡಿ ಇವರ ಮತದಂತೆ ಪ್ರತ್ಯಕ್ಷಸಿದ್ಧವಾಗುವ ಸೂಕ್ಷ್ಮತಿಥ್ಯಾದಿಗಳನ್ನು ತಿಥ್ಯಾದಿ ಪಂಚಾಂಗಗಣಿತದಲ್ಲಿಯೂ, ಕರ್ಮಾನುಷ್ಠಾನಗಳಲ್ಲಿಯೂ ಯಾಕೆ ಸ್ವೀಕರಿಸಬಾರದೆಂಬ" ಈ ಪ್ರಶ್ನೆಗೆ ಈ ಪ್ರತ್ಯಕ್ಷಪಂಡಿತರು ಪ್ರತ್ಯಕ್ಷಪ್ರಮಾಣವನ್ನೇ ಕೊಟ್ಟು ಉತ್ತರ ಹೇಳಬಲ್ಲರೇ ? ಒಟ್ಟಾರೆ ಯಾವುದನ್ನೂ ಪ್ರಮಾಣೀಕರಿಸದೆ ಕೇವಲ ಸ್ವಕಪೋಲ ಕಲ್ಪನೆಯಲ್ಲಿಯೇ ನಿರತರಾಗಿರುವವರಿಗೆ ಇಂತಹ ದುರಂತಪ್ರಶ್ನೆಗಳೆಲ್ಲ ನಿರುತ್ತರದ್ದಾಗಿ ಎದುರಿಸುತ್ತಿರುವುದು ಅಪರಿಹಾರ್ಯವಾಗಿದೆ. ಉಪಾಯವಿಲ್ಲ !

ಪುಟ ೫೧–೫೨ ರಲ್ಲಿ ತಮ್ಮ ಸಾಯನಮಾನದ ಗ್ರಾಹ್ಯತೆಯನ್ನೂ, ನಿರಯನ ಅಯನಾರಂಭಕ್ಕೆ ಬಾಧೆಯನ್ನೂ ಕಲ್ಪಿಸಿ ಕೆಲವು ಮಾತುಗಳನ್ನು ಬರೆದಿರುತ್ತಾರೆ. ಪರಂತು ಪ್ರಾಚೀನಕಾಲದಿಂದಲೂ ಚಾಂದ್ರ,ಸೌರಾದಿಮಾನಗಳನ್ನು ಶಾಸ್ತ್ರತಃ ವಿಷಯಭೇದದಿಂದ ಪರಿಗ್ರಹಿಸಿದ್ದರೂ ಮಾಸ,ಋತು,ಅಯನಾದಿ **ಕರ್ಮಾರ್ಹವಾದ ಕಾಲಗಣನೆಯಲ್ಲಿ** ಎಲ್ಲಿಯೂ ಇವರು ಕಲ್ಪಿಸಿಕೊಂಡ **ಸಾಯನಮಾನವನ್ನು ಸ್ವೀಕರಿಸಿದ್ದಿಲ್ಲ.** ಕ್ರಾಂತಿವೃತ್ತದಲ್ಲಿ ನಿರ್ದಿಷ್ಟವಾದ ನಿರಯನಮಕರಕರ್ಕಟಾರಂಭಸ್ಥಾನದಿಂದ ಕರ್ಮಾರ್ಹವಾದ ಅಯನಾರಂಭ

ವನ್ನು ಎಣಿಸುವುದು ಆರ್ಷಸಂಪ್ರದಾಯವೇ ಆಗಿರುತ್ತದೆಂದು ಈ ಹಿಂದೆ ಪುಟ ೭೨–೭೩ ರಲ್ಲಿ ಸಪ್ರಮಾಣವಾಗಿ ತೋರಿಸಿದೆ. ದಿಗ್ವ್ಯವಸ್ಥೆಯು ಕೇವಲಪ್ರತ್ಯಕ್ಷದಿಂದಲೇ ಸಿದ್ಧವಾಗತಕ್ಕದ್ದಾಗಿರದೆ ಶಾಸ್ತ್ರಾಪೇಕ್ಷೆಯುಳ್ಳದ್ದಾಗಿದೆ. ಜೀವನು ಸೂರ್ಯರಶ್ಮಿಯಲ್ಲಿ ಸೇರಿ ದೇವಲೋಕಕ್ಕೆ ಹೋಗುವುದು ಸಹ ಪ್ರತ್ಯಕ್ಷಗೋಚರಿಸತಕ್ಕದ್ದಾಗಿರದೆ ಶಾಸ್ತ್ರತಃ ಸಿದ್ಧವಾಗತಕ್ಕದ್ದಿದೆ. ಆದುದರಿಂದ ಆ ಶ್ರುತಿ–ಸ್ಮೃತ್ಯಾದಿ ಶಾಸ್ತ್ರನಿರ್ಣಯದಂತೆಯೇ **ಕ್ರಾಂತಿವೃತ್ತದ ನಿರ್ದಿಷ್ಟಸ್ಥಾನ ದಿಂದ** ಅಂದರೆ– ನಿರಯನ ಮಕರ–ಕರ್ಕಟಾದಿಯಿಂದ ಎಣಿಸುವ ಶಿವರ್ಾಹರ್ವಾದ **ಅಯನಾರಂಭದಿಂದ ಆರ್ಷಸಂಪ್ರದಾಯವಿರೋಧವಾಗಲಿ, ಪ್ರತ್ಯಕ್ಷಪ್ರಮಾಣ, ಅಯನಲಕ್ಷಣ, ಶ್ರುತಿತತ್ವಗಳಿಗೆ ಬಾಧೆಯಾಗಲಿ ಬರುವುದಿಲ್ಲ.** ಶಾಸ್ತ್ರಗಳಲ್ಲಿ ಜೀವಾತ್ಮನ ದೇವಯಾನ, ಪಿತೃಯಾನಗಳನ್ನು ನಿರ್ದೇಶಿಸಿರುವ ಅನೇಕ ಕಡೆಗಳಲ್ಲಿ ಉತ್ತರಾಯಣ, ದಕ್ಷಿಣಾಯನಾದಿ ಶಬ್ದಗಳಿಗೆ ಆಯಾ ಹೆಸರಿನ ದೇವತೆಗಳೆಂಬ ಅರ್ಥವಿರುವುದನ್ನು ಸಹ ಲಕ್ಷಿಸತಕ್ಕದ್ದಾಗಿದೆ.

ಪುಟ ೫೨ ರಲ್ಲಿ '**ಆಶ್ಲೇಷಾರ್ಧಾದ್ದಕ್ಷಿಣಂ**' ಎಂಬ ವರಾಹಮಿಹಿರೋಕ್ತಿಯಿಂದ ತಮ್ಮ ಸಾಯನಾಯನವೇ ಸಮರ್ಥಿತವಾಗುತ್ತದೆಂದು ಹೇಳಿಕೊಂಡಿದ್ದಾರೆ. ಇದಾದರೂ ತೀರ ವಿಸಂಗತಕಲ್ಪನೆಯೇ ಆಗಿರುತ್ತದೆಂದು ಹಿಂದೆ ಪುಟ೮೦ ರಲ್ಲಿ ನಾವು ವಿವರಿಸಿರುವ ವಿಷಯಗಳಿಂದ ನಿಶ್ಚಯವಾಗುವುದು. ಮತ್ತು ಸಾಯನಾಯನವು ಪ್ರತ್ಯಕ್ಷಪರೀಕ್ಷೆಯಿಂದ ವ್ಯಕ್ತವಾಗುವುದಾದರೂ ಅದು ವಿಕಾರವೇ ಆಗಿದ್ದು **ನಿರಯನಾಯನವೇ** ಯುಕ್ತವಾದದ್ದೆಂದು ವರಾಹಮಿಹಿರರು ಹೇಳಿರುವುದರಿಂದ ಅವರ ಕಾಲದಲ್ಲಿ ಸಾಯನಾಯನವು ನಿರಯನ ಕರ್ಕಮಕರಸಂಕ್ರಾಂತಿಗಳಲ್ಲಿ ಆಗುತ್ತಿದ್ದಿಲ್ಲವೆಂಬುದನ್ನು ಅವರು ಪ್ರತ್ಯಕ್ಷದಿಂದ ತಿಳಿದುಕೊಂಡಿದ್ದರೆಂದೂ, ಆದ್ದರಿಂದ ಅವರ ಕಾಲದಲ್ಲಿ ಶೂನ್ಯಾಯನಾಂಶವಿತ್ತೆಂಬುದು ವಿಸಂಗತ ಕಲ್ಪನೆಯೆಂದೂ ಆಗ ಪ್ರತ್ಯಕ್ಷಪರೀಕ್ಷೆಯಿಂದ ಸಿದ್ಧವಾಗದಿದ್ದರೂ ನಿರಯನ ಕರ್ಕ–ಮಕರ ಸಂಕ್ರಾಂತ್ಯಾದಿಯಾಗಿರತಕ್ಕ ಅಯನವೇ **ಯುಕ್ತವಾದುದೆಂದು** ಅವರು ಹೇಳಿದ್ದು ಶಾಸ್ತ್ರಾನುಸಾರವಾಗಿ ನಿಶ್ಚಯಿಸಿ ಹೇಳಿದ ನಿರ್ಣೀತಾರ್ಥವೇ ಆಗಿರುವುದೆಂದೂ, ಅವರ ಗ್ರಂಥದ ಪೂರ್ವಾಪರವನ್ನು ತಿಳಿದ ಪ್ರತಿಯೊಬ್ಬರಿಗೂ ತಾನಾಗಿ **ತಿಳಿಯುವಂತಿದೆ.** ಇವರು '**ಅನ್ಯತ್ವಂ ಪ್ರಕೃತೇರ್ಯತ್ತತ್**' ಈ ಮುಂತಾದ **ಆರ್ಷವಚನವು ಅಪ್ರಮಾಣವೆಂದು ತಿಳಿಯುವದು ಸರಿಯಲ್ಲ.** ಈಗಿನ ಕಾಲದಲ್ಲಿ ಪುರುಷರ ಶತಾಯುಷ್ಯಪ್ರಮಾಣವು ಬಹುಮಟ್ಟಿಗೆ ಹ್ರಾಸವಾಗುತ್ತಿದೆ ಎಂದು ತೋರುವ ಕಾರಣ ಶಾಸ್ತ್ರೋಕ್ತವಾದ ಆಯುರ್ಮಾನವು ಅಪ್ರಮಾಣವೆಂತಾಗಲಿ, ಅಪ್ರಾಕೃತವೆಂತಾಗಲಿ, ಈಗಿನ ಹೀನಾಯುರ್ಮಾನವೇ ಪ್ರಾಮಾಣಿಕವಾದ್ದೆಂತಾಗಲಿ ಕಲ್ಪಿಸುವುದು ಯುಕ್ತವಾದೀತೇ? ಅಂತೆಯೇ ಆರ್ಷವಚನಗಳನ್ನು ವ್ಯವಸ್ಥೆಯಿಂದಾದರೂ ಪ್ರಮಾಣೀಕರಿಸಬೇಕಲ್ಲದೆ ನಿರಾಕರಿಸುವುದು ಸರ್ವಥಾ ಯುಕ್ತವಲ್ಲವೆಂದು ಪ್ರಮಾಣಜ್ಞರು ತಿಳಿದಿರತಕ್ಕದ್ದಾಗಿದೆ.

'ಆದ್ಯಂ ಧನಿಷ್ಠಾಂಶಂ' ಇತ್ಯಾದಿ ವಚನಗಳಿಂದ ವೇದಾಂಗಜ್ಯೋತಿಷಾದಿ ವಚನದ ಉಪಪತ್ತಿಯನ್ನು ಹೇಳಿದ್ದರಿಂದ ಪುಟ ೫೩ರಲ್ಲಿ ಆ ಉಕ್ತಿಯು ಮಾನ್ಯವಲ್ಲವೆಂದಂತಾಯಿತೆಂದೂ, ಮತ್ತು ಹಿಂದಿನ ಕಾಲದ ವೇದಾಂಗ ಜ್ಯೋತಿಷಾದಿಗಳು ಮುಂದಿನ ಕಾಲದ ಬೃಹತ್ಸಂಹಿತಾವಚನವನ್ನವಲಂಬಿಸುವದು ಅಸಂಭವನೀಯವಲ್ಲವೇ? ಎಂದೂ ವೃಥಾ ಆಕ್ಷೇಪಿಸಿರುತ್ತಾರೆ. ಇದರಿಂದ ಶಾ. ವಿ. ಸಂ. ದ ಆ ಭಾಗದ ಅರ್ಥವೇ ಇವರಿಗೆ ತಿಳಿಯಲಿಲ್ಲವೆಂದು ಸಿದ್ಧವಾಗುತ್ತದೆ. ಹೇಗಂದರೆ— ವೇದಾಂಗಜ್ಯೋತಿಷದಲ್ಲಿ ಬಾರ್ಹಸ್ಪತ್ಯಮಾನವನ್ನವಲಂಬಿಸಿ ಯುಗ, ವರ್ಷಾದಿಗಳನ್ನು ಹೇಳಿದ್ದೆಂಬುದು ಬೃಹತ್ಸಂಹಿತಾವಚನದಿಂದಲೂ ಉಪಪನ್ನವಾಗುವುದೆಂದು ಮಾತ್ರ ಶಾ. ವಿ. ಸಂ. ದಲ್ಲಿ ಹೇಳಿರುವುದಲ್ಲದೆ ಇವರು ಆಕ್ಷೇಪಿಸುವಂತೆ ವೇದಾಂಗಜ್ಯೋತಿಷವು ಬೃಹತ್ಸಂಹಿತೆಯನ್ನು ಅವಲಂಬಿಸಿದ್ದೆಂದು ವಿಕಲ್ಪಾರ್ಥವಾಗುವಂತಹ ಸೂಚನೆಯು ಸಹ ಅದರಲ್ಲಿ ಇರುವುದಿಲ್ಲ. ಮತ್ತು **ವೇದಾಂಗಜ್ಯೋತಿಷಾದ್ಯುಕ್ತಿಯು ಮಾನ್ಯವಲ್ಲವೆಂದು ವ್ಯಕ್ತಪಡಿಸಿದ್ದೂ ಇಲ್ಲ.** ಅಷ್ಟೇ ಅಲ್ಲ; ಆ ಉಕ್ತಿಯಲ್ಲಿ ಹೇಳಿರುವ ಬಾರ್ಹಸ್ಪತ್ಯವರ್ಷದ ವಿನಿಯೋಗವನ್ನು ದೇಶಭೇದದಿಂದ ವ್ಯವಸ್ಥೆಪಡಿಸಿರುವ **'ಜೈವೋ ವಾ ನರ್ಮದೋತ್ತರೇ'** ಎಂಬ ವಚನವನ್ನು ಉದಾಹರಿಸಿ, ಅದು **ಮಾನ್ಯವೆಂದೇ ತೋರಿಸಿದೆ.** ಇನ್ನು ಬೃಹತ್ಸಂಹಿತೆಯಾದರೂ ವರಾಹಮಿಹಿರರ ಸ್ವಂತ ಕಲ್ಪನೆಯಾಗಿರದೆ ಪೂರ್ವಶಾಸ್ತ್ರಗಳ ಸಂಗ್ರಹವೇ ಆಗಿರುತ್ತದೆಂದು ಅದರ ಆರಂಭದಲ್ಲಿ ಹೇಳಿರುವ **' ಆಬ್ರಹ್ಮಾದಿವಿನಿಃಸೃತಮವಲೋಕ್ಯ ಗ್ರಂಥವಿಸ್ತರಂ ಕ್ರಮಶಃ! '** ಈ ಮೊದಲಾದ ಅವರ ವಚನಗಳಿಂದಲೇ ಸ್ಪಷ್ಟವಾಗುತ್ತದೆ. ಅಂತಹ ಸಂಗ್ರಹರೂಪವಾದ ಗ್ರಂಥದಲ್ಲಿ ಮಾಘಾದಿಯಾಗಿ ಆರಂಭವಾಗತಕ್ಕ ವತ್ಸರವು ಬಾರ್ಹಸ್ಪತ್ಯಮಾನವನ್ನೇ ಅವಲಂಬಿಸಿದ್ದೆಂತ ಸ್ಪಷ್ಟಪಡಿಸಿದ್ದು ಅದು ವೇದಾಂಗಜ್ಯೋತಿಷಾದಿ ಪೂರ್ವಗ್ರಂಥಗಳಲ್ಲಿ ಮಾಘಾದಿಯಾಗಿ ಹೇಳಿರುವ ವತ್ಸರಾದಿಗಣನೆಯಾದರೂ ಬಾರ್ಹಸ್ಪತ್ಯಮಾನವನ್ನು ಅವಲಂಬಿಸಿದ್ದೆಂತ ನಿಷ್ಕರ್ಷಿಸಿಯೇ ಹಾಗೆ ಹೇಳಲ್ಪಟ್ಟಿರುವುದೆಂದು ಸಹಜವಾಗಿ ಎಲ್ಲರಿಗೂ ತಿಳಿಯುತ್ತದೆ. ಬಾರ್ಹಸ್ಪತ್ಯಮಾನವು ವರಾಹಮಿಹಿರರಿಂದ ನೂತನವಾಗಿ ಸೃಷ್ಟಿಸಲ್ಪಟ್ಟದ್ದಲ್ಲವಾದುದರಿಂದ ಹಾಗೆ ತಿಳಿಯುವುದರಲ್ಲಿ ಅಸಂಭವನೀಯವೇನೂ ಇರುವುದಿಲ್ಲ. ಈ ಯಾವುದನ್ನೂ ಗ್ರಹಿಸದೆ ಈ ಭಾಗದಲ್ಲಿ ಇವರು ತೆಗೆದ ಆಕ್ಷೇಪವು ಇವರ ಕೇವಲ ಅಜ್ಞಾನ ಅಥವಾ ಅವಿವೇಕವನ್ನಷ್ಟೇ ವ್ಯಕ್ತಪಡಿಸುತ್ತದೆ. ಇನ್ನಾದರೂ ಇವರು ಯಾವುದೊಂದು ವಚನಕ್ಕೆ ಶಾಸ್ತ್ರ ಸಮ್ಮತವಾದ ವ್ಯವಸ್ಥೆಯನ್ನು ತೋರಿಸುವುದರಿಂದ ಅದನ್ನು ಅಮಾನ್ಯ ಮಾಡಿದಂತಾಗುವುದಿಲ್ಲವೆಂದೂ, ಮತ್ತು ಹಿಂದು-ಮುಂದಿನ ನಿಬಂಧಾರ್ಥಗಳಿಗೆಲ್ಲ ಹೊಂದಿಸಿಕೊಂಡೇ ಶಾಸ್ತ್ರದ ಏಕಾಂತಿಕವಾದ ತಾತ್ಪರ್ಯವನ್ನು ನಿರ್ಣಯಿಸಬೇಕಾಗುತ್ತದೆಂದೂ ವಿವೇಕದಿಂದ ತಿಳಿದುಕೊಳ್ಳಲಿ!

ಪುಟ ೫೩ ರಲ್ಲಿ 'ಅಯನಸ್ಥಿತಯೋ ಶ್ರಾದ್ಧಂ' ಇತ್ಯಾದಿಗಳಿಗೆ ಇವರು ಹೇಳುವ ಸಾಯನಾಯನಪರವಾದ ಅರ್ಥವನ್ನು ಹಿಂದೆ ಪುಟ ೪೭ ರಲ್ಲಿಯೂ 'ಸಂವತ್ಸರಾಯ ದೀಕ್ಷಿಷ್ಯಮಾಣಾ' ಇತ್ಯಾದಿ ಶ್ರುತಿಯನ್ನೆತ್ತಿ ಮಾಘಕೃಷ್ಣಾಷ್ಟಮಿಯು ಸೌರವರ್ಷಾರಂಭದಿನವೆಂದು ಕಲ್ಪಿಸಿದುವುದನ್ನು ಪುಟ ೭೧ ರಲ್ಲಿಯೂ ಸಮೂಲವಾಗಿ ಖಂಡಿಸಿರುವುದರಿಂದ ಇಲ್ಲಿ ಪುನಃ ಖಂಡಿಸತಕ್ಕದ್ದೇನೂ ಉಳಿದಿರುವುದಿಲ್ಲ. ಆ ವಚನಗಳು ತಮ್ಮ ಸಾಯನಾಯನವನ್ನು ಸಮರ್ಥಿಸುತ್ತವೆಂದು ಇವರು ಹೇಳಿಕೊಳ್ಳುವುದು ತೀರ ಅನ್ಯಾಯವಾಗಿರುತ್ತದೆ.

ಮುಂದೆ ಮಹಾಭಾರತದ 'ನಿವೃತ್ತಮಾತ್ರೇ ತ್ವಯನೇ' ಎಂಬ ವಚನವು ತಮ್ಮ ಸಾಯನಾಯನವನ್ನೇ ಸಮರ್ಥಿಸುತ್ತದಲ್ಲದೆ ಅದನ್ನು ನಿರ್ಮೂಲ ಮಾಡುವುದಿಲ್ಲವೆಂದು ಆಕ್ಷೇಪಿಸಿದ್ದಾರೆ. ಆದರೆ ಈ ವಿಷಯವನ್ನು ಇವರು ಸ್ವಲ್ಪಮಟ್ಟಿಗಾದರೂ ಸಮೂಲವಾಗಿ ವಿವೇಚಿಸಿದ್ದರೆ ಹೀಗೆ ಆಕ್ಷೇಪಿಸಲಿಕ್ಕೆ ಕಾರಣವೇ ಇರುತ್ತಿರಲಿಲ್ಲ. ಶಾ. ವಿ. ಸಂ. ದಲ್ಲಿ ಇದನ್ನು ವಿಶೇಷವಾಗಿ ವಿವರಿಸಿರುವುದರಿಂದ ಸಹ ಇವರ ಈ ಆಕ್ಷೇಪಕ್ಕೆ ಎಡೆಯಾಗಿರಬಹುದು. ಆದುದರಿಂದ ಈ ವಿಷಯವನ್ನು ಸಂಕ್ಷೇಪವಾಗಿಯಾದರೂ ಇಲ್ಲಿ ವಿವರಿಸುವುದು ಅಗತ್ಯವಿದೆ. ಮೂಲ ಮಹಾಭಾರತದ ಶಾಂತಿಪರ್ವದಲ್ಲಿ ಭೀಷ್ಮರು ಯುಧಿಷ್ಠಿರನಿಗೆ ವಿಸ್ತಾರವಾಗಿ ಧರ್ಮೋಪದೇಶವನ್ನು ಮಾಡಿರುವುದಕ್ಕೆ ಮುಂಚೆಯೇ ಅಂದರೆ ಶಾಂತಿ ಪರ್ವದ* ೪೭ ನೇ ಅಧ್ಯಾಯದ ೩ ನೇ ಶ್ಲೋಕವು 'ನಿವೃತ್ತಮಾತ್ರೇ ತ್ವಯನ ಉತ್ತರೇ ವೈ ದಿವಾಕರೇ । ಸಮಾವೇಶಯದಾತ್ಮಾನಮಾತ್ಮನ್ಯೇವ ಸಮಾಹಿತಃ ॥' ಎಂದಿದ್ದು ಅದರ ಮುಂದಿನ ಶ್ಲೋಕವು 'ವಿಕೀರ್ಣಾಂಶುರಿವಾದಿತ್ಯೋ ಭೀಷ್ಮಃ ಶರಶತೈಶ್ಚಿತಃ । ಶುಶುಭೇ ಪರಯಾ ಲಕ್ಷ್ಮ್ಯಾ......।' ಇತ್ಯಾದಿ ಇರುತ್ತದೆ. ಇನ್ನು ಪಂಚರತ್ನಗೀತೆಯೊಳಗಿನ ಭೀಷ್ಮಸ್ತವರಾಜದ ಕೆಲವು ಮುದ್ರಿತಪ್ರತಿಗಳಲ್ಲಿ ಈ ಎರಡು ಶ್ಲೋಕಗಳ ಮಧ್ಯದಲ್ಲಿ "ಶುಕ್ಲಪಕ್ಷಸ್ಯ ಚಾಷ್ಟಮ್ಯಾಂ ಮಾಘಮಾಸಸ್ಯ ಪಾರ್ಥಿವ । ಪ್ರಾಜಾಪತ್ಯೇ ಚ ನಕ್ಷತ್ರೇ ಮಧ್ಯಂ ಪ್ರಾಪ್ತೇ ದಿವಾಕರೇ ॥ " ಎಂಬ ಶ್ಲೋಕವೊಂದು ಹೆಚ್ಚಿಗೆ ಕಾಣಿಸಿದ್ದು ತೋರುತ್ತದೆ. ಮಾಘಶುಕ್ಲಾಷ್ಟಮಿಯಲ್ಲಿ ಭೀಷ್ಮರು ದೇಹಬಿಟ್ಟದ್ದೆಂಬುದು ನಿರ್ವಿವಾದವಾಗಿದ್ದರೂ ಮೇಲಿನ 'ನಿವೃತ್ತಮಾತ್ರೇ' ಎಂಬ ಶ್ಲೋಕದಲ್ಲಿ ಹೇಳಿರುವಂತೆ ಅವರು ಆತ್ಮಸಮಾವೇಶಮಾಡಿ ಪರಮಾತ್ಮಧ್ಯಾನದಲ್ಲಿ ಪ್ರವೃತ್ತರಾದುದು ದೇಹಬಿಡುವುದಕ್ಕಿಂತ ಎಷ್ಟೋ ದಿವಸಗಳ ಮೊದಲೇ ಆಗಿರುತ್ತದೆ. ಈ ವಿಷಯವು ಆ ಮೇಲೆ ಹಲವು ದಿವಸಗಳ ವರೆಗೆ ನಡೆದ ಭೀಷ್ಮ-ಯುಧಿಷ್ಠಿರ ಸಂವಾದಾತ್ಮಕವಾದ ಧರ್ಮಾನುಶಾಸನದ ಕಥಾಭಾಗಗಳಿಂದಲೂ, ಶಾಂತಿಪರ್ವದ ಮುಂದಿನ ಭಾಗಗಳಿಲ್ಲ ಧರ್ಮೋಪದೇಶದ

* ಇಲ್ಲಿ ಕಾಣಿಸಿದ ಅಧ್ಯಾಯ ಮತ್ತು ಶ್ಲೋಕಸಂಖ್ಯೆಗಳು ನೀಲಕಂಠೀಯ ಟೀಕಾಸಹಿತವಾಗಿ ಪುಣೆಯಲ್ಲಿ ಮುದ್ರಿತವಾದ ಪ್ರತಿಯಲ್ಲಿದ್ದಂತೆ ಇರುತ್ತವೆ.

ಲ್ಲಿಯೇ ಮುಗಿದಿದ್ದು ಅದನ್ನೆಲ್ಲ ಕೇಳಿಕೊಂಡ ಯುಧಿಷ್ಠಿರನು ತಿರುಗಿ ಹಸ್ತಿನಾಪತಿಗೆ ಬಂದನಂತರ ಸಹ ಕೆಲವು ದಿವಸಗಳು ಸಂದು ಆ ಮೇಲೆ ಅನುಶಾಸನ ಪರ್ವದಲ್ಲಿ ಭೀಷ್ಮರು (ಮಾಘ ಶುಕ್ಲ ೮ ಯಲ್ಲಿ) ದೇಹ ಬಿಟ್ಟರೆಂದು ಮಹಾಭಾರತದಲ್ಲಿಯೇ ಸ್ಪಷ್ಟವಾಗಿ ಉಲ್ಲೇಖವಿರುವುದರಿಂದಲೂ ನಿಸ್ಸಂದಿಗ್ಧವಾಗಿ ಸಿದ್ಧವಾಗುತ್ತದೆ. ಮತ್ತು ಭೀಷ್ಮರು ಈ 'ನಿವೃತ್ತಮಾತ್ರೇ' ಎಂಬ ಶ್ಲೋಕದಲ್ಲಿ ಹೇಳಿದಂತೆ ಆತ್ಮಸಮಾವೇಶಮಾಡಿದ ನಂತರ ಅವರು ಆರಂಭಿಸಿರುವ ಭೀಷ್ಮಸ್ತವರಾಜದಿಂದ ಸಂತುಷ್ಟನಾದ ಶ್ರೀಕೃಷ್ಣನೂ, ಯುಧಿಷ್ಠಿರಾದಿಗಳೂ ಭೀಷ್ಮರ ದರ್ಶನಕ್ಕಾಗಿ ಅವರಬಳಿಗೆ ಬಂದು ಅವರನ್ನು ಸಂತೈಸಿ ಯುಧಿಷ್ಠಿರನಿಗೆ ಧರ್ಮಾನುಶಾಸನ ಪಾಠಬೇಕೆಂದೂ, ಮತ್ತು ಆ ಮಾರನೇ ದಿನದಿಂದ ಅದು ಆರಂಭವಾಗಬೇಕಾಗಿಯೂ ಹೇಳಿಕೊಂಡು ತಿರುಗಿ ಹಸ್ತಿನಾಪತಿಗೆ ಹೊರಟರು. ಆಗ ಸೂರ್ಯನು ಪಶ್ಚಿಮ ದಿಕ್ಕಿನಲ್ಲಿ ಮುಹೂರ್ತಮಾತ್ರವಾಗಿದ್ದನು. ಬರುವಾಗ ಮಾರ್ಗದಲ್ಲಿ ಸೂರ್ಯಾಸ್ತಮಯವಾದ ನಂತರ ಇವರಿಗೆಲ್ಲ ಆಹ್ಲಾದವುಂಟಾಗುವಂತೆ ಪೂರ್ವದಿಕ್ಕಿನಲ್ಲಿ ಚಂದ್ರೋದಯವಾಯಿತು. ಈ ವಿಷಯಗಳು ಅದೇ ಶಾಂತಿಪರ್ವದ ೫೨ ನೆಯ ಅಧ್ಯಾಯದ ಶ್ಲೋಕ ೨೬. **ತತೋ ಮುಹೂರ್ತಾದ್ಭಗವಾನ್ ಸಹಸ್ರಾಂಶುರ್ದಿವಾಕರಃ। ದಹನ್ ವನಮಿವೈಕಾಂತೇ ಪ್ರತೀಚ್ಯಾಂ ಪ್ರತ್ಯದೃಶ್ಯತ॥**' ಶ್ಲೋಕ ೨೯. '**ಶ್ವಃ ಸಮೇಷ್ಯಾಮ ಇತ್ಯುಕ್ತ್ವಾ ಯಥೇಷ್ಟಂ ತ್ವರಿತಾ ಯಯುಃ।**' ಶ್ಲೋಕ ೩೩. '**ತತಃ ಪುರಸ್ತಾದ್ಭಗವಾನ್ನಿಶಾಕರಃ ಸಮುತ್ಥಿತಸ್ತಾಮಭಿಹರ್ಷಯಂಸ್ತ್ವಮೂಂ। ದಿವಾಕರಾಪೀತರಸಾ ಮಹೌಷಧೀಃ ಪುನಃ ಸ್ವಕೇನೈವ ಗುಣೇನ ಯೋಜಯನ್॥**' ಇತ್ಯಾದಿ ವಚನಗಳಿಂದ ಸ್ಪಷ್ಟವಾಗುತ್ತದೆ. ಇಲ್ಲಿ ಸಾಯಂಕಾಲದಲ್ಲಿ ಚಂದ್ರೋದಯವಾಗಿರುವುದನ್ನು ಹೇಳಿರುವುದರಿಂದ ಆದಿನ ಪೂರ್ಣಿಮೆ ಅಥವಾ ಬಹುಳಪಾಡ್ಯವಿರಬಹುದೆಂದು ತಿಳಿಯಬೇಕಾಗುತ್ತದೆ. ಶುಕ್ಲಪಕ್ಷದ ಯಾವ ತಿಥಿಯಲ್ಲಿಯೂ ರಾತ್ರಿಯಲ್ಲಿ ಚಂದ್ರೋದಯವಾಗುವುದಿಲ್ಲವಾದುದರಿಂದ ಈ ಘಟನೆಯು ಮಾಘಶುಕ್ಲಾಷ್ಟಮಿಯಲ್ಲಿ ಅಥವಾ ಯಾವುದೇ ಮಾಸದ ಶುಕ್ಲಪಕ್ಷದ ಯಾವ ತಿಥಿಯಲ್ಲಾದರೂ (ಪೂರ್ಣಿಮೆಯ ಹೊರತು) ಸಂಭವಿಸಿತೆಂದು ಕಲ್ಪಿಸಲಿಕ್ಕೆ ಸಾಧ್ಯವೇ ಇಲ್ಲ. ಇವುಗಳಿಂದೆಲ್ಲ '**ನಿವೃತ್ತಮಾತ್ರೇ ತ್ವಯನೇ**' ಎಂಬ ಶ್ಲೋಕದಲ್ಲಿ ಹೇಳಿರುವ ಉತ್ತರಾಯಣಾರಂಭದಿನವು ಭೀಷ್ಮರು ಅಂತರ್ಮುಖರಾಗಿ ಧ್ಯಾನಾಸಕ್ತರಾದ ದಿನವಾಗಿತ್ತೆಂತಲೂ, ಅವರು ದೇಹಬಿಟ್ಟ ಮಾಘಶುಕ್ಲಾಷ್ಟಮಿಯ ದಿನವಲ್ಲೆಂತಲೂ ಸ್ಪಷ್ಟವಾಗಿ ತಿಳಿಯುತ್ತದೆ. ಇದಕ್ಕೆ ವಿರೋಧವಾಗಿ ಮೇಲೆ ಕಾಣಿಸಿದ '**ಶುಕ್ಲಪಕ್ಷಸ್ಯ ಚಾಷ್ಟಮ್ಯಾಂ**' ಎಂಬ ಹೆಚ್ಚಿಗೆ ಶ್ಲೋಕವು ಭೀಷ್ಮರು ಆತ್ಮಸಮಾವೇಶ ಮಾಡಿದ ದಿನವೇ ದೇಹಬಿಟ್ಟರೆಂಬ ಪೂರ್ವಾಪರವಿರುದ್ಧವಾದ ಅರ್ಥವನ್ನು ಕೊಡುತ್ತಿರುವುದರಿಂದಲೂ, ಮೂಲಭಾರತದ ಪ್ರಸಿದ್ಧ ಪುಸ್ತಕಗಳಲ್ಲೆಲ್ಲಿಯೂ ಈ ಶ್ಲೋಕವಿಲ್ಲದಿರು

ನ್ನ್ರಂದಲೂ ಇದು ಬಹುಶಃ ಪ್ರಕ್ಷಿಪ್ತ ಶ್ಲೋಕವಿರಬೇಕೆಂದು ತಿಳಿಯುತ್ತದೆ. ಇದರಂತೆ ಮುಂಬಯಿಯ 'ನಿರ್ಣಯಸಾಗರ' ದಲ್ಲಿ ಮುದ್ರಿತವಾಗಿ ಕುಂಭಕೋಣದ ಸುಪ್ರಸಿದ್ಧ ಟಿ. ಆರ್. ಕೃಷ್ಣಾಚಾರ್ಯರವರಿಂದ ಪ್ರಕಟಿಸಲ್ಪಟ್ಟ ಪುಸ್ತಕದಲ್ಲಿಯೂ, ಇನ್ನೂ ಕೆಲವು ಬೇರೆ ಪುಸ್ತಕಗಳಲ್ಲಿಯೂ ಈ ಶ್ಲೋಕವು ಪ್ರಕ್ಷಿಪ್ತವೆಂದು ಕಾಣಿಸಿದೆ. ಆದ್ದರಿಂದ ಮಾಘ ಶುಕ್ಲಾಷ್ಟಮಿಯಲ್ಲಾಗಿರುವ ಭೀಷ್ಮರ ನಿರ್ಯಾಣದ ಪ್ರಸಿದ್ಧಿಯನ್ನು ಸಮಾವೇಶ ಮಾಡಲಿಕ್ಕಾಗಿ ಭಾರತದಲ್ಲಿ ಈ ಶ್ಲೋಕವನ್ನು ಹಿಂದಿನಿಂದ ಸೇರಿಸಿದ್ದೂ ಇರಬಹುದು. ಅಥವಾ ಭೀಷ್ಮರ ನಿರ್ಯಾಣದ ಸಂದರ್ಭದಲ್ಲಿ ಅಂದರೆ– ಅನುಶಾಸನ ಪರ್ವದಲ್ಲಿ ಇರಬಹುದಾಗಿದ್ದ ಈ ಶ್ಲೋಕವನ್ನು ಭೀಷ್ಮಸ್ತವರಾಜವು ಭೀಷ್ಮರು ನಿರ್ಯಾಣಕಾಲದಲ್ಲಿ ಹೇಳಿದ ಮಹತ್ವದ ಸ್ತೋತ್ರವೆಂದು ಜ್ಞಾಪಿಸಲಿಕ್ಕೋಸ್ಕರ ಅದನ್ನು ಇಲ್ಲಿಗೆ ಎಳೆದು ಹಚ್ಚಿರಲೂ ಬಹುದು. ಹೇಗಿದ್ದರೂ ಉತ್ತರಾಯಣಾರಂಭದಲ್ಲಿಯೇ ಭೀಷ್ಮರು ಆತ್ಮಸಮಾವೇಶ ಮಾಡಿರುವರೆಂತಲೂ, ಮುಂದೆ ಅನೇಕ ದಿವಸಗಳ ನಂತರ ದೇಹಬಿಟ್ಟರೆಂತಲೂ ನಿರ್ವಿವಾದವಾಗಿ ಸಿದ್ಧವಾಗುವುದರಿಂದ ಆ ಕಾಲದಲ್ಲಿ ಮಾಘಶುಕ್ಲಾಷ್ಟಮಿಯಲ್ಲಿಯೇ ಉತ್ತರಾಯಣಾರಂಭವಾದ್ದಲ್ಲವೆಂದೂ, ಅದಕ್ಕಿಂತ ಮುಂಚೆಯೇ ಅದು ಆರಂಭವಾಗಿತ್ತೆಂದೂ ಸ್ಪಷ್ಟವಾಗುವುದು. ಇನ್ನು ಆ ಭೀಷ್ಮರು ಆತ್ಮಸಮಾವೇಶ ಮಾಡಿದ್ದಕ್ಕೂ, ದೇಹ ಬಿಟ್ಟದ್ದಕ್ಕೂ ಮಧ್ಯದಲ್ಲಿ ಎಷ್ಟು ದಿನಗಳು ಕಳೆದವೆಂಬ ವಿಚಾರದಲ್ಲಿ ಕೆಲ ಕೆಲವು ಮತಭೇದಗಳಿರಬಹುದಾದರೂ ಅವರು ಪುಷ್ಯಮಾಸದಲ್ಲಿಯೇ ಆತ್ಮಸಮಾವೇಶ ಮಾಡಿದ್ದೆನ್ನುವಲ್ಲಿ ಮತಭೇದ ತೋರುವದಿಲ್ಲ. ಹೀಗೆ ಭೀಷ್ಮರು ಆತ್ಮಸಮಾವೇಶ ಮಾಡಿದ ಪೌಷಮಾಸದಲ್ಲಿ ಮಕರಸಂಕ್ರಾಂತಿಯಾಗಿ ಉತ್ತರಾಯಣಾರಂಭವಾಗುವುದೂ ಸಹಜವಾಗಿರುವುದರಿಂದ 'ನಿವೃತ್ತಮಾತ್ರೇ' ಎಂಬ ವಚನವು ಕರ್ಮಾರ್ಹವಾದ ನಿರಯನ ಅಯನಕ್ಕೆ ಸಾಧಕವಾಗಿರುವದಲ್ಲದೆ ಸ್ವಲ್ಪವೂ ಬಾಧಕವಾಗಿರುವುದಿಲ್ಲ. ಇನ್ನು ಇವರ ಸಾಯನಾಯನದ ಕಲ್ಪನೆಯನ್ನು ತೆಗೆದುಕೊಳ್ಳುವಲ್ಲಿ ಭೀಷ್ಮರ ನಿರ್ಯಾಣಕಾಲ ಅಂದರೆ ಭಾರತ ಯುದ್ಧಕಾಲದಲ್ಲಿ ಮಾಘಶುಕ್ಲಾಷ್ಟಮಿಯಲ್ಲಿ ಇವರ ಸಾಯನೋತ್ತರಾಯಣಾರಂಭವಾಗುವುದು ತೀರ ಅಸಂಭವವೆಂದು ಮುಂದಿನ ವಿಚಾರಗಳಿಂದ ಸಿದ್ಧವಾಗುವುದು. ಹೇಗಂದರೆ– ಸೂರ್ಯಸಿದ್ಧಾಂತಾನುಸಾರವಾಗಿ ಗಣನೆಮಾಡುವಲ್ಲಿ ಕಲಿಯುಗಾದಿಯಲ್ಲಿ ಅಯನಾಂಶವು ಶೂನ್ಯವಾಗುವುದಾಗಿದ್ದು ಅದಕ್ಕಿಂತ ಪೂರ್ವ ೩೬೦೦ ವರ್ಷಗಳ ಹಿಂದಿನ ವರೆಗೂ ಧನಾಯನಾಂಶ ಅಂದರೆ ಈಗಿನಂತೆ ಮಕರಸಂಕ್ರಾಂತಿಗಿಂತ ಮೊದಲೇ ಇವರ ಸಾಯನಾಯನದ ಆರಂಭವಾಗುತ್ತಿತ್ತೆಂದು ನಿರ್ಣಯವಾಗುತ್ತದೆ. ಅಂದಮೇಲೆ ಹಾಗೆ ಮಕರ ಸಂಕ್ರಾಂತಿಗಿಂತ ಮೊದಲೇ ಆರಂಭವಾಗುತ್ತಿದ್ದ ಸಾಯನಾಯನವು ನಿಯಮವಾಗಿ ಮಕರಮಾಸದಲ್ಲಿ ೮ ದಿನಗಳಾದರೂ ಕಳೆದ ಹೊರತು ಸಂಭವಿಸಲಿಕ್ಕೆ ಶಕ್ಯವಿಲ್ಲದ

ಮಾಘಶುಕ್ಲಾಷ್ಟಮಿಯ ದಿನ ಆರಂಭವಾಗುವುದು ಎಂದಿಗೂ ಶಕ್ಯವಿಲ್ಲ. ಇನ್ನು ಭಚಕ್ರವು ಅವಧಿಯಿಲ್ಲದೆ ಸಂಪೂರ್ಣಚಲಿಸುತ್ತದೆಂಬ ಇವರ ನವೀನ ದೃಕ್ಪಕ್ಷದ ಪೂರ್ಣಭ್ರಮಣದ ಕಲ್ಪನೆಯನ್ನೇ ಅನುಸರಿಸಿ ಅಯನಗತಿಯನ್ನು ಸಹ ಅತ್ಯಂತ ಕಡಿಮೆಯಾಗಿ ಅಂದರೆ— ವರ್ಷ ೧ ಕ್ಕೆ ೫೦ ವಿಕಲೆಗಳಂತೆ ಹಿಡಿದು ಗಣಿಸಿದರೂ ಕೂಡ ೭೨ ವರ್ಷಗಳಿಗೆ ೧ ಅಂಶದ ಪ್ರಕಾರ ಈಗಿನಿಂದ ಹಿಂದೆ ಕಲಿಯುಗಾದಿಯವರೆಗೆ ೭೦ ಅಂಶಗಳಿಗೂ ಮಿಕ್ಕಿ ಅಯನಗತಿಯು ಬರುತ್ತಿದ್ದು ಆಗ ಅಂದರೆ ಕಲಿಯುಗಾದಿಯಲ್ಲಿ ಈಗಿರುವ ಧನೂರಾಶಿಯ ೬ ನೇ ಭಾಗದ ಮುಂದೆ ೭೧ ನೇ ಅಂಶದಲ್ಲಿ ಅರ್ಥಾತ್ ಕುಂಭರಾಶಿಯ ೧೭ ನೇ ಭಾಗದಲ್ಲಿ ('ಭಾರತಯುದ್ಧವು ಅದಕ್ಕೂ ಮೊದಲೇ ಸಂಭವಿಸಿರುವುದರಿಂದ ಆಗ ಅದಕ್ಕಿಂತಲೂ ಮುಂದೆ) ಇವರ ಸಾಯನ ಅಯನಾರಂಭಸ್ಥಾನವು ಬರುವುದು. ಆದರೆ ಮಾಘಶುಕ್ಲಾಷ್ಟಮಿಯು ಅತ್ಯಂತ ಕಡೆಗೆ ಬರುವಲ್ಲಿಯೂ ಸಹ ಕುಂಭಮಾಸದ ೮ ನೇ ಭಾಗ ([illegible]) ದ ನಂತರ ಬರುವುದು ಶಕ್ಯವೇ ಇಲ್ಲವಾದುದರಿಂದ ಇವರ (ನವೀನ ದೃಕ್ಪಕ್ಷದವರ) ಕಲ್ಪನೆಯಂತೆ ಆಗ (ಸಾಯನ) ದಕ್ಷಿಣಾಯನವೇ ಇರಬೇಕಾಗಿದೆ. ಮತ್ತು ಇವರ ಉದಗಯನವು ಬರಲಿಕ್ಕೆ ಕನಿಷ್ಠಪಕ್ಷದಲ್ಲಿ ೯ ದಿನಗಳಾದರೂ ಮುಂದೆ ಉಳಿಯಬೇಕಾಗುತ್ತದೆ. ಆದುದರಿಂದ ಇವರ ಕಲ್ಪನೆಯಂತೆಯೂ ಸಹ ಆ ದಿನ ಸಾಯನ ಉದಗಯನಾರಂಭವಾಗುವುದು ತೀರ ಅಸಂಭವವಾಗಿರುತ್ತದೆ. ಹೀಗೆ ನಿರಯನ ಅಥವಾ ಸಾಯನವೆಂಬ ಯಾವ ವಿಧದಿಂದಲೂ ಭಾರತಯುದ್ಧಕಾಲದಲ್ಲಿ ಮಾಘಶುಕ್ಲಾಷ್ಟಮಿಯಲ್ಲಿ ಉತ್ತರಾಯಣಾರಂಭವಾಗುತ್ತಿದ್ದಿಲ್ಲವೆಂದೂ, ಸಿದ್ಧಾಂತಗಣಿತದ ಪ್ರಕಾರ ಆ ಮುಂಚೆಯೇ ಅಂದರೆ ಮಕರಸಂಕ್ರಾಂತಿಯು ನಿಯತವಾಗಿ ಪುಷ್ಯಮಾಸದಲ್ಲಿಯೇ ಬರತಕ್ಕದ್ದಾಗಿರುವುದರಿಂದ ಪುಷ್ಯ ಕೃಷ್ಣ ೩೦ ಗಿಂತ ಮೊದಲೇ ಅದು ಸಂಭವಿಸುತ್ತಿತ್ತೆಂದೂ, ನವೀನದೃಗ್ವಾದಿಗಳ ಗಣಿತದಂತೆ ಕಲ್ಪಿಸತಕ್ಕ ಸಾಯನ ಉದಗಯನವು ಆಗ ಮಾಘಬಹುಳಬಿದಿಗೆಯ (ಕುಂಭಮಾಸ ೧೭ರ) ನಂತರವೇ ಘಟಿಸತಕ್ಕದ್ದಾಗಿರುವುದೆಂದೂ ಸಿದ್ಧಾಂತವಾಗುತ್ತದೆ. ಹಾಗೂ ಮಾಘಶುಕ್ಲಾಷ್ಟಮಿಯಲ್ಲಿ ಭೀಷ್ಮರ ನಿರ್ಯಾಣವಾದ್ದೆಂಬುದು ನಿರ್ವಿವಾದವಾಗಿ ಉಭಯವಾದಿಗಳೂ ಒಪ್ಪತಕ್ಕದ್ದಾಗಿದ್ದು ಅಷ್ಟರೊಳಗೆ ಉತ್ತರಾಯಣವು ಸಂಭವಿಸಿತ್ತೆಂಬುದು ಸಹ ನಿರ್ವಿವಾದವಾಗಿರುವಾಗ ಹಾಗೆ ಸಂಭವಿಸಿರುವ (ಉತ್ತರ) **"ಅಯನಾರಂಭವು ನಿರಯನವಾದಿಗಳಾದ ಸಿದ್ಧಾಂತಶಾಸ್ತ್ರಿಗಳದ್ದೇ ಹೊರತು ಸಾಯನಾಯನವಾದಿಗಳಾದ ನವೀನದೃಗ್ವಾದಿಗಳದ್ದಲ್ಲ"ವೆಂದು ಇಲ್ಲಿ ಸಿದ್ಧಪಡಿಸಿ ತೋರಿಸಿರುವಂತೆ ಕೇವಲ ಗಣಿತಶಾಸ್ತ್ರವೂ ಘಂಟಾಘೋಷವಾಗಿ ಸಾರುತ್ತಿದೆ.** ಹೀಗಿರುವಲ್ಲಿ ಈ ವಿಷಯವನ್ನು ಏನೂ ವಿವೇಚಿಸದೆ ಇವರು ಪುಟ ೫೪ ರಲ್ಲಿ ಆ ಕಾಲದಲ್ಲಿ ಮಾಘಶುಕ್ಲಾಷ್ಟಮಿಯ ದಿನ ಉತ್ತರಾಯಣವಾಗಿತ್ತೆಂದೂ, ಅದು ತಮ್ಮ ಸಾಯನಾಯನಸಮರ್ಥನೆಗೆ ಅತ್ಯಂತ ಅನುಕೂಲವಾ

ದ್ದೆಂದೂ ಕಲ್ಪಿಸಿಕೊಂಡದ್ದು ನಾವು ಇಲ್ಲಿ ವಿವರಿಸಿದಂತೆ ಆದಿನ ಯಾವ ರೀತಿ ಯಿಂದಲೂ ಉತ್ತರಾಯಣದ ಆರಂಭವಾಗುವುದು ಶಕ್ಯವಿಲ್ಲವೆಂದು ಸಿದ್ಧವಾಗಿರುವುದರಿಂದ ಅದು ' ಬಂಜೆಯ ಮಗನು ತನ್ನ ಬಲಕ್ಕಿದ್ದಾನೆ ' ಎಂಬಂತೆ ಅತ್ಯಂತ ಅಸಂಭವನೀಯವಾದ ವ್ಯರ್ಥಕಲ್ಪನೆಯಾಗಿರುತ್ತದೆ. ಮತ್ತು ಈ ವಿವೇಚನೆಗಳಿಂದ ಹಿಂದಿನ ಕಾಲದಲ್ಲಿ ಇವರ ಸಾಯನಾಯನವೇ ಪ್ರಚಾರದಲ್ಲಿ ಇದ್ದಿತ್ತೆಂಬ ಇವರ ಕಲ್ಪನೆಯು ಸಮೂಲವಾಗಿ ನಾಶವಾಗುತ್ತದೆ. ಇನ್ನಾದರೂ ಈ ಗಣಿತಪಂಡಿತರೆಂಬವರು ಪೂರ್ವದಿಂದಲೂ ತಮ್ಮ ಸಾಯನಾಯನವೇ ಶಾಸ್ತ್ರಪ್ರಸಿದ್ಧವಾದ್ದೆನ್ನುವ ಸುಳ್ಳು ಕಲ್ಪನೆಯನ್ನು ಬಿಟ್ಟು ಅನಾದಿ ಶಾಸ್ತ್ರಸಿದ್ಧವಾದ ನಿರಯನ ಅಯನವನ್ನೇ ಪುನಃ ಸ್ವೀಕರಿಸುವ ವಿವೇಕಬುದ್ಧಿಯನ್ನು ತೋರಿಸಲಿ !

ಪುಟ ೫೪ ರಲ್ಲಿ ' ಏವಂ ಸಾಯನವರ್ಷಾಣಾಂ ' ಎಂಬ ವಚನಕ್ಕೆ ಇವರ ಕಲ್ಪನೆಯ ಪ್ರಕಾರ ದೃಕ್ಸಿದ್ಧ ತಿಥಿಯು ಶ್ರಾದ್ಧಾದಿಗಳಿಗೆ ಬೇಕಾದಂತೆ ಸಾಯನವರ್ಷ, ಮಾಸಗಳು ವ್ಯತೀಪಾತಾದಿ ಗಣಿತಸಾಧನೆಗೂ, ದೃಕ್ಪ್ರತೀತಿಯಬಗ್ಗೂ ಬೇಕಾಗುತ್ತವೆಂಬ ವಿಪರೀತಾರ್ಥವನ್ನು ಕಲ್ಪಿಸಿರುತ್ತಾರೆ. ಆದರೆ ಇವರ ಈ ಕಲ್ಪಿತಾರ್ಥವು ಎಷ್ಟು ವಿಸಂಗತವಾಗಿರುತ್ತದೆಂದು ಮಾತಿನ ಅರ್ಥವನ್ನು ಗ್ರಹಿಸಬಲ್ಲ ಸಾಮಾನ್ಯಜನರಿಗೂ ಸಹ ತಿಳಿಯುವಂತಿದೆ. ಹೇಗಂದರೆ– ಇಲ್ಲಿ ಉಪಮೆಗಾಗಿ ಹೇಳಿರುವ ತಿಥಿಯು ಇವರ ಕಲ್ಪನೆಯಂತೆ ಶ್ರಾದ್ಧಾದಿಕರ್ಮಗಳಿಗೆ ಬೇಕಾದ್ದೆಂತಾದರೆ ಉಪಮೇಯಗಳಾದ ಸಾಯನ ವರ್ಷ–ಮಾಸಗಳು ಸಹ ಶ್ರಾದ್ಧಾದಿ ಕರ್ಮಗಳಿಗೆ ಬೇಕಾದವುಗಳೆಂದೇ ಹೇಳಬೇಕಾಗಿರುತ್ತದೆ. ಹಾಗಿಲ್ಲದೆ ಅವುಗಳು ಶ್ರಾದ್ಧಾದಿಗಳಿಗೆ ಬೇಡವೆಂದೇ ಹೇಳಿರುವುದರಿಂದ ಅವುಗಳಿಗೆ ಉಪಮೆಯಾಗಿ ಹೇಳಿರುವ ತಿಥಿಯಾದರೂ ಶ್ರಾದ್ಧಾದಿಗಳಿಗೆ ಬೇಡವಾದ್ದೆಂದೇ ಸಿದ್ಧವಾಗುತ್ತದೆ. ಆದ್ದರಿಂದ ಶ್ರಾದ್ಧಾದಿಗಳಿಗೆ ಬೇಕಾದ, ಮತ್ತು ಬೇಡವಾದ ವಿಷಯಗಳಿಗೆ ಪರಸ್ಪರವಾಗಿ ಉಪಮಾನ, ಮತ್ತು ಉಪಮೇಯ ಭಾವವನ್ನು ಹಚ್ಚಿ ಇವರು ಬರೆದದ್ದು ಎಷ್ಟು ವಿಸಂಗತವಾಗಿರುವುದೆಂದು ಬೇರೆ ಹೇಳಬೇಕಾಗಿಲ್ಲ. ಇನ್ನು ಈ ವಚನಕ್ಕೆ ಹಿಂದು-ಮುಂದಿನ ಸಂಬಂಧಸಹಿತವಾಗಿ ಅರ್ಥ ಮಾಡುವಲ್ಲಿ- 'ಬಾಣವೃದ್ಧಾ ರಸಕ್ಷೀಣಾ ಗ್ರಾಹ್ಯಾ ನಾನ್ಯಾ ತಿಥಿಃ ಕ್ವಚಿತ್ । ಏವಂ ಸಾಯನವರ್ಷಾಣಾಂ ಮಾಸಾನಾಮಪಿ ನಿರ್ಣಯಃ ॥ ವ್ಯತೀಪಾತಾದಿಸಿದ್ಧ್ಯರ್ಥಂ ಪ್ರತ್ಯಯಾರ್ಥಮಪೀಷ್ಯತೇ । ಮಯಾಯ ಸೂರ್ಯಸಿದ್ಧಾಂತೇ ಭಾಸ್ಕರಾಂಶಃ ಪುಮಾನಪಿ ॥ ದೃಕ್ಕರ್ಮಾಯನಮೋಕ್ಷಂ ಚ ಗ್ರಹಾಣಾಂ ನಿರದರ್ಶಯತ್ । ನಕ್ಷತ್ರಗ್ರಹಯೋಗೇಷು ಗ್ರಹಾಸ್ತೋದಯಸಾಧನೇ ॥ ಶೃಂಗೋನ್ನತೌ ತು ಚಂದ್ರಸ್ಯ ದೃಕ್ಕರ್ಮಾಪಾವಿದಂ ಸ್ಮೃತಂ । ಇತಿ ಹಿ ಪ್ರಾಹ ಭಗವಾನ್ ದೃಕ್ಕ್ರಿಯೇಽತ್ರ ತಸ್ಯ ವಸ್ಥಿತೇ ॥ ತಸ್ಮಾತ್ಸಾಯನಮಾಸೇ ತು ತಿಥಿಃ ಶ್ರಾದ್ಧಂ ನ ಚಾರ್ಹತಿ । ಛಾಯಾರ್ಕಜನಿತೋ

**ಮಾಸೋ ದೃಕ್ಸಿದ್ಧೋ ನಹಿ ವಾಸ್ತವಃ । ತಸ್ಮಾನ್ನಿರಯನೇ ಮಾಸಿ ತಿಥಿ ಗ್ರ್ರಾಹ್ಯಾ ನ ಚಾನ್ಯಥಾ ॥**'' ಎಂಬ ವರೆಗೆ ಅನುಕ್ರಮದಿಂದ ಹೇಳಿರುವ ಈ ವಚನಗಳಿಂದ ನಿಷ್ಪನ್ನವಾಗುವ ತಾತ್ಪರ್ಯವೇನಂದರೆ:— ''ಬಾಣವೃದ್ಧಿ, ರಸಕ್ಷಯಲಕ್ಷಣದ ತಿಥಿಯೇ ಸಕಲ ಕರ್ಮಗಳಲ್ಲಿಯೂ ಗ್ರಾಹ್ಯವಾಗಿರುತ್ತದೆ. ಬೇರೆ ತರದ (ದೃಕ್ಸಿದ್ಧವಾದ) ತಿಥಿಯು ಯಾವ ಕರ್ಮದಲ್ಲಿಯೂ ಗ್ರಾಹ್ಯವಲ್ಲ. ಅದರಂತೆಯೇ ಸಾಯನವರ್ಷ, ಮಾಸಗಳ ನಿರ್ಣಯವಾದರೂ ಇರತಕ್ಕದ್ದಾಗಿದೆ. ಅಂದರೆ ಸಾಯನಗಣನೆಯು ಕೇವಲ ವ್ಯತೀಪಾತಾದಿ ಗಣಿತಸಿದ್ಧಿಗೂ, ದೃಕ್ಪರೀಕ್ಷೆಗೂ ಮಾತ್ರ ಅವಶ್ಯಕವಾಗಿರುತ್ತದೆ. ಅರ್ಥಾತ್ ಕರ್ಮಾಚರಣೆಯ ಬಗ್ಗೆ ಆವಶ್ಯಕವಾದ್ದಲ್ಲ. ಮಯನಿಗೆ ಉಪದೇಶಿಸಿರುವ ಸೂರ್ಯಸಿದ್ಧಾಂತದಲ್ಲಿ ಸೂರ್ಯಾಂಶಪುರುಷನು ಸಹ ಗ್ರಹರಿಗೆ ದೃಕ್ಸಂಸ್ಕಾರ, ಹಾಗೂ ಅಯನಾಂಶಸಂಸ್ಕಾರದ ಬಿಡುವಿಕೆಯನ್ನೇ ಅಂದರೆ ಆ ಸಂಸ್ಕಾರಗಳನ್ನು ಮಾಡಬಾರದೆಂದೇ ಶಾಸನ ಮಾಡಿರುತ್ತಾನೆ. ಮತ್ತು ಗ್ರಹಸಮಾಗಮಾದಿ ಉಕ್ತವಿಷಯಗಳ ಗಣಿತದಲ್ಲಿ ಮಾತ್ರ ಅಂತಹ ದೃಕ್ಸಂಸ್ಕಾರಗಳ ಉಪಯೋಗವೆಂದಿಷ್ಟು ಹೀಗೆ ಅಯನಾದಿ ದೃಕ್ಸಂಸ್ಕಾರಗಳ ವ್ಯವಸ್ಥೆಯನ್ನು (ವಿಷಯಭೇದದಿಂದ) ಸಾಕ್ಷಾತ್ತಾಗಿ ಭಗವಂತನೇ ಹೇಳಿರುತ್ತಾನೆ. ಈ ಮುಂತಾದ ಕಾರಣದಿಂದ ಸಾಯನಗಣನೆಯಿಂದ ಸಿದ್ಧವಾದ ಮಾಸದ ತಿಥಿಯು ಶ್ರಾದ್ಧಕ್ಕೆ ಯೋಗ್ಯವಾದ್ದಲ್ಲ. ಮತ್ತು ಪ್ರತ್ಯಕ್ಷವಾದ ಸೂರ್ಯಚ್ಛಾಯೆಯ ಮೂಲಕ ಸಿದ್ಧವಾಗತಕ್ಕ ಸಾಯನಮಾಸವು ದೃಕ್ಸಿದ್ಧವೆಂತಾದರೂ ಅದು (ಶಾಸ್ತ್ರಸಮ್ಮತವಾದ್ದಲ್ಲವಾದ್ದರಿಂದ) ವಾಸ್ತವಿಕವಾದುದಲ್ಲ. ಈ ಕಾರಣದಿಂದಲೂ ಸಹ ನಿರಯನಗಣನೆಯಿಂದಲೇ ಸಿದ್ಧವಾಗುವ ಆಯಾ ಮಾಸದ ತಿಥಿಯನ್ನು ಪರಿಗ್ರಹಿಸಬೇಕಲ್ಲದೆ ಸಾಯನಗಣನೆಯಿಂದ ಸಿದ್ಧವಾದ ಮಾಸದ ತಿಥಿಯನ್ನು ಪರಿಗ್ರಹಿಸಬಾರದು.'' ಎಂದಿರುತ್ತದೆ. ಇಲ್ಲಿ ಬಾಣವೃದ್ಧಿ-ರಸಕ್ಷಯಲಕ್ಷಣಕ್ಕೆ ಹೊರತಾದ (ದೃಕ್ಸಿದ್ಧ) ತಿಥಿಗೂ, ಸೂರ್ಯಚ್ಛಾಯೆಯ ಮೂಲಕ ದೃಕ್ಸಿದ್ಧವೆಂದಿರುವ ಸಾಯನಮಾಸಕ್ಕೂ ಸಾದೃಶ್ಯವನ್ನು ಹೇಳಿದ್ದು ಸಾಯನಮಾಸವು ಶ್ರಾದ್ಧಾದಿ ಕರ್ಮಾರ್ಹವಲ್ಲವೆಂಬುದು ನಿರ್ವಿವಾದವಾಗಿರುವುದರಿಂದ ಅದರಂತೆ ದೃಕ್ಸಿದ್ಧತಿಥಿಯಾದರೂ ಕರ್ಮಾರ್ಹವಲ್ಲವೆಂದೇ ಸಿದ್ಧಾಂತವಾಗಿರುತ್ತದೆ. ಮತ್ತು ವ್ಯತೀಪಾತಾದಿಗಣಿತವಾಗಲೀ, ದೃಕ್ಪರೀಕ್ಷೆಯಾಗಲಿ ಸಾಯನಗಣನೆಯ ವರ್ಷ, ಮಾಸಗಳನ್ನಷ್ಟೇ ಹೊಂದಿರದೆ ಸಕಲವಿಧದಲ್ಲಿಯೂ ಸಾಯನಗಣನೆಯನ್ನು ಅವಲಂಬಿಸಿರುವುದರಿಂದ '**ವ್ಯತೀಪಾತಾದಿಸಿದ್ಧ್ಯರ್ಥಂ**' ಎಂಬಲ್ಲಿ ಅಂತಹ ಸರ್ವವಿಧದ ಸಾಯನಗಣನೆಯೂ ಲಕ್ಷಿಸಲ್ಪಟ್ಟಿದ್ದು ಅದು ವ್ಯತೀಪಾತಾದಿ ಗಣಿತಸಾಧನೆ, ಮತ್ತು ದೃಕ್ಪರೀಕ್ಷೆಯ ಹೊರತು ಇತರ ಸಕಲ ವಿಷಯಗಳಲ್ಲಿಯೂ ಅಗ್ರಾಹ್ಯವೆಂದೇ ತಾತ್ಪರ್ಯವಾಗಿರುತ್ತದೆ. ಇದಲ್ಲದೆ ಈ ಕಾರಿಕೆಯು ವಿಶೇಷತಃ ಶ್ರಾದ್ಧತಿಥಿನಿರ್ಣಯದ ಬಗ್ಗೆ ಹೇಳಲ್ಪಟ್ಟಿರುವ

ಕಾರಣ ಅಲ್ಲಲ್ಲಿ ಕೆಲವುಕಡೆ '**ಶ್ರಾದ್ಧ**'ವೆಂಬ ಶಬ್ದವನ್ನಷ್ಟೇ ಕಾಣಿಸಿದ್ದರೂ ಹಲವು ಕಡೆಗಳಲ್ಲಿ '**ಶ್ರಾದ್ಧಾದಿಕಂ, ವ್ರತಾಯ, ಪೈತೃಕಾದಿಷು, ಪೈತೃಕ ಕರ್ಮಾದೌ**' ಇತ್ಯಾದಿ ಸಾಮಾನ್ಯಶಬ್ದಗಳನ್ನು ಸಹ ಪ್ರಯೋಗಿಸಿದ್ದಿರುವುದರಿಂದ ಸಾಮಾನ್ಯವಾಗಿ ಶ್ರೌತಸ್ಮಾರ್ತಾದಿ ಕರ್ಮಗಳನ್ನೆಲ್ಲ ಲಕ್ಷಿಸಿ ಹೇಳಲ್ಪಟ್ಟಿರುವುದೆಂದು ಸ್ಪಷ್ಟವಾಗುತ್ತದೆ. ಆದುದರಿಂದ ಇಲ್ಲಿ ಕಾಣಿಸಿರುವ ಈ ಕಾರಿಕೆಯ ವಚನಗಳು **ಶ್ರಾದ್ಧಕ್ಕೆ ಮಾತ್ರವಲ್ಲದೆ ಯಾವ ಕರ್ಮಕ್ಕೂ ಸಾಯನ ಮಾಸ, ತಿಥಿಯು ಆಗದೆಂತ ನಿಷೇಧಿಸುತ್ತವೆ.** ಮತ್ತು ಶಾಸ್ತ್ರದಲ್ಲಿಯೂ, ಲೋಕದಲ್ಲಿಯೂ ಪ್ರಸಿದ್ಧವಾಗಿರುವ **ವರ್ಷಾದಿ ಕಾಲಗಣನೆಯಲ್ಲಿ ಸಾಯನ ಮಾನವು ಸರ್ವಥಾ ಗ್ರಾಹ್ಯವಲ್ಲವೆಂಬ ಅರ್ಥವನ್ನು** ಸಕಾರಣವಾಗಿ ದೃಢಪ**ಡಿಸುತ್ತವೆ.** ಇನ್ನು ಇಲ್ಲಿ ಸಾಯನಮಾಸ, ವರ್ಷಗಳಷ್ಟೇ ನಿಷೇಧಿಸಲ್ಪಟ್ಟಿದ್ದು ತಮ್ಮ ಸಾಯನ ಋತು, ಅಯನಗಳು ನಿಷೇಧಿಸಲ್ಪಟ್ಟಿಲ್ಲವೆಂದು ಇವರ ಕಲ್ಪನೆ ಇರುವುದಾದರೆ ಅದು ಸಹ ಸರಿಯಾದ್ದಲ್ಲವೆಂಬುದು ಮೇಲಿನ ವಚನಗಳಲ್ಲಿ ಎಲ್ಲ ತರದ ಸಾಯನಗಣನೆಯೂ ನಿಷೇಧಿಸಲ್ಪಟ್ಟಿರುವುದೆಂದು ತೋರಿಸಿದ್ದರಿಂದಲೇ ಸಿದ್ಧವಾಗುತ್ತದೆ. ಮತ್ತು ೨ ಮಾಸಗಳಿಗೆ ೧ ಋತುವೂ, ೬ ಮಾಸಗಳಿಗೆ ಅಥವಾ ೩ ಋತುಗಳಿಗೆ ೧ ಅಯನವೂ, ಹಾಗೂ ೧೨ ಮಾಸಗಳಿಗೆ ಇಲ್ಲವೆ ೬ ಋತುಗಳಿಗೆ ಅಥವಾ ೨ ಅಯನಗಳಿಗೆ ೧ ವರ್ಷವೂ ಆಗುವುದು ಶಾಸ್ತ್ರದಲ್ಲಿಯೂ ಲೋಕದಲ್ಲಿಯೂ ಪ್ರಸಿದ್ಧವೇ ಆಗಿದ್ದು ಋತು, ಅಯನಗಳಿಗೆಲ್ಲ ನಿಯತವಾಗಿ ಮಾಸವು ಅವಯವವೂ, ವರ್ಷವು ಅವಯವಿಯೂ ಆಗಿರುವ ಕಾರಣ ಅಂತಹ ಅವಯವ, ಅವಯವಿಗಳಾದ ಮಾಸ-ವರ್ಷಗಳನ್ನು ಪ್ರತ್ಯೇಕವಾಗಿ ಕಾಣಿಸಿ ನಿಷೇಧಿಸಿರುವುದರಿಂದ ಆ ಮಾನದಿಂದ ನಿರ್ಣಯಿಸತಕ್ಕ ಋತು, ಅಯನಗಳಾದರೂ ನಿಷಿದ್ಧಗಳೇ ಇರುತ್ತವೆಂದು ಕೇವಲ ಲಕ್ಷಣೆಯಿಂದಲೂ ಸಹ ಸಿದ್ಧವಾಗುತ್ತದೆ. ಆದ್ದರಿಂದ ಇವರ ಈ ಕಲ್ಪನೆಯಾದರೂ ಸಹ ಯುಕ್ತವಾದ್ದಲ್ಲವೆಂದು ಬೇರೆ ಸಿದ್ಧಪಡಿಸಬೇಕಾಗಿಲ್ಲ.

"ಭಚಕ್ರನಾಭೌ" ಇತ್ಯಾದಿ ವಚನಗಳು ನಿರಯನ ಮೇಷಾದಿಸಂಕ್ರಾಂತಿಗಳಿಗೇನೇ ವಿಷುವಾದಿ ಸಂಕೇತಗಳನ್ನು ನಿತ್ಯವಾಗಿ ಹೇಳಿರುವುದೆಂದು ಈ ಹಿಂದೆ ೧೪ ನೆಯ ಪ್ರಶ್ನೆಯ ಉತ್ತರದಲ್ಲಿಯೇ ಸಿದ್ಧಾಂತಪಡಿಸಿರುವುದರಿಂದ ಇವರು ಆ ವಚನಗಳು ಸಾಯನಸಂಕ್ರಾಂತಿಗಳನ್ನು ಬೋಧಿಸುತ್ತವೆಂದು ಹೇಳಿಕೊಂಡು **ತಮ್ಮ ಸಾಯನಅಯನಾದಿಗಳನ್ನು ಇಲ್ಲಿ ತುರುಕಲಿಕ್ಕೆ ಯತ್ನಿಸಿದ್ದು ಕೇವಲ ನಿಷ್ಫಲವಾಗಿರುತ್ತದೆ.**

ಮುಂದೆ ಪುಟ ೫೪–೫೫ ರಲ್ಲಿ ಆವರೆಗಿನ ಇವರ ಖಂಡನೆಯ ಕಲ್ಪನೆಗಳಿಂದೆಲ್ಲ "ನಿರಯನ ಕರ್ಕಮಕರಸಂಕ್ರಾಂತ್ಯಾದಿ ಕಾಲವೇ ಕರ್ಮಾಚರಣೆಗೆ ಗ್ರಾಹ್ಯವಾದ ಅಯನವೆಂಬ ಶಾಸ್ತ್ರಸಿದ್ಧಾಂತವು ವಿಧ್ವಂಸವಾಗುವುದೆಂದೂ, ಮತ್ತು ವೇದ, ವೇದಾಂಗಾದಿ ಹಲವು ಹೆಸರುಗಳನ್ನು ಕಾಣಿಸಿ ಅವುಗ

ಳಿಂದೆಲ್ಲ ತಮ್ಮ ಕಲ್ಪನೆಯ ಸಾಯನಾಯನವೇ ಸಕಲ ಕರ್ಮಗಳಲ್ಲಿ ಗ್ರಾಹ್ಯ ವೆಂದು ಸಿದ್ಧಾಂತವಾಗುತ್ತದೆಂದೂ' ಹೇಳಿಬಿಟ್ಟಿದ್ದಾರೆ. ಆದರೆ ಇವರು ಕಾಣಿಸಿದ ವಚನಕ್ಕೂ, ಅವಕ್ಕಿವರು ಮಾಡುವ ಅರ್ಥಕ್ಕೂ, ಅವರಿಂದ ಇವರು ತೆಗೆಯುವ ವಿಕಲ್ಪಕ್ಕೂ, ಆಮೇಲೆ ಇವರು ಹೇಳುವ ವಾಕ್ಯಕ್ಕೂ, ಇವರು ಸೇರಿರುವ (ನವೀನದೃಕ್) ಪಕ್ಷಕ್ಕೂ, ಇವರು ಪ್ರಮಾಣವೆನ್ನುವ ಗ್ರಂಥಕ್ಕೂ, ಇವರು ಪ್ರಚಾರಮಾಡುವ ಪಂಚಾಂಗಕ್ಕೂ, ತುದಿಯಲ್ಲಿ ಇವರ ಸ್ವಂತಕ್ಕೂ ಸಹ ಒಂದಕ್ಕೊಂದು ಸಂಬಂಧವಿಲ್ಲವೆಂದು ಈ ಹಿಂದೆ ನಾವು ಅಲ್ಲಲ್ಲಿಯೇ ತೋರಿಸಿದ್ದು ಬಲ್ಲವರಿಗೆಲ್ಲ ತಿಳಿಯುವಂತಿರುವಾಗ **ಹಿಂದಿನ ತಮ್ಮ ವಿಕಟಕಲ್ಪನೆಗಳಿಗೆಲ್ಲ ಇದೊಂದು ಮುಕುಟವಿಟ್ಟಂತೆ ತಮ್ಮ ಅಂತ್ಯದ ಹೇಳಿಕೆಯನ್ನಷ್ಟು ಇವರು ಹೇಳಿಕೊಂಡದ್ದಕ್ಕಾಗಿ ನಾವು ಅದನ್ನು ಪ್ರತ್ಯೇಕವಾಗಿ ಖಂಡಿಸಬೇಕಾದ ಅವಶ್ಯವೇನೂ ಉಳಿದಿರುವುದಿಲ್ಲ.**

———o———

ಅನಂತರ (**' ಅದೃಷ್ಟಾರ್ಥೇಷು ಕರ್ಮಸು ' ' ಗಣಿತಂ ಯದಿ ದೃಷ್ಟಾರ್ಥಂ'** ಇತ್ಯಾದಿ ಮೂಲವಚನಗಳಲ್ಲಿ ಸಹ ಕಂಡುಬರುವ) ದೃಷ್ಟಾದೃಷ್ಟಶಬ್ದಗಳ ವಿಷಯವಿಭಾಗವನ್ನು ಸಲಕ್ಷಣವಾಗಿ ವಿವೇಚಿಸಿಕೊಳ್ಳಲಾಗದೆ, ಪುಟ ೫೫ ರಲ್ಲಿ ಅಲ್ಲ-ಸಲ್ಲದ ಗುಲ್ಲನ್ನೆಬ್ಬಿಸಿದ್ದಾರೆ. ಆದರೆ ಈ ಹಿಂದೆಯೇ ನಾವು ೧೦ ನೆಯ ಪ್ರಶ್ನೆಯ ಉತ್ತರದಲ್ಲಿ ಗ್ರಹಣಾದಿಗಳೂ, ತಿಥ್ಯಾದಿಗಳೂ ಸ್ವರೂಪತಃ ಭಿನ್ನ-ಭಿನ್ನವಿಷಯಗಳೆಂದು ಸಲಕ್ಷಣವಾಗಿ ಸಿದ್ಧಪಡಿಸಿದ್ದು ಆ ಪೈಕಿ ಪ್ರತ್ಯಕ್ಷವಾಗಿ ಗೋಚರಿಸುವ ಗ್ರಹಣಾದಿಗಳೆಲ್ಲ ದೃಷ್ಟಗಳೆಂದೂ, ಕಾಲಾವಯವಗಳಾಗಿ ಅಪ್ರತ್ಯಕ್ಷವಾಗಿರುವ ತಿಥ್ಯಾದಿಗಳೆಲ್ಲ ಅದೃಷ್ಟಗಳೆಂದೂ ಪ್ರಸಿದ್ಧವೇ ಆಗಿರುತ್ತವೆ. ಆದುದರಿಂದ **ಗ್ರಹಣಾದಿಗಳೂ, ತಿಥ್ಯಾದಿಗಳೂ ತತ್ಕರ್ತವ್ಯಕರ್ಮ, ಫಲಗಳು ಸಹ ಶಾಸ್ತ್ರತಃ ದೃಷ್ಟಾದೃಷ್ಟಶಬ್ದಗಳಿಂದ ವಿಶೇಷಿಸಲ್ಪಡುತ್ತವೆಂದೂ** ತದನುಸಾರವಾಗಿ ದೃಷ್ಟಾದೃಷ್ಟವಿಷಯಭೇದದಿಂದ **ಬೀಜಾದಿ ದೃಕ್ಸಂಸ್ಕಾರಗಳ ವ್ಯವಸ್ಥೆಯನ್ನು ಶಾಸ್ತ್ರಗಳಲ್ಲಿ ಹೇಳಿದ್ದು** ಹಿಂದೆ ೧೧ ನೆಯ ಪ್ರಶ್ನೆಯ ಉತ್ತರದಲ್ಲಿ ತೋರಿಸಿರುವಂತೆ **ಸಮಂಜಸವೇ ಆಗಿರುತ್ತದೆಂದೂ** ಇನ್ನಾದರೂ ಇವರು ತಿಳಿದುಕೊಂಡಿರಲಿ ! ಇನ್ನು ಪಂಕ್ತಿ ೨೧-೨೩ ರಲ್ಲಿ ಗ್ರಹಣವು ದೃಶ್ಯವಾಗುವಂತೆ ಕರ್ಮನಿಮಿತ್ತಗಳಾದ ತಿಥ್ಯಾದಿಗಳೂ ದೃಶ್ಯವಾಗುತ್ತವೆಂಬ ತಮ್ಮ ಹಳೆಯ ಸೊಲ್ಲೊಂದನ್ನು ಇವರು ಹಾಡಿದ್ದು ಅದನ್ನು ಈ ಹಿಂದೆ ದೃಕ್ಪಂಚಾಂಗಸಮರ್ಥನೆಯ ಖಂಡನೆಯೇ ಮೊದಲಾದ ಕಡೆಗಳಲ್ಲಿ **ಸಮೂಲವಾಗಿ ಖಂಡಿಸಿರುವುದರಿಂದ** ಪುನಃ ಖಂಡಿಸಬೇಕಾಗಿರುವುದಿಲ್ಲ.

ಪುಟ ೫೬ ರಲ್ಲಿ ಶಾ. ವಿ. ಪಂ. ದ ತಾತ್ಪರ್ಯವನ್ನು ತಿಳಿಯದೆ ಮನಬಂದಂತೆ ಜಲ್ಪಿಸಿದ್ದಾರೆ. ಅಕ್ಷಾಯನಾದಿ ಸಂಸ್ಕಾರಗಳು ದೃಕ್ಕೃತ್ಯಯಾರ್ಥವಾಗಿ ಹೇಳಲ್ಪಟ್ಟಿದ್ದರೂ ಕೆಲವು ನಿಯತವಿಷಯಗಳಲ್ಲಿ ಮಾತ್ರ ಅವುಗಳನ್ನು ಉಪ

ಯೋಗಿಸತಕ್ಕದ್ದಾಗಿರುವಂತೆ ದೃಕ್ಪ್ರತ್ಯಯಾರ್ಥವಾಗಿಯೇ ಇರುವ ಮತ್ತು ಕೇವಲ ಪ್ರತ್ಯಕ್ಷಪರೀಕ್ಷೆಯ ಮೂಲಕವೇ ತಿಳಿಯಲ್ಪಡುವ ಬೀಜಸಂಸ್ಕಾರಗಳನ್ನು ಸಹ ಅಂತಹ ಗ್ರಹಣ, ಶೃಂಗೋನ್ನತಿ, ಛಾಯಾದಿ ನಿಯತವಿಷಯಗಳಲ್ಲಿ ಮಾತ್ರ ಉಪಯೋಗಿಸುವುದು ಶಾಸ್ತ್ರಸಮ್ಮತವಾಗುವುದಲ್ಲದೆ ಸರ್ವತ್ರ ಸೇರಿಸುವುದು ಯುಕ್ತವಲ್ಲವೆಂಬುದನ್ನು ಉದಾಹರಣಸಹಿತ ತೋರಿಸಲಿಕ್ಕಾಗಿ ಇಂತಿಂಥ ವಿಷಯಗಳಲ್ಲಿಯೇ ಪ್ರತ್ಯಕ್ಷತೆಯು ಅವಶ್ಯವೆಂದು ವ್ಯಕ್ತಪಡಿಸಿರುವ ಸೂರ್ಯಸಿದ್ಧಾಂತದ ವಚನಗಳನ್ನು ಶಾ. ವಿ. ಪಂ. ದಲ್ಲಿ ಕಾಣಿಸಿದ್ದಾಗಿದೆ. ಅದನ್ನು ಸರಿಯಾಗಿ ತಿಳಿದುಕೊಳ್ಳದೆ ಇವರು ತಮ್ಮ ವಿಪಕ್ಷಿಗಳಿಗೆ ಆ ಸಿದ್ಧಾಂತದ ತತ್ವನೇನೆಂಬುದೇ ಗೊತ್ತಿಲ್ಲವೆಂತ ದೂಷಿಸಿದ್ದನ್ನು ನೋಡಿದರೆ ಇವರಿಗೆ ಜ್ಯೋತಿಃಶಾಸ್ತ್ರದ ಯಾವ ಯಾವ ವಿಷಯಗಳು ಪ್ರತ್ಯಕ್ಷದಿಂದ ನಿರ್ಣಯವಾಗತಕ್ಕವುಗಳೆಂಬ **ಜ್ಞಾನವೇ ಇಲ್ಲವೆಂದೂ, ಶಾಸ್ತ್ರದ ಹಾಗೂ ಪ್ರತ್ಯಕ್ಷಪ್ರಮಾಣದ ಸ್ವರೂಪವೇ ಗೊತ್ತಿಲ್ಲವೆಂದೂ ಸಿದ್ಧವಾಗುತ್ತದೆ.**

ಮುಂದೆ ಸೂರ್ಯಸಿದ್ಧಾಂತವು ಹುಟ್ಟುವಾಗಲೇ ಬೀಜಸಂಸ್ಕೃತವಾಗಿತ್ತೆಂಬ ವಿಚಿತ್ರಕಲ್ಪನೆಯನ್ನು ಕಾಣಿಸಿದ್ದಾರೆ. ಆದರೆ ಶಾಸ್ತ್ರಸಿದ್ಧಸ್ಥಿತಿಗೂ, ದೃಕ್ಪರೀಕ್ಷಿತಸ್ಥಿತಿಗೂ ವೈಷಮ್ಯವು ತೋರುವಲ್ಲಿ ದೃಕ್ಪ್ರತ್ಯಯಾರ್ಥವಾಗಿ (ನಿಯತವಿಷಯಗಳಲ್ಲಿ) ಮಾಡತಕ್ಕ, ಶಾಸ್ತ್ರದಲ್ಲಿ ನಿಷ್ಪಷ್ಟವಾಗಿಲ್ಲದ ವಿಶೇಷವೇ ಬೀಜಸಂಸ್ಕಾರವಾಗಿರುವುದರಿಂದ ಅಂತಹ ಬೀಜಸಂಸ್ಕಾರವು ಮೂಲತಃ ಅನ್ಯಶಾಸ್ತ್ರಾಪೇಕ್ಷೆಯಿಲ್ಲದೆ ಸ್ವತಃಪ್ರಮಾಣವಾಗಿರುವ ಸೂರ್ಯಸಿದ್ಧಾಂತದಲ್ಲಿ ಹುಟ್ಟುವಾಗಲೇ ಸೇರಿತ್ತೆನ್ನುವುದು ಕೇವಲ ವ್ಯಾಪತಿಯಾಗಿರುವುದು. ಇಷ್ಟಾದರೂ ಇವರಿಗೆ ತಿಳಿದಿದ್ದರೆ ಈ ರೀತಿಯ ಕುಕಲ್ಪನೆಯನ್ನು ಮಾಡಲಿಕ್ಕೆ ಕಾರಣವಿದ್ದಿಲ್ಲ. ಇದಲ್ಲದೆ ಇವರ ಈ ಕಲ್ಪನೆಯಂತೆ ಸೂರ್ಯಸಿದ್ಧಾಂತವು ಹುಟ್ಟುವಾಗಲೇ ಬೀಜಸಂಸ್ಕೃತವಾಗಿದ್ದುದರಿಂದ ಅದರಲ್ಲಿ ಹೇಳಿರುವ ಬರೇ ಮಂದಫಲಾದಿಸಂಸ್ಕಾರದಿಂದಲೇ ಗ್ರಹವು ಭೂಮಧ್ಯದೃಕ್ತುಲ್ಯವಾಗುತ್ತಿತ್ತೆಂಬ ಇನ್ನೊಂದು ಕಲ್ಪನೆಯನ್ನು ಕಾಣಿಸಿದ್ದಾರೆ. ಇದಾದರೂ ಇವರ (ನವೀನ ದೃಕ್ಪಕ್ಷದವರ) ಮತದಂತೆಯೇ ತೀರ ವಿಸಂಗತವಾಗಿರುತ್ತದೆ. ಹೇಗೆಂದರೆ:— ಇವರ ಮತದಂತೆ ಭೂಮಧ್ಯದೃಕ್ತುಲ್ಯತೆಗೆ ಆವಶ್ಯಕವಾಗಿರುವ ತಿಥಿ, ಜ್ಯುತ್ಯಾದಿ ಸಂಸ್ಕಾರಗಳು ಸ್ವಭಾವನಿಯತವಾದ ಆಕರ್ಷಣದ ಮೂಲಕ ಯಾವಾಗಲೂ ಇರತಕ್ಕವುಗಳೇ ಆದ್ದರಿಂದ ಅದೊಂದೂ ಸಂಸ್ಕಾರವಿಲ್ಲದೆ ಕೇವಲ ಸಿದ್ಧಾಂತೋಕ್ತ ಸಂಸ್ಕಾರದಿಂದಲೇ ಗ್ರಹವು ಭೂಮಧ್ಯದೃಕ್ತುಲ್ಯವಾಗುವುದು ಎಂದಿಗೂ ಶಕ್ಯವಾಗಿಲ್ಲ. ಇನ್ನು **ಭೂಮಧ್ಯದೃಕ್ತುಲ್ಯವೆಂಬ ಇವರ ಕಲ್ಪನೆಯು ಸಹ ಸರ್ವಥಾ ಅಸಂಭವನೀಯವಾಗಿರುವುದೆಂದು** ಈ ಹಿಂದೆ ಪುಟ ೬೨ರಲ್ಲಿಯೇ ಸ್ಪಷ್ಟಪಡಿಸಿದ್ದು ಇವರು, ತಿಥ್ಯಾದಿಗಳಲ್ಲಿ ಮಾಡತಕ್ಕ ತಿಥಿ, ಜ್ಯುತ್ಯಾದಿ ಸಂಸ್ಕಾರಗಳಿಂದೆಲ್ಲ ಭೂಮಧ್ಯದೃಕ್ತುಲ್ಯತೆಯು

ಉಪಪನ್ನವಾಗುವುದಿಲ್ಲವಾದ ಕಾರಣ ಇವರ ನವೀನ ದೃಕ್ಪಂಚಾಂಗಕ್ಕೂ ಸಹ ಈ ಕಲ್ಪನೆಯು ಕೂಡುವುದಿಲ್ಲವೆಂದು ಕಳೆದ ವೃಷ ಸಂ।ದ ನಮ್ಮ **ನೊಗೇರಿ ಪಂಚಾಂಗದ ಪ್ರಸ್ತಾವನೆಯಲ್ಲಿ** ವಿಶೇಷವಾಗಿ ಚರ್ಚಿಸಿ **ಖಂಡಿಸಿರುವುದು** ಆಗಲೇ ಪ್ರಕಟವಾಗಿರುವುದರಿಂದ ಇದನ್ನು ಪುನಃ ಇಲ್ಲಿ ಖಂಡಿಸಬೇಕಾಗಿಲ್ಲ. **'ನಕ್ಷತ್ರ ಗ್ರಹಯೋಗೇಷು'** ಎಂಬ ಶ್ಲೋಕದಲ್ಲಿ **'ಆದರಾತ್'** ಎಂಬ **ಶಬ್ದವಿಲ್ಲ.** ಶಾ. ವಿ. ಪಂ. ದಲ್ಲಿಯೂ ಹಾಗೆ ಕಾಣಿಸಿದ್ದಿಲ್ಲ. ಅದನ್ನಿವರು ಎಲ್ಲಿಂದ ತಂದರೆಂದು ಇವರನ್ನೇ ಕೇಳಬೇಕು. ಮತ್ತು ಆ ವಚನವನ್ನು ಇವರ ಕಲ್ಪನೆಯಂತೆ **ಅಕ್ಷಾಯನದೃಕ್ಕರ್ಮವೇ ಬೀಜಸಂಸ್ಕಾರವೆಂಬ ಭ್ರಮೆಯಿಂದ ಉದಾಹರಿಸಿದ್ದಲ್ಲ.** ಪರಂತು ಅಂತಹ ವಚನಗಳಲ್ಲಿ ಹೇಳಿರುವಂಥ ಪ್ರತ್ಯಕ್ಷವಿಷಯಗಳಿಗೆ ಮಾತ್ರವೇ ಬೀಜಾದಿ ದೃಕ್ಸಂಸ್ಕಾರಗಳು ಅಗತ್ಯವೆಂಬ **ಸಿದ್ಧಾಂತತತ್ವವನ್ನು ತಿಳಿದೇ** ಶಾ. ವಿ. ಪಂ. ದಲ್ಲಿ **ಅದನ್ನು ಉದಾಹರಿಸಿದ್ದಾಗಿದೆ.** ಇದೊಂದನ್ನೂ ಗ್ರಹಿಸದೆ ಬೀಜಸಂಸ್ಕಾರವು ತಿಥ್ಯಾದಿ ಸಾಧನೆಗಾಗಿ ಉಂಟಾದ್ದೆಂಬ ಭ್ರಮೆಯಿಂದ ಸ್ವರೂಪತಃ ಪ್ರತ್ಯಕ್ಷವಲ್ಲದ ಕರ್ಮಾರ್ಹತಿಥ್ಯಾದಿಗಳಿಗೂ ಬೀಜಸಂಸ್ಕಾರವು ಬೇಕೆಂದು ಇವರು ಕಲ್ಪಿಸಿಕೊಂಡು ಪರಗ್ರಂಥವನ್ನು ದೂಷಿಸಲಿಕ್ಕೆ ತೊಡಗಿದ್ದು **ಇವರ ಪ್ರತ್ಯಕ್ಷ, ಶಾಸ್ತ್ರಾನಭಿಜ್ಞತೆಯನ್ನು ವ್ಯಕ್ತಪಡಿಸುವುದಿಲ್ಲವೇ? 'ಖೇಟೇಷು ಚಕ್ರಚಲನಾತ್'** ಎಂಬ ಶ್ಲೋಕದಲ್ಲಿರುವ **'ಸಂಪ್ರದೃಶ್ಯತೇ'** ಎಂಬ ಶಬ್ದಕ್ಕೆ ವಾಸ್ತವಿಕವಾಗಿ ಸಂಭವಿಸತಕ್ಕ (ಭೂಪೃಷ್ಠ) ದೃಶ್ಯವೆಂದೇ ಅರ್ಥವಾಗುತ್ತದೆ. ಮುಂದೆ **'ತಸ್ಮಾದ್ಬೀಜಾದಿಸಂಸ್ಕಾರಂ'** ಎಂದಿರುವುದರಿಂದ ಅಂತಹ ಭೂಪೃಷ್ಠದೃಶ್ಯತೆಯ ಬಗ್ಗೆ ಬೀಜಾದಿ ದೃಕ್ಸಂಸ್ಕಾರಗಳನ್ನು ಮಾಡತಕ್ಕದ್ದೆಂಬ ಅರ್ಥವು ಸ್ಪಷ್ಟವಾಗಿರುತ್ತದೆ. ಮತ್ತು ಈ **'ಬೀಜಾದಿ'** ಎಂಬ ಶಬ್ದದಲ್ಲಿ ವಾಸ್ತವಿಕ ದೃಶ್ಯತೆಗೆ ಉಪಯೋಗವಿರುವ ಅಕ್ಷಾಯನಾದಿ ದೃಕ್ಸಂಸ್ಕಾರಗಳೆಲ್ಲವೂ ಸಂಗ್ರಹವಾಗುವುದರಿಂದ ಶಾಸ್ತ್ರತಃ ಯಾವ ಯಾವ ವಿಷಯಗಳಲ್ಲಿ ಅಂತಹ ವಾಸ್ತವಿಕ ದೃಶ್ಯತೆಯ ಅಗತ್ಯವಿರುವುದೋ ಆ ವಿಷಯಗಳಲ್ಲಿ ಮಾತ್ರ ಬೀಜಸಂಸ್ಕಾರವು ಅಗತ್ಯವೆಂಬ ಅರ್ಥವಿರುವುದೆಂದು ಶಾ. ವಿ. ಪಂ. ದ ಟಿಪ್ಪಣಿಯಲ್ಲಿ ವಿವರಿಸಿದ್ದು ಅದನ್ನು ಇವರು ವಿಚಾರಹೀನತೆಯಿಂದ ಎಷ್ಟು ಅಲಕ್ಷಿಸಿದರೂ ತಿಥ್ಯಾದಿಗಣಿತದಲ್ಲಿ ಚ್ಯುತ್ಯಾದಿ ಬೀಜಸಂಸ್ಕಾರಗಳನ್ನು ಮಾಡಿಯೂ, ಅಕ್ಷಾಯನಾದಿ ಸಂಸ್ಕಾರಗಳನ್ನು ಮಾಡದೆಯೂ ಇರತಕ್ಕ **ಈ ಬೀಜವಾದಿಗಳ ಮತಕ್ಕೆ ಅದು ಅತ್ಯಂತ ಪ್ರತಿಕೂಲವೇ ಆಗಿರುತ್ತದೆ.**

**''ನನು ಯಂತ್ರವೇಧಾದಿನಾ ಸಾಧಿತದೃಙ್ಮಂಡಲಸೂರ್ಯ-ಚಂದ್ರಾಭ್ಯಾಮೇವ ತಿಥ್ಯಾದಯಃ ಸಾಧ್ಯಾಃ।''** ಇತ್ಯಾದಿ ಪ್ರೌಢಯುಕ್ತಿಯಿಂದ ಕೂಡಿರುವ ಪೂರ್ವಪಕ್ಷವಚನದ ಸ್ವಾರಸ್ಯವನ್ನು ಗ್ರಹಿಸದೆ, ಅದರ ಕೇವಲ ಶಬ್ದಾರ್ಥವನ್ನಷ್ಟೇ ಆದರೂ ತಿಳಿದುಕೊಳ್ಳದೆ, ಆರ್ಯಭಟಯೋಕ್ತಿಯ

ಸಂವರ್ಭವನ್ನೂ, ಅವರ ಪರ್ಯವಸಿತಾರ್ಥವನ್ನೂ ಲಕ್ಷಿಸದೆ ಅಂತಹ ಪ್ರಬಲ ಪೂರ್ವಪಕ್ಷವನ್ನಾದರೂ ಸಿದ್ಧಾಂತಪಕ್ಷವು ಹೇಗೆ ಯುಕ್ತವಾಗಿ ಖಂಡಿಸಿದೆ; ಅಂತಹ ಪ್ರಬಲ ಪಕ್ಷವೇ ಖಂಡಿಸಲ್ಪಟ್ಟ ಮೇಲೆ 'ಪ್ರಧಾನಮಲ್ಲನಿಬರ್ಹಣನ್ಯಾಯ'ದಂತೆ ತಮ್ಮ ಪ್ರಮಾಣರಹಿತವಾದ ಕಲ್ಪನಾಮತವಂತೂ ದೂರತೋಪಾಸ್ತವಾಯಿತೆಂಬುದನ್ನು ಸಹ ಗಮನಿಸದೆ ತೀರ ನಿಸ್ಸಾರವಾದ ಒರಟು ಮಾತುಗಳಿಂದ ಪುಟಗಳನ್ನಷ್ಟು ತುಂಬಿ ವ್ಯರ್ಥವಾಗಿ ಬಡಬಡಿಸಿದ್ದನ್ನು ನೋಡಿದರೆ ನಿಜವಾಗಿಯೂ ಇವರ ಅಗಾಧಮೌಢ್ಯಕ್ಕಾಗಿ ಪಶ್ಚಾತ್ತಾಪಪಡಬೇಕಾಗಿದೆ. ಇನ್ನಾದರೂ ಈ ಪಂಡಿತ ಮಹಾಶಯರು ಖಂಡಿತವಾಗಿಯೂ ಯಂತ್ರವೇಧಾದಿಸಾಧಿತ ದೃಙ್ಮಂಡಲ ಸೂರ್ಯ-ಚಂದ್ರರೆಂದರೇನು? ದೃಙ್ಮಂಡಲವೆಂದರೆ ಯಾವುದು? ಶಾಸ್ತ್ರಪ್ರಸಿದ್ಧವಾದ ಅದರ ಸ್ವರೂಪವೇನು? ಅಂತಹ ದೃಙ್ಮಂಡಲಗತ ಸೂರ್ಯ-ಚಂದ್ರಸ್ಫುಟಗಳಲ್ಲಿ ವಿಶೇಷತೆಯೇನು? ಅಂತಹ ಸ್ಫುಟಗಳಿಂದ ಸಾಧಿಸಲ್ಪಡುವ ತಿಥ್ಯಾದಿಗಳು ಎಂಥವು? ಅಂಥ ತಿಥ್ಯಾದಿಗಳನ್ನು ಕರ್ಮಾಂಗವಾಗಿ (ಹಳ್ಳಿಯ ಸಾಂಪ್ರದಾಯವು ಇವರಿಗೆ ಸೇರುವುದಿಲ್ಲವಾದುದರಿಂದ) ಯಾವ ಪಟ್ಟಣವಲ್ಲಿ ಉಪಯೋಗಿಸುತ್ತಾರೆ? ಮುಂಬಯಿ, ಮದ್ರಾಸ, ಕಲ್ಕತ್ತಗಳಲ್ಲಿಯೋ? ಅಥವಾ ಅದಕ್ಕೂ ಮಿಕ್ಕಿದ ಲಂಡನ್, ಪ್ಯಾರೀಸ್, ನ್ಯೂಯಾರ್ಕಗಳಲ್ಲಿಯೋ? ಮತ್ತು ಸೂರ್ಯಸಿದ್ಧಾಂತಾದಿ ಗ್ರಂಥಗಳಲ್ಲಿ ಹೇಳಿರುವ ಅಥವಾ ಇವರಾದರೂ ಕರ್ಮಾರ್ಹವೆಂದು ಹೇಳಿಕೊಳ್ಳುವ ತಿಥ್ಯಾದಿಗಳು ಇಂಥವೇಯೋ? ಎಂಬಿಷ್ಟು ವಿಷಯಗಳನ್ನಾದರೂ ತಿಳಿಕೊಂಡಾರೆಂದು ನಂಬಬಹುದೇ?

ಇನ್ನು ಸೂರ್ಯಸಿದ್ಧಾಂತಾದಿ ಗ್ರಂಥಗಳು ದೃಕ್ತುಲ್ಯವಾಗಿರುವಾಗ ಅವುಗಳನ್ನು ಅವಲಂಬಿಸಿದವರು ಶಿಷ್ಟರಲ್ಲವೆಂತ ಸಿದ್ಧಮಾಡುವರೋ? ಎಂದು ವಿಸಂಗತವಾಗಿ ಆಕ್ಷೇಪಿಸಿದ್ದಾರೆ. ಮತ್ತು ಹಿಂದೆ ಇವರ ಗ್ರಂಥದ ಪುಟ ೧೫, ಪಂ. ೨೧–೨೨ರಲ್ಲಿಯೂ, ಪುಟ ೧೦, ಪಂ. ೧೭–೨೫ರಲ್ಲಿಯೂ ಇದೇ ತರದ ಅಸಂಬದ್ಧವಾದ ಕಲ್ಪಿತ ಆಕ್ಷೇಪಗಳನ್ನು ಕಾಣಿಸಿದ್ದಾರೆ. ಅವುಗಳನ್ನೆಲ್ಲ ಈ ಹಿಂದೆಯೇ ಕ್ರಮವಾಗಿ ಪುಟ ೫೮ ಮತ್ತು ೪೯–೫೦ರಲ್ಲಿ ಸಕಾರಣವಾಗಿ ಖಂಡಿಸಿರುವುದರಿಂದ ಇಲ್ಲಿ ಹೆಚ್ಚಿಗೆ ಖಂಡಿಸತಕ್ಕದ್ದಿರುವುದಿಲ್ಲ. ತಿಥ್ಯಾದಿ ಸಾಧನೆಗೆ ಪ್ರಮಾಣಭೂತವಾದ ಗ್ರಂಥವು ಯಾವ ಕಾಲದಲ್ಲಿಯೂ ದೃಕ್ತುಲ್ಯವಾಗಿರಬಾರದೆಂತ ಯಾರೂ ಎಲ್ಲಿಯೂ ಹೇಳಿಲ್ಲ. ಆಯಾಯ ಕಾಲದ ಜನರು ಶಾಸ್ತ್ರಸಮ್ಮತವಾದ ಬಾಣವೃದ್ಧಿ-ರಸಕ್ಷಯಲಕ್ಷಣದ ತಿಥ್ಯಾದಿಗಳನ್ನು ವಿಧಿಸುವ ಸಿದ್ಧಾಂತಾದಿ ಗ್ರಂಥಗಳನ್ನು ಅವಲಂಬಿಸಿದ್ದರಿಂದ ಶಿಷ್ಟರೆನ್ನುವುದಲ್ಲದೆ ಶಾಸ್ತ್ರವಿರುದ್ಧವಾದ ಇವರ ನವೀನ ದೃಕ್ಪಂಚಾಂಗದಂತಹ ಅಪ್ರಮಾಣಕೃತಿಯ ಅವಲಂಬನದಿಂದ ಶಿಷ್ಟರೆಂತಾಗುವುದಿಲ್ಲ. ಈ ವಿಷಯವನ್ನು ಹಿಂದೆ ೧೨-೧೩ನೇ ಪ್ರಶ್ನೆಗಳ ಉತ್ತರದಲ್ಲಿಯೇ ಸ್ಪಷ್ಟಪಡಿಸಿರುತ್ತೇನೆ.

ಇವರ ನವೀನ ದೃಕ್ಪಕ್ಷವು ಹುಟ್ಟುವ ಮೊದಲು ಸಮಗ್ರ **ಭರತಖಂಡದಲ್ಲಿ ಯಾವ ಜನರಾದರೂ** ಇವರ ನವೀನ **ದೃಕ್ಪಂಚಾಂಗದಂತಹ** ವಿಲಕ್ಷಣವಾದ **ಪಂಚಾಂಗವನ್ನು ಅವಲಂಬಿಸಿದ್ದರೆಂತ** ಇವರು ಸಿದ್ಧಮಾಡುವರೋ? ಕರ್ಮಾರ್ಹವಾದ ತಿಥ್ಯಾದಿ ಸಾಧನೆಗೆ ಅಗತ್ಯವೆಂದು ಇವರು ಕಲ್ಪಿಸಿಕೊಂಡಿರುವ ತಿಥಿ, ಚ್ಯುತ್ಯಾದಿ ಸಂಸ್ಕಾರಗಳೇ ಮೊದಲು ಉತ್ಪನ್ನವಾಗಿದ್ದಿಲ್ಲವೆನ್ನುವುದಾದರೆ ನಾವು ಹಿಂದೆ ಕಾಣಿಸಿದಂತೆ ಇವರ ಆಕರ್ಷಣಶಾಸ್ತ್ರದಿಂದಲೂ, ಇವರು ಪ್ರಮಾಣವೆಂದು ಕಲ್ಪಿಸಿಕೊಂಡ ಭಾಸ್ಕರೀಯಬೀಜೋಪನಯದಿಂದಲೂ ಸಹ ಇವರ ಮತದಂತೆಯೇ **ಅದು ಸುಳ್ಳೆಂದು ಸಿದ್ಧವಾಗುವುದಿಲ್ಲವೇ?** ಈ ಯಾವ ವಿಚಾರವೂ ಇಲ್ಲದೆ ಇವರು ಆಕ್ಷೇಪಿಸಿದ್ದು ಗ್ರಾಹ್ಯಾಗ್ರಾಹ್ಯತೆಯ ಅರಿವಿಲ್ಲದೆ ಕಲ್ಪಿಸಿದ ಕೇವಲ ಕುಹಕ ಆಕ್ಷೇಪವಲ್ಲದೆ ಬೇರೆಯಲ್ಲ. ಧರ್ಮಕರ್ಮಗಳ ವಿಷಯದಲ್ಲಿ ಗ್ರಾಹ್ಯಾಗ್ರಾಹ್ಯತೆಯ ನಿರ್ಣಯವು ದೃಕ್ತುಲ್ಯ-ದೃಗ್ವೈಷಮ್ಯಗಳೆಂಬ ಕಾರಣದಿಂದ ಆಗತಕ್ಕದ್ದಾಗಿರದೆ ಧರ್ಮಶಾಸ್ತ್ರದ ಅನುಕೂಲ, ಪ್ರತಿಕೂಲತೆಯ ವಿಚಾರದಿಂದಲೂ, ಆರ್ಷ-ಲೌಕಿಕ ವಚನಗಳ ಬಲಾಬಲವಿವೇಕದಿಂದಲೂ ಆಗತಕ್ಕದ್ದೆಂದು ಇನ್ನಾದರೂ ಇವರು ತಿಳಿದುಕೊಂಡಿರಬೇಕು.

ಮುಂದೆ 'ಆಯಾ ಕಾಲಕ್ಕೆ ದೃಕ್ತುಲ್ಯವಾದ ಗ್ರಂಥಗಳನ್ನವಲಂಬಿಸಿ ಕರ್ಮಾನುಷ್ಠಾನ ಮಾಡುತ್ತ ಬಂದದ್ದು ಕಂಡು ಬರುತ್ತದೆ' ಎಂದಿದ್ದಾರೆ. ಆದರೆ ಈ ವರೆಗಿನ ಆಯಾ ಕಾಲದ ಗಣಿತಗ್ರಂಥಗಳೆಲ್ಲ ಬಾಣವೃದ್ಧಿರಸಕ್ಷಯಲಕ್ಷಣದ ತಿಥ್ಯಾದಿಗಳನ್ನೇ ವಿಧಿಸತಕ್ಕವುಗಳಾಗಿದ್ದು, ಅಂತಹ ತಿಥ್ಯಾದಿಗಳಿಂದ ಸಾಧಿಸುವ ಗ್ರಹಣಾದಿಗಳಲ್ಲಿ ಯಾವಾಗಲಾದರೂ ದೃಗ್ವೈಷಮ್ಯವು ತೋರಿದಾಗ ಆ ವಿಷಯಗಳಲ್ಲಿ ಮಾತ್ರ ದೃಶ್ಯಯೋಗ್ಯತೆಯನ್ನು ಸಾಧಿಸಲಿಕ್ಕಾಗಿ ವಿಶೇಷವಾದ ದೃಕ್ಸಂಸ್ಕಾರವನ್ನು ಹೇಳಿರುವ ವಟೇಶ್ವರಸಿದ್ಧಾಂತ, ಲಘುಮಾನಸ, ಸಿದ್ಧಾಂತಶೇಖರ ಮೊದಲಾದ ಬೇರೆ ಬೇರೆ ಕಾಲದ ಅನೇಕ ಗಣಿತಗ್ರಂಥಗಳಿರುವುದನ್ನು ಹಿಂದೆ ಪುಟ ೫೦ರಲ್ಲಿ ತೋರಿಸಿರುತ್ತೇವೆ. ಅದಲ್ಲದೆ ಅಂತಹ ವಿಶೇಷ ದೃಕ್ಸಂಸ್ಕಾರ (ಬೀಜ) ದ ಅಗತ್ಯವಿದ್ದಾಗ ಅದನ್ನು ಗ್ರಹಣಾದಿಗಳಲ್ಲಿ ಮಾತ್ರ ಮಾಡಬೇಕಲ್ಲದೆ ತಿಥ್ಯಾದಿಗಳಲ್ಲಿ ಮಾಡಕೂಡದೆಂದು ವಿಧಿಸಿರುವ ಅನೇಕ ವಚನಗಳನ್ನು ಈ ಹಿಂದೆ ಪುಟ ೩೮ರಲ್ಲಿಯೂ, ಮುಂದಿನ ಭಾಗದಲ್ಲಿಯೂ ಸಹ ಪ್ರತ್ಯೇಕವಾಗಿ ಕಾಣಿಸಿರುತ್ತೇವೆ. ಅವುಗಳಿಂದೆಲ್ಲ ಇವರ ಕಲ್ಪನೆಯಂತೆ ಗ್ರಹಣಾದಿಗಳಿಗೆ ಅಗತ್ಯವಾದ ವಿಶೇಷಸಂಸ್ಕಾರವು ತಿಥ್ಯಾದಿಗಳಿಗೂ ಯೋಗ್ಯವಾದ್ದೆಂದು ಶಾಸ್ತ್ರದಲ್ಲಿ ಎಲ್ಲಿಯೂ ಹೇಳಿಲ್ಲವೆಂದೂ, ಅಷ್ಟೇ ಅಲ್ಲ; ಅದು ಅಯೋಗ್ಯವೆಂದೇ ಹೇಳಲ್ಪಟ್ಟಿರುವುದೆಂದೂ ಸ್ಪಷ್ಟವಾಗಿ ಎಲ್ಲರಿಗೂ ತಿಳಿಯುವಂತಿದೆ. ಮತ್ತು ಅದರಂತೆಯೇ ಈ (ನವೀನ ದೃಕ್ಪಕ್ಷ ನಿರ್ಮಾಪಕರು) ವರೆಗೆ ಯಾವ ಕಾಲದಲ್ಲಿಯೂ, ಎಲ್ಲಿಯೂ, ಯಾರೊ

ಬ್ಬರೂ ಅಂತಹ ವಿಶೇಷಸಂಸ್ಕಾರದ ಮೂಲಕ ಇವರ ನವೀನ ದೃಕ್ಪಂಚಾಂಗದ ತಿಥ್ಯಾದಿಗಳಂತೆ ಬಾಣವೃದ್ಧಿ-ರಸಕ್ಷಯಲಕ್ಷಣವಿಲ್ಲದಂತಾದ ತಿಥ್ಯಾದಿಗಳನ್ನವಲಂಬಿಸಿ ಕರ್ಮಾನುಷ್ಠಾನ ಮಾಡಿದ್ದಾದರೂ ಇರುವುದಿಲ್ಲವೆಂಬುದು ಎಲ್ಲರಿಗೂ ತಿಳಿದಿರತಕ್ಕದ್ದೇ ಸರಿ.

ಪುಟ ೫೭ರಲ್ಲಿ 'ಸರ್ವತ್ರ ಭೂಮಂಡಲದಲ್ಲಿ ಒಂದೇ ಗ್ರಂಥವನ್ನವಲಂಬಿಸಿದ್ದು ಕಾಣಬರುವುದಿಲ್ಲವೆಂದು ಹೇಳಿ, ಆ ಭಿನ್ನ-ಭಿನ್ನ ಗ್ರಂಥಾಶ್ರಯಿಗಳು ದೃಕ್‌ಶರಣರಾಗುವುದಿಲ್ಲವೇ?' ಎಂದು ಆಕ್ಷೇಪಿಸಿದ್ದಾರೆ. ಶಾಖಾಭೇದದಿಂದ ವೇದಗಳೂ, ದೇಶಾದಿ ಭೇದದಿಂದ ಇತರ ವಿಷಯಗಳೂ, ಇನ್ನೂ ಅನೇಕ ಭೇದದಿಂದ ಅನೇಕ ಗ್ರಂಥಗಳೂ ಅನೇಕವಾಗಿ ಆಶ್ರಯಿಸಲ್ಪಟ್ಟಿರುವಂತೆ ಸನಾತನ ವೈದಿಕಧರ್ಮದ ಸೀಮೆಯಾದ ಈ ನಮ್ಮ ಭರತಖಂಡದಲ್ಲಿ ಬೇರೆ ಬೇರೆ ಗಣಿತಗ್ರಂಥಗಳನ್ನು (ಪಂಚಾಂಗಗಳನ್ನು) ಸಹ ಅವಲಂಬಿಸಿದ್ದಿದೆ. ಆದರೆ ಅವೆಲ್ಲವೂ ಒಂದೇ ವಿಧವಾದ ಬಾಣವೃದ್ಧಿ-ರಸಕ್ಷಯಲಕ್ಷಣದ ತಿಥ್ಯಾದಿಗಳನ್ನೇ ಸಾಧಿಸತಕ್ಕವುಗಳಾಗಿದ್ದು, ಅದಕ್ಕೆ ವಿರುದ್ಧವಾದ ಗ್ರಂಥವನ್ನಾಗಲೀ, ಪಂಚಾಂಗವನ್ನಾಗಲೀ ಈ ದೃಕ್ಪಕ್ಷಿಗಳ ಹೊರತು ಬೇರೆ ಯಾರೂ ಅವಲಂಬಿಸಿದ್ದಿಲ್ಲವಾದುದರಿಂದ ಅವರೆಲ್ಲ ದೃಕ್‌ಶರಣರೆಂತಾಗುವುದಿಲ್ಲ. ವೈದಿಕಧರ್ಮದ ಸೀಮೆಯನ್ನು ಮೀರಿ ಸರ್ವತ್ರ ಭೂಮಂಡಲದ ಕಡೆಗೆ ದೃಷ್ಟಿಯು ತಿರುಗಿದ್ದೇ ಇವರ ಇಂತಹ ವಿಕಟಕಲ್ಪನೆಗಳಿಗೆಲ್ಲ ಕಾರಣವಾಗಿರಬಹುದು.

'ವಿಪಕ್ಷಿಗಳು ವೇದದಂತೆ ಘನ್ನಿಸುವ ಸೂರ್ಯಸಿದ್ಧಾಂತ'ವೆಂದು ಹೇಳಿ ಅದರಂತೆ ಇನ್ನೂ ಕೆಲವು ಕಡೆಗಳಲ್ಲಿ ಸೂರ್ಯಸಿದ್ಧಾಂತವು ತಮಗೆ ಮಾನ್ಯವಿಲ್ಲವೆಂಬುದನ್ನು ಧ್ವನಿಯಿಂದ ವ್ಯಕ್ತಪಡಿಸಿರುತ್ತಾರೆ. ಮತ್ತು ಪುಟ ೫೦ರಲ್ಲಿ 'ತ್ರಿಂಶತ್ಕೃತ್ಯಃ' ಎಂಬ ಸೂರ್ಯಸಿದ್ಧಾಂತದ ವಚನಕ್ಕೆ ಮಿಥ್ಯಾತ್ವವನ್ನು ಸಹ ಕಲ್ಪಿಸಿರುತ್ತಾರೆ. (ಅದನ್ನು ಹಿಂದೆ ಪುಟ ೧೧೮–೧೧೯ರಲ್ಲಿ ಖಂಡಿಸಿದೆ.) ಪ್ರತ್ಯಕ್ಷವಾಗಿ ಭಗವನ್ಮುಖದಿಂದ ಉಪದೇಶಿಸಲ್ಪಟ್ಟಿರುವ ಸೂರ್ಯಸಿದ್ಧಾಂತವನ್ನು ತದ್ವಿರೋಧಿಗಳಾದ ಇವರಂತಹ ಕೇವಲ ಕಲ್ಪನಾಲಂಪಟರು ಮಾನ್ಯಮಾಡದಿದ್ದರೂ ವಿಶಿಷ್ಟ ವೈದಿಕಧರ್ಮಾನುಯಾಯಿಗಳಿಗೆಲ್ಲ ಅದು ಮಾನ್ಯವೇ ಆಗಿರುವುದರಿಂದ ಅದರ ಮಹತ್ವಕ್ಕೆ ಏನೂ ಕೊರತೆಯಾಗುವಂತಿಲ್ಲ. ತನಗೆ ಪ್ರತಿಕೂಲವಾದ್ದೆಂದು ಗೂಗೆಯು ಎಷ್ಟೇ ಅಮಾನ್ಯಮಾಡಿದರೂ ಜಗತ್ತಿಗೆಲ್ಲ ಹಿತಕರವಾಗಿರುವ ಸೂರ್ಯಪ್ರಭೆಯು ಸರ್ವರಿಗೂ ಸರ್ವದಾ ಮಾನ್ಯವೇ ಆಗಿರುತ್ತದೆ. 'ಶಾಸ್ತ್ರಮಾದ್ಯಂ ತದೇವೇದಂ' ಎಂಬ ಸಿದ್ಧಾಂತವಚನದಲ್ಲಿ ಸೂರ್ಯನಿಂದ ಉಪದೇಶಿಸಲ್ಪಟ್ಟ ಅನಾದಿಯಾದ ಜ್ಯೋತಿಃಶಾಸ್ತ್ರವೇ ಈ ಸೂರ್ಯಸಿದ್ಧಾಂತವೆಂದು ಸ್ಪಷ್ಟವಾಗಿ ಹೇಳಿದೆ. 'ಕಾಲಭೇದೋಽತ್ರ ಕೇವಲಂ!' ಎಂಬ ವಾಕ್ಯಕ್ಕೆ ಮೊದಲು ಕೃತಸ್ಯಾಂತೇ ಗತಾ

ಅದೆ!' 'ಅಸ್ಮಿನ್ ಕೃತಯುಗಸ್ಯಾಂತೇ।' ಇತ್ಯಾದಿ ವಚನಗಳನ್ನು ಕಾಣಿಸಿ ತಾತ್ಕಾಲಿಕ ಕೃತಯುಗಾಂತಕ್ಕೆ ಸರಿಯಾಗಿ ಉಪದೇಶಿಸಲ್ಪಟ್ಟಿರುವ ಸೃಷ್ಟ್ಯಾದಿಗತವರ್ಷವೇ ಮೊದಲಾದವುಗಳಲ್ಲಿ ಮಾತ್ರ ಕೇವಲ ತ್ರೈರಾಶಿಕ ರೀತಿಯಿಂದ ಸಿದ್ಧವಾಗುವ ಸಂಖ್ಯಾಭೇದವಷ್ಟೇ ಅಲ್ಲದೆ ಬೇರೆ ಏನೂ ಭೇದವಿಲ್ಲವೆಂಬ ಅರ್ಥವು ಸ್ಪಷ್ಟವಾಗಿರುತ್ತದೆ. ಹೀಗೆ ಅನಾದಿಕಾಲದಿಂದಲೂ ಏಕಪ್ರಕಾರವಾಗಿರತಕ್ಕ ಸಿದ್ಧಾಂತಶಾಸ್ತ್ರವು ಅನ್ಯಗ್ರಂಥದ ಅಪೇಕ್ಷೆಯಿಲ್ಲದೆ ಸ್ವಯಂ ಪ್ರಮಾಣವಾಗಿದ್ದು, ಅದರಲ್ಲಿ ಬೀಜಸಂಸ್ಕಾರವು ಸೇರಿತ್ತೆನ್ನುವುದು ಕೇವಲ ವ್ಯಾಹತಿಯಾಗಿರುವುದೆಂಬುದನ್ನು ಹಿಂದೆಯೇ ತೋರಿಸಿರುತ್ತೇವೆ. ಆದುದರಿಂದ ಸೂರ್ಯಸಿದ್ಧಾಂತವು ಬೀಜಸಂಸ್ಕೃತವಾದ್ದೆಂಬ ಇವರ ಕಲ್ಪನೆಯು ಕೇವಲ ನಿರ್ಬೀಜವಾದುದೆಂದು ಸಿದ್ಧವಾಗುತ್ತದೆ. ಮತ್ತು ಅನಾದಿಕಾಲದಿಂದ ಪ್ರವೃತ್ತವಾದ ಪುರಾತನವಾದ ಶಾಸ್ತ್ರದಲ್ಲಿ ಬಹು ಜನರ ಪಠನ, ಪಾಠನಾದಿ ಕಾರಣಗಳಿಂದ ಕೆಲಕೆಲವು ಪಾಠಭೇದಗಳು ಸಂಭವಿಸುವುದು ಸ್ವಾಭಾವಿಕವಾಗಿದೆ. ಆದಕಾರಣ 'ಪಂಚಸಿದ್ಧಾಂತಿಕೆ'ಯಲ್ಲಿ ಸಂಗ್ರಹಿಸಲ್ಪಟ್ಟಿರುವ ಸಾರಾಂಶಕ್ಕೂ, ಸೂರ್ಯಸಿದ್ಧಾಂತದಲ್ಲಿ ಪ್ರಚುರವಾಗಿರುವುದಕ್ಕೂ ಸ್ವಲ್ಪಮಟ್ಟಿಗೆ ಅಂತರವು ತೋರುವುದೆಂಬ ಅಷ್ಟೇ ಕಾರಣದಿಂದ ಇನ್ನೊಂದು ಬಗೆಯ ಬೇರೆ ಸೂರ್ಯಸಿದ್ಧಾಂತವುಂಟೆಂತಾಗಲೀ, ಆದ್ದರಿಂದ ಈಗ ಪ್ರಚಾರದಲ್ಲಿ ಇರುವ ಸೂರ್ಯಸಿದ್ಧಾಂತವೇ ಅರ್ವಾಚೀನವಾದ್ದೆಂತಾಗಲೀ, ಬೀಜಸಂಸ್ಕೃತವಾದ್ದೆಂತಾಗಲೀ, ಏನೊಂದೂ ಸಿದ್ಧವಾಗುವಂತಿಲ್ಲ. ಅಷ್ಟೇ ಅಲ್ಲ; ಈಗ ಎಂಟುನೂರು ವರ್ಷಗಳಿಗಿಂತಲೂ ಹಿಂದಿನವರಾದ ಭಾಸ್ಕರಾಚಾರ್ಯರು ತಮ್ಮ ಗ್ರಂಥದಲ್ಲಿ ಈಗ ಇರುವ ಸೂರ್ಯಸಿದ್ಧಾಂತವನ್ನೇ ಆಗಮಪ್ರಮಾಣವೆಂದು ಆಕಾಲದಲ್ಲಿಯೇ ಉದಾಹರಿಸಿರುವುದರಿಂದಲೂ, ಭಗವಾನ್ ಶ್ರೀವ್ಯಾಸಮಹರ್ಷಿಗಳು 'ಮಯಾಯ ಪರಿಪೃಚ್ಛತೇ' ಎಂದು ಈ -ಮಯ- ಸೂರ್ಯಸಂವಾದಾತ್ಮಕವಾದ ಸೂರ್ಯಸಿದ್ಧಾಂತವನ್ನೇ ಅನಾದಿಯಾದ 'ಸೌರೋಪನಿಷತ್' ಎಂದು ನಿರ್ದೇಶಿಸಿರುವುದರಿಂದಲೂ, ನಾರದಪುರಾಣದಲ್ಲಿಯೂ ಸಹ ಇದೇ ಸೂರ್ಯಸಿದ್ಧಾಂತವನ್ನೇ ಹೇಳಿರುವುದರಿಂದಲೂ, ಇನ್ನೂ ಅನೇಕಾನೇಕ ಪ್ರಾಮಾಣಿಕ ಪುರುಷರಾದ ಪೂರ್ವಕಾಲದ ಮಹನೀಯರು ಈ ಸೂರ್ಯಸಿದ್ಧಾಂತವನ್ನೇ ಸೂರ್ಯೋಕ್ತಶಾಸ್ತ್ರವೆಂದು ಪ್ರಮಾಣೀಕರಿಸಿರುವುದರಿಂದಲೂ, ಇನ್ನೂ ಅನೇಕಕಾರಣಗಳಿಂದಲೂ ಭಗವಂತನು ಮಯನಿಗೆ ಉಪದೇಶಿಸಿರುವ ಈ ಸೂರ್ಯಸಿದ್ಧಾಂತವೇ ಪ್ರಾಮಾಣಿಕವಾದ ಅನಾದಿಶಾಸ್ತ್ರವೆಂದು ನಿಃಸಂದಿಗ್ಧವಾಗಿ ಸಿದ್ಧಾಂತವಾಗಿರುತ್ತದೆ. ಇನ್ನು 'ಕಾಲೇನ ದೃಕ್ಸಮೋ ನ ಸ್ಯಾತ್' ಈ ಮೊದಲಾದ ಬೀಜಪ್ರತಿಪಾದನೆಯು ಸೂರ್ಯಸಿದ್ಧಾಂತದ ಪ್ರಾಮಾಣಿಕವಾದ ಪ್ರತಿಗಳಲ್ಲಿ ಎಲ್ಲಿಯೂ ಕಾಣುವುದಿಲ್ಲವಾದುದರಿಂದಲೂ, ಮತ್ತು ಸೂರ್ಯಸಿದ್ಧಾಂತದ ... ಅತ್ಯಂತ ಅಸಂಗತ

ವೂ, ವಿರುದ್ಧವೂ ಆಗಿರುವುದರಿಂದಲೂ, ಬೀಜೋಪನಯವು ಸೂರ್ಯಸಿದ್ಧಾಂತದಲ್ಲಿ ಸೇರಿದ್ದಲ್ಲವೆಂದು ಈ ಮೊದಲೇ ನಿಷ್ಕರ್ಷವಾಗಿ ಸೂರ್ಯಸಿದ್ಧಾಂತದ ವ್ಯಾಖ್ಯಾನಕರ್ತರು ದೃಢಪಡಿಸಿರುವುದರಿಂದಲೂ, ದೃಕ್ಪಕ್ಷಿಗಳಲ್ಲಿಯೂ ಸಹ ವಿವೇಕವುಳ್ಳವರಿಗೆಲ್ಲ ಅದು ಸಮ್ಮತವೇ ಆಗಿರುವುದರಿಂದಲೂ ಸಹ ಅಂತಹ ಕಲ್ಪಿತವಚನಗಳಿಂದ ಸೂರ್ಯಸಿದ್ಧಾಂತಕ್ಕೆ ಬೀಜಸಂಸ್ಕಾರದ ಸಂಬಂಧವಾದರೂ ಇರಬಹುದೆಂಬ ಶಂಕೆಗೂ ಕೂಡ ಆಸ್ಪದವಿರುವುದಿಲ್ಲ. ಹೀಗೆ ಯಾವ ರೀತಿಯಿಂದ ವಿಚಾರಿಸಿದರೂ **ಸೂರ್ಯಸಿದ್ಧಾಂತದಲ್ಲಿ ಬೀಜಸಂಸ್ಕಾರದ ಸಂಪರ್ಕವು ಇಲ್ಲವೆಂದೇ** ಸಿದ್ಧವಾಗುತ್ತದೆ. ಆದರೂ ತಾವು ಕರ್ಮಾರ್ಹತಿಥ್ಯಾದಿಗಳಿಗೂ ಅಗತ್ಯವಾದ್ದೆನ್ನುವ ಬೀಜಸಂಸ್ಕಾರವನ್ನು ಶಾಸ್ತ್ರತಃ ತಿಥ್ಯಾದಿಗಳಿಗೆ ವಿಹಿತವಾಗಿರುವ ಸೂರ್ಯಸಿದ್ಧಾಂತದ ಮೇಲೆಯೂ ಆರೋಪಿಸಬೇಕೆಂದು ಅವರಲ್ಲಿ ಬೀಜಸಂಸ್ಕಾರದ ಹೆಸರನ್ನು ಸಹ ತೋರಿಸಲಿಕ್ಕೆ ಶಕ್ಯವಿಲ್ಲದ ಕಾರಣ ಅದು ಜನ್ಮತಃ ಬೀಜಸಂಸ್ಕೃತವಾಗಿತ್ತೆಂದು ಇವರು ಆರೋಪಿಸಿದ್ದಾರೆ. ಆದರೆ ಇವರ ಈ ನಿರಾಧಾರವಾದ ಆರೋಪದಿಂದ ಸೂರ್ಯಸಿದ್ಧಾಂತದ ಪ್ರಾಮಾಣ್ಯಕ್ಕೆ ಬಾಧಕವಾಗಲಿ, ಇವರ ನವೀನಬೀಜವು ತಿಥ್ಯಾದಿಗಳಿಗೆ ಯೋಗ್ಯವಾದ್ದೆನ್ನುವುದಕ್ಕೆ ಸಾಧಕವಾಗಲೀ ಏನೂ ಇರುವುದಿಲ್ಲ. ಹೇಗೆಂದರೆ– ಇವರ ಆರೋಪದಂತೆ ಸೂರ್ಯಸಿದ್ಧಾಂತವು ಜನ್ಮತಃ ಬೀಜಸಂಸ್ಕೃತವೇ, ಎನ್ನುವಲ್ಲಿಯೂ ಹಾಗೆ ಸಂಸ್ಕರಿಸಿ ಅದನ್ನು ಹುಟ್ಟಿಸಿದವನು ಅದರ ಜನಕನಾದ ಭಗವಂತನೇ ಆಗಿರುವುದರಿಂದ ಅಂತಹ **ಭಗವದ್ವಾಕ್ಯರೂಪವಾದ ಸೂರ್ಯಸಿದ್ಧಾಂತವು ಸ್ವಾಭಾವಿಕವಾಗಿಯೇ ಆಸ್ತಿಕರಿಗೆ ಪ್ರಮಾಣವಾಗಿರಲಿಕ್ಕೆ** ಬಾಧಕವೇನೂ ಇರುವುದಿಲ್ಲ. ಮತ್ತು ಸೂರ್ಯಸಿದ್ಧಾಂತಾದಿ ಸಕಲಶಾಸ್ತ್ರಗಳಿಗೂ ವಿರೋಧವಾಗಿ ಬಾಣವೃದ್ಧಿ-ರಸಕ್ಷಯದ ಅವಧಿಯನ್ನು ಮೀರಿದ, ಹಾಗೂ (ಮುಂದಿನ ಭಾಗದಲ್ಲಿ ಸ್ಪಷ್ಟಪಡಿಸಿರುವಂತೆ) ಕರ್ಮಕಾಲನಿರ್ಣಯಕ್ಕೆ ಸಹ ತೀರ ಬಾಧಕವಾಗಿರುವ ತಿಥ್ಯಾದಿಗಳನ್ನು ಹುಟ್ಟಿಸತಕ್ಕ ಇವರ **ತಿಥಿ, ಚ್ಯುತ್ಯಾದಿ ನವೀನಬೀಜವು ಸ್ವಾಭಾವಿಕವಾಗಿಯೇ ಕರ್ಮಾರ್ಹತಿಥ್ಯಾದಿಗಳಿಗೆ ಯೋಗ್ಯವಾದ್ದಲ್ಲವೆಂದು** ಸಿದ್ಧವಾಗುವುದರಿಂದ ಅದು ಯೋಗ್ಯವಾದ್ದೆನ್ನಲಿಕ್ಕೆ ಸಾಧಕವೇನೂ ಇರುವುದಿಲ್ಲ. ಹೀಗೆ ಇವರಿಗೆ ಸಾಧಕವಾಗಲೀ, ಇತರರಿಗೆ ಬಾಧಕವಾಗಲೀ ಏನೊಂದೂ ಸಂಭವಿಸದೆ ಸೂರ್ಯಸಿದ್ಧಾಂತದ ಮೇಲಿನ ಈ ಬೀಜಾರೋಪವು ತೀರ ನಿಷ್ಫಲವಾಗಿ ಈ ವೃಥಾರೋಪದಿಂದ ಇವರ ದುರುದ್ದೇಶವಷ್ಟೇ ವ್ಯಕ್ತಪಟ್ಟಿರುವುದು **ಇವರ ದುರದೃಷ್ಟದ** ಸೂಚಕವಾಗಿರುತ್ತದೆ.

**ಬೀಜಸಂಸ್ಕಾರವು ತಿಥ್ಯಾದಿಗಳಿಗೆ ಬೇಡ; ಗ್ರಹಣಾದಿಗಳಿಗೆ ಮಾತ್ರ ಬೇಕು.** ಎಂಬುದನ್ನು ಹಿಂದೆ ೯ರಿಂದ ೧೧ನೇ ವರೆಗಿನ ಪ್ರಶ್ನೆಗಳ ಉತ್ತರಗಳಲ್ಲಿ ಸಕಾರಣವಾಗಿ ತಿಳಿಸಿದೆ. ಸೂರ್ಯಸಿದ್ಧಾಂತದಲ್ಲಿ ಮೂಲತಃ

ಬೀಜವನ್ನೇ ಹೇಳಿಲ್ಲವಾದಕಾರಣ ಅವರ ವ್ಯವಸ್ಥೆಯನ್ನು ಸಹ ಅವರಲ್ಲಿ ಹೇಳದಿರುವುದು ಯುಕ್ತವೇ ಆಗಿದೆ. ಆದ್ದರಿಂದ ಆ ಕುರಿತು ಇವರು ಆಕ್ಷೇಪಿಸಿರುವದು ತೀರ ವ್ಯರ್ಥವೇ ಸರಿ. ಇನ್ನು ಸೂರ್ಯಸಿದ್ಧಾಂತದಲ್ಲಿ ಬೀಜದ ವ್ಯವಸ್ಥೆಯನ್ನು ಸ್ಪಷ್ಟವಾಗಿ ಹೇಳಿಲ್ಲವಾದರೂ ಯಾವ ಯಾವ ವಿಷಯಗಳಲ್ಲಿ ಪ್ರತ್ಯಕ್ಷ ದೃಶ್ಯತೆಯು ಅಪೇಕ್ಷಿತವಾಗುವುದೆಂಬುದನ್ನು '**ನಕ್ಷತ್ರಗ್ರಹಯೋಗೇಷು**'ಇತ್ಯಾದಿ ವಚನದಲ್ಲಿ ಸೂಚಿಸಿದೆ. ಮತ್ತು ಬೀಜಸಂಸ್ಕಾರದ ವ್ಯವಸ್ಥೆಯನ್ನು ವಿಧಿಸಿರುವ ಬೇರೆ ಅನೇಕ ಪ್ರಮಾಣವಚನಗಳನ್ನು ಈ ಹಿಂದೆ ಪುಟ ೨೮ ರಲ್ಲಿಯೂ, ಮುಂದಿನ ಭಾಗದಲ್ಲಿಯೂ ಕಾಣಿಸಿರುತ್ತೇವೆ. ಅವುಗಳಿಂದೆಲ್ಲ ಬೀಜಸಂಸ್ಕಾರವು ಗ್ರಹಣಾದಿಗಳ ಹೊರತು ತಿಥ್ಯಾದಿಗಳಿಗೆ ಬೇಡವೆಂದು ಸಿದ್ಧಾಂತವಾಗಿರುವುದರಿಂದ ಅಂತಹ **ಶಾಸ್ತ್ರೀಯ ವ್ಯವಸ್ಥೆಯನ್ನು** '**ಅನುಕ್ತಮನ್ಯತೋ ಗ್ರಾಹ್ಯಂ**' ಎಂಬಂತೆ ಶಾಸ್ತ್ರನಿಷ್ಠರಾದ **ಶಿಷ್ಟಜನರು ಆದರಿಸಲೇ ಬೇಕಾಗಿದೆ.** ಕೇವಲ ಧರ್ಮಶಾಸ್ತ್ರಕ್ಕೂ ಸಹ ವಿರುದ್ಧವಾಗುವ ಇವರ **ನವೀನಬೀಜವಂತೂ ಸರ್ವಥಾ ವರ್ಜ್ಯ**ವಾಗಿರುವುದೆಂದು ಬೇರೆ ಹೇಳಬೇಕಾಗಿಲ್ಲ. ಇವರು '**ಅತ್ರ ಕೇಚಿತ್**' ಇತ್ಯಾದಿ ಭಾಸ್ಕರೀಯವೆನ್ನುವ **ಬೀಜೋಪನಯವು ಪ್ರಾಮಾಣಿಕ ಗ್ರಂಥವಲ್ಲ**ವೆಂಬುದನ್ನು ಹಿಂದೆ ಪುಟ ೫೨ ರಿಂದ ೫೫ ರ ವರೆಗೆ ಸಕಾರಣವಾಗಿ ಸಿದ್ಧಪಡಿಸಿರುತ್ತೇವೆ. ಆದ್ದರಿಂದ ( ಅದನ್ನು ಆಧರಿಸಿ) **ಇವರು ಹೇಳುವ ಯಾವ ಮಾತೂ ಪ್ರಮಾಣಬದ್ಧವೆಂತ ಆಗುವದಿಲ್ಲ.**

"**ತತೋ ಯಥಾ ದೃಕ್ಸಿದ್ಧಸೂರ್ಯಚಂದ್ರಾಭ್ಯಾಂ**" ಇತ್ಯಾದಿ ವಚನಗಳನ್ನು ಕಾಣಿಸಿ ದೃಕ್ಸಿದ್ಧ, ಬೀಜಸಂಸ್ಕೃತ ಇವುಗಳ ತತ್ವ ಹೇಳುವುದಕ್ಕೆಂದು ಸ್ವದೇಶಭೂಪೃಷ್ಠದೃಕ್ಸಿದ್ಧ, ಭೂಮಧ್ಯದೃಕ್ಸಿದ್ಧ ಹೀಗೆ ೨ ವಿಧವನ್ನು ಕಲ್ಪನೆಮಾಡಿದ್ದಾರೆ. ದೃಕ್ಸಿದ್ಧವಾದುದರಲ್ಲಿ ೨ ವಿಧವನ್ನು ಕಲ್ಪಿಸುವುದು ಹೇಗೂ ಹೊಂದುವುದಿಲ್ಲ. ಆ ಪೈಕಿ ಭೂಮಧ್ಯದೃಕ್ತುಲ್ಯವೆಂಬುದು ಕೇವಲ ಅಸಂಭವನೀಯವೆಂದು ಹಿಂದೆ ಕಾಣಿಸಿದಂತೆ ಪುಟ ೪೨ರಲ್ಲಿಯೂ, ಈ ಕಲ್ಪನೆಯು ಇವರ ಪಂಚಾಂಗಕ್ಕೂ ಸಹ ಸಾಧಕವಲ್ಲವೆಂಬುದನ್ನು ವೃಷ ಸಂ॥ದ ಮೊಗೇರಿ ಪಂಚಾಂಗದ ಪ್ರಸ್ತಾವನೆಯಲ್ಲಿಯೂ ಸಿದ್ಧಪಡಿಸಿರುವುದರಿಂದ ಈ ವಿಷಯದಲ್ಲಿ ಪುನಃ ಖಂಡಿಸತಕ್ಕದ್ದಿರುವುದಿಲ್ಲ.

ಪುಟ ೫೮ರಲ್ಲಿ ಗ್ರಹರು ಯಾಮ್ಯೋತ್ತರವೃತ್ತಕ್ಕೆ ಬಂದಾಗ ಭೂಮಧ್ಯ ಮತ್ತು ಭೂಪೃಷ್ಠಸ್ಥಿತಿಗಳಲ್ಲಿ ಅಂತರವಿರುವದಿಲ್ಲವೆಂಬ ಅರ್ಥವನ್ನು ಕಾಣಿಸಿದ್ದಾರೆ. ಇವರ ಈ ಕಲ್ಪನೆಯಾದರೂ ಸರಿಯಾದ್ದಲ್ಲವೆಂಬುದನ್ನು ಹಿಂದೆಪುಟ ೬೫ ರಲ್ಲಿಯೂ, ಪುಟ ೪೨ ರಲ್ಲಿ ಕೊಟ್ಟ ಟಿಪ್ಪಣಿಯಲ್ಲಿಯೂ ಸ್ಪಷ್ಟಪಡಿಸಿರುತ್ತೇವೆ. ಇದರಿಂದ **ಇವರಿಗೆ ಸರಿಯಾದ ಗೋಳಜ್ಞಾನವೇ ಇಲ್ಲವೆಂದು ವ್ಯಕ್ತವಾಗುತ್ತದೆ.** ಭೂಪೃಷ್ಠದಲ್ಲಿ ತೋರುವ ಸ್ಥಿತಿಯು ಆಗಾಗ ಬದಲಾಯಿಸುತ್ತಲೇ ಇರುವ ಕಾರಣ [illegible] ಬರೆದುಕೊಂಡಿದ್ದಾರೆ.

ಪ್ರಪಂಚದ ಪ್ರತಿಯೊಂದು ಪರಿಸ್ಥಿತಿಯೂ (ಸ್ಥೂಲಸೂಕ್ಷ್ಮಮಾನದಿಂದ) ನಿರಂತರವಾಗಿ ಬದಲಾಯಿಸುತ್ತಲೇ ಇರುವುದೆಂಬುದು ಸಕಲಶಾಸ್ತ್ರಗಳಿಗೂ ಸಮ್ಮತವಾದ, ಲೋಕಾನುಭವದ ವಿಷಯವಾದ್ದರಿಂದ ಭೂಪೃಷ್ಠಸ್ಥಿತಿಗೆ ಮಾತ್ರ ಅದೊಂದು ವಿಶೇಷ ಹೆಚ್ಚಿ ಇವರು ಹೇಳಿರುವುದೂ ನಿರರ್ಥಕವಾಗಿದೆ. ಇಷ್ಟೇ ಅಲ್ಲ; ಇವರು ಕಲ್ಪಿಸಿಕೊಂಡಿರುವ **ಭೂಮಧ್ಯಪರಿಸ್ಥಿತಿಯು ಕೂಡ** ನಿರಂತರವಾಗಿ ಬದಲಾಯಿಸುತ್ತಲೇ ಇರುವುದಾದ ಕಾರಣ ಅದು ಸಹ **ವಾಸ್ತವಿಕವಲ್ಲವೆಂದು ಇವರ ಮಾತಿನಿಂದಲೇ ಸಿದ್ಧವಾಗುತ್ತದೆ.** ಇನ್ನು ಭೂಮಧ್ಯಕ್ಕಿಂತ ಹೆಚ್ಚಿಗೆ (ಲಂಬನಾದಿ) ಸಂಸ್ಕಾರಗಳು ಬೇಕಾಗುವುದರಿಂದ ಭೂಪೃಷ್ಠಸ್ಥಿತಿಯು ವಾಸ್ತವಿಕವಲ್ಲವೆಂದು ಇವರ ಹೇತುವಿರುವುದಾದರೆ ಸಿದ್ಧಾಂತಶಾಸ್ತ್ರಕ್ಕೆ ಹೊರತಾದ ತಿಥಿ-ಚ್ಯುತ್ಯಾದಿ ಹೆಚ್ಚಿಗೆ ಸಂಸ್ಕಾರಗಳನ್ನು ಅನವಶ್ಯಕವಾಗಿ ಮಾಡುವ ಇವರ **ನವೀನ ದೃಕ್ತಿಥಿಯಾದರೂ ವಾಸ್ತವಿಕವಲ್ಲವೆಂದು ಇವರ ಹೇತುವಿನಿಂದಲೇ ಸಿದ್ಧವಾಗುವುದು.** ಹೀಗೆ ತಾವು ಸಾಧಿಸಬೇಕಾದ್ದೇನು? ಆ ಬಗ್ಗೆ ತಾವು ಹೇಳಬೇಕಾದ್ದೇನು? ತಾವು ಹೇಳಿದ್ದೇನು? ಅದರ ಅರ್ಥವೇನು? ಅದರಿಂದ ಸಾಧಿಸಿದ್ದೇನು? ಎಂಬ ಯಾವ ವಿಚಾರವೂ ಇಲ್ಲದೆ ದೃಕ್ಸಿದ್ಧವೆಂದರೆ ಹಾಗೆ; ಬೀಜವೆಂದರೆ ಹೀಗೆ; ಭೂಮಧ್ಯ-ಭೂಪೃಷ್ಠಗಳೆಂದರೆ ಮತ್ತೊಂದರ ಹಾಗೆ; ಎಂತ ಹೀಗೆಲ್ಲಾ ಮನಬಂದಂತೆ ಹರಟುವುದರಿಂದ ತಮ್ಮ ಹೇಳಿಕೆಯೇ ಖಂಡಿಸಲ್ಪಡುವುದೆಂಬ ಗ್ರಹಿಕೆಯೂ ಇಲ್ಲದೆ ಕೇವಲ ಅವಿಚಾರದಿಂದ ಪರಗ್ರಂಥವನ್ನು ಖಂಡಿಸತೊಡಗಿರುವ ಇವರು ಖಂಡನೆಯೆಂದು ಕಲ್ಪಿಸಿಕೊಂಡದ್ದೆಲ್ಲ ಇವರ ಹೇಳಿಕೆಯನ್ನೇ ಖಂಡಿಸುತ್ತದೆಂದು ಸುಜ್ಞರಿಗೆಲ್ಲ ತಿಳಿಯುವಂತಿರುವುದರಿಂದ ಅದನ್ನು 'ನಾವು ಪ್ರತ್ಯೇಕವಾಗಿ ಖಂಡಿಸಬೇಕಾಗಿಲ್ಲ. ಭೂಮಧ್ಯವೆಂತಾಗಲಿ, ಭೂಪೃಷ್ಠವೆಂತಾಗಲಿ ಇವರು ಏನೇ ಕಲ್ಪಿಸಿಕೊಂಡರೂ ಇವರ ನವೀನದೃಕ್ಪಂಚಾಂಗದ ಮತ್ತು ದೃಕ್ಪಕ್ಷದ ತಿಥಿಯು ಅದೊಂದಕ್ಕೂ ದೃಕ್ತುಲ್ಯವಾಗದೆ, ಇತ್ತ ಶಾಸ್ತ್ರಪ್ರಮಾಣಕ್ಕೂ ವಿರೋಧವಾಗಿರುವುದರಿಂದ ಪ್ರತ್ಯಕ್ಷ, ಆಗಮಗಳ ಪೈಕಿ ಯಾವುದೊಂದು ಪ್ರಮಾಣವೂ ಇಲ್ಲದೆ **ಉಭಯಭ್ರಷ್ಟಸ್ಥಿತಿಯಲ್ಲಿರುವ 'ಇವರ ಪಂಚಾಂಗಕ್ಕೆ ಆಧಾರವಾಗಿ ಪ್ರಾಮಾಣಿಕವಾದ ಯಾವುದೇ ಒಂದು ಗ್ರಂಥವಾಗಲಿ, ಶಾಸ್ತ್ರದ ಒಂದೇ ಒಂದು ಪಂಕ್ತಿಯಾಗಲಿ ಸಿಗದಂತಾದ್ದರಿಂದ'** ತಮ್ಮ ಪಂಚಾಂಗಸಮರ್ಥನೆಗೆಂದು **ಸ್ವಕಪೋಲಕಲ್ಪಿತವಾದ** ವಿಕಲ್ಪ, ಕುಕಲ್ಪಗಳನ್ನೆಲ್ಲ ಹುಟ್ಟಿಸಿಕೊಂಡು ಪೂರ್ವಾಪರ ವಿರುದ್ಧವಾಗಿ ಇವರು ಮಾಡುವ ಹರಟೆಗಳಿಗೆಲ್ಲ ಆಧಾರವೆಂದು ಪದೇ ಪದೇ ದೀಕ್ಷಿತೀಯಕಾರಿಕೆ ಮತ್ತು ಆ ವಿಪರ್ಯಸ್ತ ಬೀಜೋಪನಯ ಇವೆರಡರ ಹೆಸರನ್ನು ಎತ್ತಿಕೊಳ್ಳುತ್ತಿರುವರು. ಆದರೆ ಇವರ ಈ ದೀಕ್ಷಿತೀಯಕಾರಿಕೆಯಲ್ಲಿಯೇ **"ಲಂಬನಾಕ್ಷಾದಿ ದೃಕ್ಕರ್ಮ" "ಚರಬೀಜಾಂಕೈ**ಃ ... **ದೃಕ್ಕರ್ಮಭಿಸ್ತ್ವ**ೈ" ಎಂಬ ವಚನ

ಗಳಿಂದ ಲಂಬನಾಕ್ಷಾದಿ ಸಂಸ್ಕಾರಗಳೂ, ಇವರ ಕಲ್ಪನೆಯಂತೆ ತಿಥಿ, ಜ್ಯುತ್ಯಾದಿಗಳೆಂಬ ಚರಬೀಜಸಂಸ್ಕಾರಗಳೂ ಅವಿಶೇಷವಾಗಿ 'ದೃಕ್ಕರ್ಮಗಳೇ' ಎಂದು ಸಿದ್ಧವಾಗುತ್ತಿದ್ದು ಶ್ರಾದ್ಧಾದಿಕರ್ಮಾರ್ಹತಿಥಿಯಾದರೂ **'ಬಾಣವೃದ್ಧಾ ರಸಕ್ಷೀಣಾ ಗ್ರಾಹ್ಯಾ ನಾಽನ್ಯಾ ತಿಥಿಃ ಕ್ವಚಿತ್।'** ಎಂಬಂತೆ ಬಾಣವೃದ್ಧಿ-ರಸಕ್ಷಯಲಕ್ಷಣವುಳ್ಳದ್ದೇ ಆಗಿರಬೇಕೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಇವರ ವಿಚಿತ್ರಕಲ್ಪನೆಗಳೆಲ್ಲ ವಿಧ್ವಂಸವಾಗುತ್ತಿರುವುದರಿಂದಲೂ, ಸ್ವತಃ ವಿಸಂಗತವಾದ ಇವರ ಬೀಜೋಪನಯವು ಇವರ ವಿಸಂಗತ ಹೇಳಿಕೆಗೆ ಅನುರೂಪವಾಗಿರಬೇಕಾದ್ದು ಸರಿಯೇ ಆದರೂ ಇತರರು ಪ್ರಮಾಣಿಸತಕ್ಕದ್ದಲ್ಲವಾದುದರಿಂದಲೂ ಇವರ ನವೀನದೃಕ್ಪಕ್ಷದ **ನವೀನದೃಕ್ಪಂಚಾಂಗವು** ಶಾಸ್ತ್ರಪ್ರಮಾಣಕ್ಕೂ, ಪ್ರತ್ಯಕ್ಷಪ್ರಮಾಣಕ್ಕೂ ಬಹುದೂರವಾದ **ನವೀನರೀತಿಯ ವಿಚಿತ್ರಕಲ್ಪನೆ** ಎಂಬುದು ವಾಚಕಮಹಾಶಯರಿಗೆ ಮಾತ್ರವೇ ಅಲ್ಲ; ಸಿದ್ಧಾಂತ ವಿರೋಧಿಗಳಾದ ನವೀನದೃಕ್ಪಕ್ಷೀಯರಲ್ಲಿಯೂ ಸಹ ಸ್ವಲ್ಪವಾದರೂ ವಿವೇಕವಿದ್ದವರಿಗೆ ಸ್ಪಷ್ಟವಾಗಿ ತಿಳಿಯುವಂತಿದೆ. ಆದಕಾರಣ ಈ ವಿಷಯದಲ್ಲಿ ಖಂಡಿಸಬೇಕಾದ ಅಂಶವೇ ಉಳಿದಿಲ್ಲ.

ಪುಟ ೫೯ ರಲ್ಲಿ **'ಗ್ರಹಣೇ ಗ್ರಹಯೋಗೇ ಚ'** ಇತ್ಯಾದಿ ಶಾಕಲ್ಯಸಂಹಿತಾವಚನವು ವಿಸಂಗತಾರ್ಥವುಳ್ಳದ್ದೆಂದು ಆಕ್ಷೇಪಿಸಿದ್ದಾರೆ. ಮತ್ತು ಇದರಲ್ಲಿರುವ **'ಅನ್ಯಥಾ'** ಎಂಬ ಶಬ್ದದ ಅರ್ಥವನ್ನು ಬಹು ಸಂಕೋಚಪಡಿಸಿದ್ದಾರೆ. ಆದರೆ ಶಾಕಲ್ಯರು ಶ್ಲೋಕಾರ್ಥವು ಬಹು ವ್ಯಾಪಕವಾಗಿರುವಂತೆ ಪೂರ್ವಪಕ್ಷವಾದ ದೃಕ್ಪಕ್ಷವನ್ನು ಸರ್ವತ್ರ ದೃಕ್ತುಲ್ಯವೆಂಬ ವಿಶಾಲಾರ್ಥದಲ್ಲಿ ಇಟ್ಟುಕೊಂಡು **'ಅನ್ಯಥಾ'** ಎಂಬಲ್ಲಿಂದ ಸಹೇತುಕವಾಗಿ ಅದನ್ನು ಖಂಡಿಸಿದ್ದಾರೆ. ಅದರ ತಾತ್ಪರ್ಯವೇನಂದರೆ:— "ದೃಕ್ತುಲ್ಯತೆಗೆ ಉಪಯೋಗಿಯಾದ ಬೀಜಸಂಸ್ಕಾರವು ಕರ್ಮಾರ್ಹವಾದ ತಿಥ್ಯಾದಿ ಕಾಲನಿರ್ಣಯಕ್ಕೆ ಅಗತ್ಯವೆನ್ನುವುದಾದರೆ, ಛಾಯಾದಿ ಪ್ರತ್ಯಕ್ಷವಿಷಯಗಳಿಗೆ ಅಗತ್ಯವಾಗಿರುವ ಅಯನಾಂಶಸಂಸ್ಕಾರವು ಶ್ರಾದ್ಧಾದಿಕರ್ಮಾರ್ಹವಾದ ಸಂಕ್ರಾಂತಿಕಾಲನಿರ್ಣಯಕ್ಕೂ ಯೋಗ್ಯವೆನ್ನಬೇಕಾದೀತು; ಆದರೆ (ಹಾಗೆ ಇವರು ವಿಷುವಾಯನಾದಿ ಸಂಕ್ರಾಂತಿಗಳೆಂದೂ, ಕರ್ಮಾರ್ಹವಾದ ಅಯನಾರಂಭಕಾಲವೆಂದೂ ಕಲ್ಪಿಸಿಕೊಂಡಿರುವ) ಅಂತಹ ಸಾಯನ ರಾಶಿಪ್ರವೇಶಕಾಲದಲ್ಲಿ ಶಾಸ್ತ್ರಶುದ್ಧವಾದ (ನಿರಯನ) ಸಂಕ್ರಾಂತಿಗಳಲ್ಲಿ ವಿಹಿತವಾಗಿರುವ ಶ್ರಾದ್ಧಾದಿಕರ್ಮಗಳನ್ನು ಆಚರಿಸುವುದು ಯೋಗ್ಯವಲ್ಲ; ಅದರಂತೆ ಶಾಸ್ತ್ರಸಿದ್ಧ ತಿಥ್ಯಾದಿಗಳಲ್ಲಿ ವಿಹಿತವಾಗಿರುವ **ಶ್ರಾದ್ಧಾದಿಕರ್ಮಗಳನ್ನು ಸಹ ಬೀಜಸಂಸ್ಕೃತತಿಥ್ಯಾದಿಗಳಲ್ಲಿ ಆಚರಿಸುವುದು ಯೋಗ್ಯವಲ್ಲವೆಂದು** ಇರುತ್ತದೆ. ಹೀಗೆ ಶಾಸ್ತ್ರಸಮ್ಮತವಾದ ಕರ್ಮಾರ್ಹಪಂಚಾಂಗದ ಸ್ವರೂಪವನ್ನು ಸಂಕ್ಷಿಪ್ತವಾಗಿ,—ಆದರೂ ನಿಃಸಂದಿಗ್ಧವಾಗಿ ತೋರಿಬಂದ ಈ ನಿರ್ಣಯದಲ್ಲಿ **ವಿಸಂಗತಿಯು ಏನೂ**

ಇರುವುದಿಲ್ಲ. ಮತ್ತು ಶಾ. ವಿ. ಪಂ. ದ ಸಾರವನ್ನೇ ಹೇಳಿದಂತಿರುವ ಶಾಕಲ್ಯಮಹರ್ಷಿಗಳ ಈ ವಚನವು ಇವರು ಕರ್ಮಾರ್ಹವೆಂದು ಕಲ್ಪಿಸಿಕೊಂಡಿರುವ ಸಾಯನಾಯನ ಹಾಗೂ ಬೀಜಸಂಸ್ಕೃತ (ದೃಕ್) ತಿಥ್ಯಾದಿಗಳೆಂಬ ಉಭಯಕಲ್ಪನೆಗಳನ್ನು ಒಂದೇ ಪೆಟ್ಟಿನಿಂದ ಸಮೂಲವಾಗಿ ತುಂಡರಿಸಿರುವುದರಿಂದ ಕೇವಲ ನಿರ್ಮೂಲವಾದ ಇವರ ವಿಸಂಗತಕಲ್ಪನೆಗೆ ಈ ಆರ್ಷವಚನವು ವಿಸಂಗತವಾಗಿ ತೋರಿದ್ದು ಆಶ್ಚರ್ಯವಲ್ಲ.

'ಯದಿ........ತಿಥ್ಯಾದಿರಪಿ ದೃಗ್ವಿಷಯಃ ಸ್ಯಾತ್' ಎಂಬ ವಚನದಿಂದ ಇವರ ಪಕ್ಷಕ್ಕೆ ಉಂಟಾದ ಬಾಧೆಗೆ ಪರಿಹಾರವೆಂದು ಇವರು ಕಲ್ಪಿಸಿಕೊಂಡಿರುವ 'ಪಂಚಾಂಗವಿವರಣೆ'ಯನ್ನು ದೃಕ್ಪಂಚಾಂಗದ ತಿಥ್ಯಾದಿಗಳು ಸಹ ಎಂದಿಗೂ ದೃಗ್ಗೋಚರವಾಗತಕ್ಕವುಗಳಲ್ಲ"ವೆಂದು ಈ ಹಿಂದೆ ನಾವು 'ದೃಕ್ಪಂಚಾಂಗಸಮರ್ಥನೆಯ ಖಂಡನೆ'ಯಲ್ಲಿಯೇ ವಿಸ್ತಾರವಾಗಿ ಚರ್ಚಿಸಿ ಖಂಡಿಸಿರುವುದರಿಂದ 'ಮೂಲೇ ಕುಠಾರಃ' ಎಂಬಂತೆ ಆ 'ಪರಿಹಾರ'ವು ಸಮೂಲವಾಗಿ ಸಂಹರಿಸಲ್ಪಟ್ಟಿರುತ್ತದೆ.

'ಸೌರೋಪನಿಷದೇವಾಢ್ಯಾ' ಎಂಬ ಹಿಂದೆ ಪುಟಗಳಲ್ಲಿ ಕಾಣಿಸಿರುವ ವ್ಯಾಸೋಕ್ತಿಗೆ ವ್ಯಾಸರ ಕಾಲದಲ್ಲಿ ಮಾತ್ರ ಸೂರ್ಯಸಿದ್ಧಾಂತವು ಗ್ರಾಹ್ಯವಾಗಿರುತ್ತದೆಂಬ ಅರ್ಥವೆಂದು ಕಲ್ಪಿಸಿದ್ದಾರೆ. ಪರಂತು ಅಷ್ಟುದ್ದದ ಗ್ರಾಹ್ಯತೆಯನ್ನು ಕೂಡ ಕಲ್ಪಿಸದೆ ವ್ಯಾಸರ ಕಾಲದಲ್ಲಿಯೂ ಸಹ ಅವರು ಯಾವ ದಿನದಲ್ಲಿ ಆ ಶ್ಲೋಕವನ್ನು ರಚಿಸಿದರೋ ಆ ದಿನದ ಮಟ್ಟಿಗೆ ಮಾತ್ರ ಅದು ಗ್ರಾಹ್ಯವೆಂದು ಇನ್ನಷ್ಟು ಅರ್ಥಸಂಕೋಚನವನ್ನು ಕಲ್ಪಿಸದಿದ್ದುದಕ್ಕೆ ಇವರ ಕಲ್ಪನಾಶಕ್ತಿಯು ಸಂಕುಚಿತವಾಗಿರುವುದೇ ಕಾರಣವಾಗಿರಬಹುದು. ಇರಲಿ! ಆದರೆ ಇವರ ಈ ವಿಚಿತ್ರತರವಾದ ವಿಕಲ್ಪಾರ್ಥವು ಶಾಸ್ತ್ರಜ್ಞರಾದ ವಿವೇಕಿಗಳಿಗೆ ಎಂದಿಗೂ ಸಮ್ಮತವಾಗುವಂತಿಲ್ಲ. ಯಾಕಂದರೆ:— ಸೂರ್ಯಸಿದ್ಧಾಂತದಲ್ಲಿ— "ಶೃಣುಷ್ವೈಕಮನಾಃ ಪೂರ್ವಂ ಯದುಕ್ತಂ ಜ್ಞಾನಮುತ್ತಮಂ । ಯುಗೇ ಯುಗೇ ಮಹರ್ಷೀಣಾಂ ಸ್ವಯಮೇವ ವಿವಸ್ವತಾ ॥" ಅಂದರೆ— ಈ ಸೂರ್ಯಸಿದ್ಧಾಂತವು ಪ್ರತಿಯೊಂದು ಮಹಾಯುಗದಲ್ಲಿಯೂ ಸೂರ್ಯನು ಸಾಕ್ಷಾತ್ತಾಗಿ ತಾನೇ ಮಹರ್ಷಿಗಳಿಗೆ ಉಪದೇಶಿಸಿದ ಉತ್ತಮವಾದ ಶಾಸ್ತ್ರವಾಗಿರುತ್ತದೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಈ ಶಾಸ್ತ್ರವಚನಕ್ಕೂ, ಶಬ್ದಮರ್ಯಾದೆಗೂ ಸರಿಯಾಗಿ ಮೇಲಿನ ವ್ಯಾಸೋಕ್ತಿಯ ಅರ್ಥಮಾಡುವಲ್ಲಿ— "ಅಸ್ಮಿನ್ ಕಾಲೇ (ಮಹಾಯುಗೇ) ಯಾಮಾದಿತ್ಯೋ ಮಯಾಯ ಪ್ರಾಹ ಸಾ ಸೌರೋಪನಿಷದೇವಾಽಢ್ಯಾ ಸನಾತನೀ ಚ" ಅಂದರೆ— ಈ (ವೈವಸ್ವತಮನ್ವಂತರದ ೨೮ನೇ ಮಹಾಯುಗದ) ಕಾಲದಲ್ಲಿ ಮಯನಿಗೆ ಸೂರ್ಯನು ಹೇಳಿರುವ ಸೌರೋಪನಿಷತ್ತೆಂಬ ಸೂರ್ಯಸಿದ್ಧಾಂತವೇ ಸನಾತನ (ಶಾಶ್ವತ) ವಾದ ಶಾಸ್ತ್ರವೆಂದು ಸಮಂಜಸವಾದ ಅರ್ಥವಾ

ಗುತ್ತದೆ. ಮತ್ತು ಈ ವ್ಯಾಸೋಕ್ತಿಯಲ್ಲಿ ಸನಾತನೀ, ಸೌಕೋಪನಿಷತ್ ಇತ್ಯಾದಿ ಶಬ್ದವಿದ್ದು ಸನಾತನವಾದ ಶಾಸ್ತ್ರದ ಪ್ರಾಮಾಣ್ಯವು ಸಹ ಸನಾತನವೇ ಆಗಿರತಕ್ಕದ್ದಾದ್ದರಿಂದ ಇವರ ಕಲ್ಪಿತಾರ್ಥವು ಕೇವಲ ವಿಸಂಗತವೂ, ತುಚ್ಛವೂ ಆಗಿರುತ್ತದೆಂದು ತಾನಾಗಿ ಸಿದ್ಧವಾಗುತ್ತದೆ. ಆದಕಾರಣ ಈ ಬಗ್ಗೆ ಬೇರೆ ಖಂಡನೆಯೇ ಬೇಕಾಗಿಲ್ಲ. ಇದಲ್ಲದೆ ಈ ವಚನದಲ್ಲಿ 'ಕಾಲೇ' ಎಂಬಲ್ಲಿ 'ಕಲ್ಪೇ' ಎಂಬ ಪಾಠಾಂತರವೂ ಸಹ ಉಂಟೆಂದು ಇವರು ತಿಳಿದಿರಬೇಕಾಗಿದೆ.

**"ಶ್ರುತಿರ್ಯತ್ರ ಪ್ರಮಾಣಂ ಸ್ಯಾದ್ಯುಕ್ತಿಃ ಕಾ ತತ್ರ ನಾರದ।"**

ಎಂಬ ಬ್ರಹ್ಮಸಿದ್ಧಾಂತವಚನವು ವೇದದಂತೆ ಆರ್ಷಶಾಸ್ತ್ರವೆಲ್ಲವನ್ನೂ ಪ್ರಮಾಣವೆಂದು ಲಕ್ಷಿಸಿರುತ್ತದೆಂದು ಇವರಿಗೆ ತಿಳಿಯದಂತಾದ್ದರಿಂದ ತಮ್ಮ ಕಲ್ಪನೆಯಂತೆ 'ತತ್ತತ್ಕಾಲದಲ್ಲಿ ದೃಕ್ತುಲ್ಯವಾದ ಗ್ರಂಥವೇ ಶ್ರುತಿ' ಅರ್ಥಾತ್ ಈಗಿನ ಕಾಲದಲ್ಲಿ ಇವರ ನವೀನದೃಗ್ಗಣಿತಗ್ರಂಥವೇ 'ಶ್ರುತಿ' ಎಂದು ಕಲ್ಪಿಸಿಕೊಂಡಿದ್ದಾರೆ. ಪಾಪ! ಇವರ ನವೀನದೃಕ್ಪಂಚಾಂಗವು ಶ್ರುತಿ, ಸ್ಮೃತಿ, ಪುರಾಣ, ಸಿದ್ಧಾಂತಗಳಿಗೆಲ್ಲ ವಿರುದ್ಧವಾಗಿರುವ ಕಾರಣ ಅವೆಲ್ಲ ಈಗಿನ ಕಾಲದಲ್ಲಿ ಪ್ರಮಾಣವಲ್ಲವೆಂಬ ಅಪಶ್ರುತಿಯೊಂದನ್ನೇ ಅಲ್ಲಿಂದಿಲ್ಲಿಗೂ ಹಾಡುತ್ತ ಬಂದಿರುವ ಇವರಿಗೆ ಈಗಿನ ಕಾಲದಲ್ಲಿ ಪ್ರಮಾಣವೆಂದು ಹೇಳಿಕೊಳ್ಳತಕ್ಕ ಗ್ರಂಥವೊಂದೂ ಇಲ್ಲದಂತಾಗಿ ಅಂತ್ಯದಲ್ಲಿ **'ಮನೆಯ ಆಳಿಗೆ ಬಾಸಿಂಗ'**ವೆಂಬಂತೆ ತಾವು ನಿತ್ಯದಲ್ಲಿ ಪಂಚಾಂಗಗಣಿತಕ್ಕೆ ಬಳಸುವ ಕರಣಗ್ರಂಥವೋ, ನಾವಿಕಪಂಚಾಂಗವೋ ಅದೇ 'ಶ್ರುತಿ' ಎಂದು ಕಲ್ಪಿಸಿ ಇಲ್ಲಿಯೂ ಒಂದು ಅಪಶ್ರುತಿಯನ್ನೇ ಹಾಡಿದ್ದಾರೆ. ಆದರೆ ಇವರ ಅಂಥ ಕಲ್ಪಿತಶ್ರುತಿಗಳಿಂದ **ಶಾ. ವಿ. ಪಂ. ದ ಖಂಡನೆಯು ಹೇಗೂ ಆಗುವುದಿಲ್ಲ.** ಮತ್ತು ಪೂರ್ವೋಕ್ತವ್ಯಾಸೋಕ್ತಿಯಿಂದ **ಅವುಗಳಿಗೆ ಶ್ರುತಿತ್ವವೂ ಸಿದ್ಧವಾಗುವುದಿಲ್ಲವೆಂದು** ಬೇರೆ ಹೇಳಬೇಕಾಗಿಲ್ಲ.

ಪುಟ ೬೦ ರಲ್ಲಿ **'ಮಾಂದಂ ಕರ್ಮೈಕಮರ್ಕೇಂದ್ವೋಃ'** ಎಂಬ ವಚನವು ರವಿಚಂದ್ರರಿಗೆ ಶೀಘ್ರಫಲಸಂಸ್ಕಾರವನ್ನು ಮಾತ್ರ ನಿಷೇಧಿಸುತ್ತದೆಂದು ಕಲ್ಪಿಸಿದ್ದಾರೆ. ಇಲ್ಲಿ ಹೀಗೆ ಕಲ್ಪಿಸಿರುವ ಇವರೇ ಮುಂದೆ ಪುಟ ೬೫, ಪಂ. ೪ ರಲ್ಲಿ 'ನಾವು ನೋಡಿದ ಗ್ರಂಥಗಳಲ್ಲೆಲ್ಲೂ ಚಂದ್ರನಿಗೆ ಆ ಶೀಘ್ರಸಂಸ್ಕಾರ ಹೇಳಿದ್ದು ಕಾಣುವುದಿಲ್ಲ' ಎಂತಲೂ ಬರೆದಿದ್ದಾರೆ. ಅಂದಮೇಲೆ **'ಅಪ್ರಸಕ್ತೇ ನಿಷೇಧಾನುಪಪತ್ತಿಃ'** ಎಂಬಂತೆ ಪ್ರಸಕ್ತಿಯೇ ಇಲ್ಲದ ವಿಷಯಗಳನ್ನು ನಿಷೇಧಿಸುವ ಕಾರಣವೇ ಇಲ್ಲದಿರುವಾಗ ಪೂರ್ವಾಪರವಿರೋಧವಾಗಿ ಹೀಗೆಲ್ಲಾ ಇವರು ವಿಕಲ್ಪಿಸುವುದೆಂದರೆ ಇದರಿಂದೆಲ್ಲ ಯಾವ ಖಂಡನೆಯಾಗುವುದೋ? ಈ ಕಲ್ಪನೆಗಳಿಗೆಲ್ಲ ಏನರ್ಥವೋ? ಇವರನ್ನೇ ಕೇಳಬೇಕು. ಬಹುಶಃ **ನವೀನಶ್ರುತಿಕಲ್ಪನೆಯಲ್ಲಿ** ನಿರತರಾಗಿರುವ ಇವರಿಗೆ ತಾವು

ಕಲ್ಪಿಸಿದ್ದೇನೆಂಬುದೆಲ್ಲ ವಿಸ್ಮೃತಿಯಾಗಿ ಬೇರೊಂದು ಬಗೆಯ **ಸ್ಮೃತಿಯು** ಕಲ್ಪನೆ ಬಂದಿರಬಹುದು. ಹೇಗಿದ್ದರೂ **'ನಾಂದಂ ಕರ್ಮೈಕಮರ್ಕೇಂದ್ವೋಃ ಕಾರ್ಯಂ ತಿಥ್ಯಾದಿಸಾಧನೇ।'** ಎಂಬ ಈ ಸಿದ್ಧಾಂತರತ್ನದ ವಚನದಲ್ಲಿ ತಿಥ್ಯಾದಿ ವಿಷಯಗಳನ್ನು ಪ್ರತ್ಯೇಕಿಸಿ ಹೇಳಿದ್ದು, ಇದರಿಂದ ತದಿತರ ಗ್ರಹಣಾದಿ ವಿಷಯಗಳಿಗೆ ಮಾತ್ರ ರವಿ-ಚಂದ್ರರಿಗೆ ಪ್ರಸಕ್ತವಾಗಿರುವ ಬೀಜಸಂಸ್ಕಾರವು ಯುಕ್ತವಾಗಿರುವುದಲ್ಲದೆ ತಿಥ್ಯಾದಿಗಳಿಗೆ ಯೋಗ್ಯವಲ್ಲವೆಂಬ ಅರ್ಥವು ಸ್ಪಷ್ಟವಾಗಿರುವುದರಿಂದ ಇವರ ಕಲ್ಪಿತಖಂಡನೆಯು ತೀರ ಅಸಂಬದ್ಧವೆಂದು ಸಿದ್ಧವಾಗುತ್ತದೆ.

ಮುಂದೆ ಬೃಹತ್ಸಂಹಿತೆಯಲ್ಲಿ ಕಾಣಿಸಿರುವ ವಿಡೂರಥನೇ ಸ್ಮೃತಿಸಾರಸಮುಚ್ಚಯದಲ್ಲಿ ಹೇಳಿರುವ ವಿಡೂರಥನೆಂದು ಆತನ ಗುರುತು ಹಿಡಿದಿದ್ದಾರೆ. ಆದರೆ ಯೋಗವಾಸಿಷ್ಠದಲ್ಲಿ ಹೇಳಿರುವ ಇನ್ನೊಬ್ಬ ವಿಡೂರಥನ ಗುರುತು ಇವರಿಗಿಲ್ಲವೆಂದು ತೋರುತ್ತದೆ. ಇದೂ ಅಲ್ಲದೆ ವಿಡೂರಥನೆಂಬ ಹೆಸರಿನ ಬೇರೆ ವ್ಯಕ್ತಿಗಳಾರೂ ಇಲ್ಲವೆಂಬುದಕ್ಕೆ ಪ್ರಮಾಣವೇನೂ ಇರುವುದಿಲ್ಲ. ಹೀಗಿರುವಲ್ಲಿ ಬೃಹತ್ಸಂಹಿತೆಯ ವಿಡೂರಥನೇ ಆ ಶ್ಲೋಕವನ್ನು ಹೇಳಿದವನೆಂದು ಇವರು ಕಲ್ಪಿಸಿದ್ದು ತೀರ ನಿರಾಧಾರವಾಗಿರುತ್ತದೆ. ಹೇಗಿದ್ದರೂ ಆ ವಿಡೂರಥವಚನದಂತೆ **ಸೂರ್ಯಸಿದ್ಧಾಂತಪಂಚಾಂಗವೇ ಕರ್ಮಾಚರಣೆಗೆ ಪ್ರಮಾಣವಾಗಿರತಕ್ಕದ್ದೆಂದು ನಿರ್ಣಯಿಸಿರುವ ಸ್ಮೃತಿಸಾರಸಮುಚ್ಚಯವು ಸಿದ್ಧಾಂತಪಂಚಾಂಗಕ್ಕೆ ಪ್ರಮಾಣವಾಗುವುದರಲ್ಲಿ ಬಾಧಕವೇನೂ ಇರುವುದಿಲ್ಲ. ಮತ್ತು ಆ ನಿರ್ಣಯವು ಇವರ ದೃಕ್ಪಂಚಾಂಗವನ್ನು ಸ್ಪಷ್ಟವಾಗಿ ಖಂಡಿಸುವುದರಿಂದ ಈ ದೃಗ್ವಾದಿಗಳಿಗೆ ಅದು ತೀರ ಬಾಧಕವಾಗಿರುತ್ತದೆ.**

**"ದೃಕ್ಸಿದ್ಧಖೇಟಗ್ರಹಸಾಧಿತಾಸು"** ಎಂಬ ವಚನದಿಂದ ಸಿದ್ಧವಾಗುವ ಇವರ, ಮತ್ತು ಇವರ ದೃಕ್ಪಂಚಾಂಗಾನುಸಾರಿಗಳ ದುರ್ಗತಿಯನ್ನು, ತಾವು ಪ್ರಮಾಣವೆಂದು ಹೇಳಿಕೊಳ್ಳುವ ಬೀಜೋಪನಯಾದಿಗಳಿಂದ ಪರಿಹರಿಸಿಕೊಳ್ಳಲಿಕ್ಕೆ ಯತ್ನಿಸಿದ್ದರೂ ಅದು ಇವರಿಗೇನೇ ಸರಿಕಾಣದೆಯೋ ಏನೋ ಮುಂದೆ 'ದೃಕ್ಸಿದ್ಧ'ವೆಂಬ ಶಬ್ದದ ಅರ್ಥವನ್ನೇ ವಿಪರ್ಯಾಸಮಾಡಲಿಕ್ಕೆ ಯತ್ನಿಸಿದ್ದಾರೆ. ಆದರೆ ಸಾಕ್ಷಾತ್ಪರಶಿವನು ಹೇಳಿರುವ ಶಾಸ್ತ್ರಾರ್ಥನಿಶ್ಚಯವು (ದುರ್ಗತಿಯು) ಇವರ ಬೀಜೋಪನಯದಂತಹ ಕಲ್ಪಿತಗ್ರಂಥವಚನಗಳಿಂದ ಎಂದಿಗೂ ಪರಿಹಾರವಾಗತಕ್ಕದ್ದಲ್ಲವಾದುದರಿಂದಲೂ, ದೃಕ್ಸಿದ್ಧವೆಂಬ ಶಬ್ದಕ್ಕೆ ಇವರ ಕಲ್ಪಿತಾರ್ಥವನ್ನೇ ಗ್ರಹಿಸಿದರೂ ಪ್ರತ್ಯಕ್ಷ(ಭೂಪೃಷ್ಠ)ದೃಕ್ಸಿದ್ಧವಾದುದು ಸಹ ಶಾಸ್ತ್ರಸಿದ್ಧವಲ್ಲವಾದುದರಿಂದ ತ್ಯಾಜ್ಯವೆಂತಾದಮೇಲೆ ದೃಕ್ಸಿದ್ಧವೂ ಆಗದೆ ಶಾಸ್ತ್ರವಿರುದ್ಧವೂ ಆಗಿರುವ ಇವರ ನವೀನದೃಕ್ಪಂಚಾಂಗವಂತೂ ಅತ್ಯಂತ ನಿಷಿದ್ಧವೆಂದು (ಕೈಮುತಿಕನ್ಯಾಯದಿಂದ) ಸ್ವಯಂಸಿದ್ಧವಾಗುವುದರಿಂದಲೂ ಈ ವಚನದಲ್ಲಿ ಹೇಳಿರುವ **ದುರ್ಗತಿಯು ಪರಿಹಾರವು ಹೇಗೂ**

ಆಗುವುದಿಲ್ಲ.

ಪುಟ ೬೧ರಲ್ಲಿ 'ಅವಿದ್ಧಾನ್ಯನಿಷಿದ್ಧಾನಿ' ಮುಂತಾದ ಏಕಾದಶೀ ವೇಧನಿರ್ಣಾಯಕವಚನಗಳಿಂದ ತಮ್ಮ ನವೀನದೃಕ್ಪಂಚಾಂಗಕ್ಕೆ ಬಂದಿರುವ ವಿರೋಧವನ್ನು ಸಿದ್ಧಾಂತಪಕ್ಷಕ್ಕೂ ಕಲ್ಪಿಸಿ ಮೂಲವಚನಗಳ ಅರ್ಥ,ವಿಷಯಾದಿಗಳ ವ್ಯವಸ್ಥೆಯನ್ನೇನೂ ಹೇಳದೆ ಅವಕ್ಕೆಲ್ಲ ಉಪವಾಸವು ನಿಷಿದ್ಧವಿದ್ದಲ್ಲಿ ಸ್ವಲ್ಪಭಕ್ಷ್ಯವನ್ನು ಉಪಯೋಗಿಸಿದರಾಯಿತೆಂಬ ಒಂದೇ ಸಮಾಧಾನವನ್ನು ಕಲ್ಪನೆಮಾಡಿದ್ದಾರೆ. ಆದರೆ ಇವರ ನವೀನದೃಕ್ಪಂಚಾಂಗದಂತೆ ದಶಮೀಘಟಿ ೧೬, ಏಕಾದಶೀ ೮, ಉಪರಿ ದ್ವಾದಶೀ (ಕ್ಷಯ) ೫೧ ಬಂದಾಗ 'ಸಾರ್ಧಸಪ್ತಮುಹೂರ್ತಸ್ತು ವೇಧೋಽಯಂ ಬಾಧತೇ ವ್ರತಂ' ಎಂಬಂತೆ ಸಮಸ್ತ ಧರ್ಮಶಾಸ್ತ್ರಗಳಲ್ಲಿಯೂ ಅತ್ಯಂತ ಜಘನ್ಯವಾಗಿ ಹೇಳಿರುವ ಕೇವಲ ವ್ರತಾಚರಣೆಗೂ ಸಹ ನಿಷಿದ್ಧವಾದ ೧೫ ಘಟಿಗಳಿಗೂ ಮಿಕ್ಕಿದ ದಶಮೀವೇಧವು ಸಂಭವಿಸುತ್ತಿದ್ದು ಮಾರನೆ ದಿನವೂ ಸಹ ಏಕಾದಶ್ಯಾದಿ ೩ ತಿಥಿಗಳು ಕೂಡಿದ್ದು **" ಏಕಾದಶೀ ದ್ವಾದಶೀ ಚ ರಾತ್ರಿಶೇಷೇ ತ್ರಯೋದಶೀ । ಉಪವಾಸಂ ನ ಕುರ್ವೀತ.... ॥"** ಇತ್ಯಾದಿ ಅನೇಕವಚನಗಳಿಂದ ನಿಷಿದ್ಧವಾಗಿರುವುದರಿಂದ ಸ್ಮಾರ್ತಗೃಹಸ್ಥರ ಉಪವಾಸದಿನದ ನಿರ್ಣಯವು ದುಸ್ತರವಾಗುವುದೆಂದು ಇವರೂ ತಿಳಿದಿರಬಹುದಾಗಿದೆ. ಇಂತಹ ಸಂದರ್ಭದಲ್ಲಿ ವಿದ್ಧೈಕಾದಶಿಯಲ್ಲಾದರೂ ಉಪವಾಸಮಾಡಬಹುದೆಂದೇ ಋಷ್ಯಶೃಂಗವಚನದ ತಾತ್ಪರ್ಯವೆಂದು ಕಲ್ಪಿಸಿರುವ ಇವರು ಇದೇ ಕಳೆದ ವೃಷ ಸಂ|ದ ತಮ್ಮ ದೃಕ್ಪಂಚಾಂಗದಲ್ಲಿ ಜ್ಯೇಷ್ಠಶುಕ್ಲೈಕಾದಶಿಯು ಇದೇ ರೀತಿಯಾಗಿ ಪೂರ್ವದಿನ ದಶಮೀವಿದ್ಧವಾಗಿದ್ದು ಪರದಿನ ದ್ವಾದಶೀಕ್ಷಯವಾಗಿ ಬಂದಿದ್ದರೂ ಸ್ಮಾರ್ತಗೃಹಸ್ಥರಿಗೆ ಪೂರ್ವದಿನ ದಶಮೀವಿದ್ಧೈಕಾದಶಿಯಲ್ಲಿ ಉಪವಾಸವೆಂದು ಬರೆಯದೆ ಸರ್ವರಿಗೂ ಮಾರನೆದಿನ ತಿಥಿತ್ರಯದಲ್ಲಿಯೇ ಉಪವಾಸವೆಂದು ನಿರ್ಣಯಿಸಿದ್ದು ಆ ಬಗ್ಗೆ ಕೊಟ್ಟ ವಿಶೇಷಸೂಚನೆಯಲ್ಲಿ ಏಕಾದಶ್ಯಾದಿತಿಥಿತ್ರಯಕೂಡಿದ ದಿನವು ಸ್ಮಾರ್ತಗೃಹಸ್ಥರಿಗೂ ಆಚರಣೀಯವೆಂದು ಮೂಲವಚನದಿಂದ ಸಿದ್ಧಪಡಿಸದಿರುವ ಕಾರಣ ಇವರ ಈ ನಿರ್ಣಯವೆಂಬುದು ಸಮೂಲವೋ ಕಲ್ಪನಾಮಾತ್ರವೋ ತಿಳಿಯದು.‡ ಆ ಮೊದಲು ಅಂಗಿರಸಸಂ|ದ ಇವರ ಪಂಚಾಂಗದಲ್ಲಿ ಜ್ಯೇಷ್ಠಶುಕ್ಲೈಕಾದಶಿಯು ಇದೇ ರೀತಿ ಬಂದಾಗ ಇವರ ಈ ನಿರ್ಣಯಕ್ಕೆ ವಿರೋಧವಾಗಿ ಪೂರ್ವದಿನ ದಶಮೀವಿದ್ಧೈಕಾದಶಿಯಲ್ಲಿಯೇ ಸ್ಮಾರ್ತೈಕಾದಶಿಯೆಂದು ಬರೆದಿರುತ್ತಾರೆ. ಹೀಗೆ ಇವರು ಸಮಯಬಂದಹಾಗೆ ಹೊರಳುತ್ತಿರುವುದಕ್ಕೆ ಕಾರಣವೇನೆಂದು ಸುಜ್ಞವಾಚಕರಿಗೆ ತಿಳಿಯದಿರಲಿಕ್ಕಿಲ್ಲ. ಇಂತಹ ಇವರ ವಿಸಂಗತಕಲ್ಪನೆ, ಸಮಾಧಾನಗಳಿಂದೆಲ್ಲ **ಶಾ. ವಿ. ಪಂ. ನಿರ್ಣಯದ ಖಂಡ**

---

‡ ಈ ತಾರಣಸಂ|ದ ಕಾರ್ತಿಕಶುಕ್ಲೈಕಾದಶಿಯ ನಿರ್ಣಯವನ್ನು ಸಹ ಇದೇ ರೀತಿ ಇವರು ಬರೆದಿರುವುದನ್ನು ವಾಚಕರು ನೋಡಿಕೊಳ್ಳಬಹುದು.

ನೆಯು ಹೇಗೂ ಆಗುವುದಿಲ್ಲ.

ಪುಟ ೭೨ ರಲ್ಲಿ ಕಾಶ್ಯಾದಿದೇಶಗಳಲ್ಲೆಲ್ಲ ಸೂರ್ಯಸಿದ್ಧಾಂತಾನುಸಾರಿಪಂಚಾಂಗವನ್ನನುಸರಿಸುತ್ತಾರೆಂದುದು ತಪ್ಪೆಂತ ಹೇಳಿ ಅದಕ್ಕೆ ಹೇತುವಾಗಿ ಮಕರಂದಸಾರಿಣೀ, ಗ್ರಹಲಾಘವೀ, ಆರ್ಯಭಟಾದಿ ಗ್ರಂಥಾನುಸಾರಿ ಪಂಚಾಂಗಗಳೂ ಅಲ್ಲಿ ಇರುವವೆಂತಲೂ, ಇತ್ತೀಚೆಗೆ ಬಾಪೂದೇವ, ಪಟವರ್ಧನೀ ಮುಂತಾದ ತಮ್ಮ ದೃಕ್ಪಕ್ಷದ ಪಂಚಾಂಗಗಳೂ ಪ್ರಚಾರದಲ್ಲಿ ಬಂದದ್ದು ಕಂಡುಬರುತ್ತದೆಂತಲೂ ಬರೆದಿದ್ದಾರೆ. ಇದರಿಂದ ಇವರು ವಾಕ್ಯಾರ್ಥದ ತಾತ್ಪರ್ಯವನ್ನು ಗ್ರಹಿಸಿಕೊಂಡಿಲ್ಲವೆಂದು ವ್ಯಕ್ತವಾಗುವುದು. " **ಕಾಶ್ಯಾದಿ ಸರ್ವದೇಶೇಷು ಸೂರ್ಯಸಿದ್ಧಾಂತರೀತ್ಯಾಽನುಷ್ಠಾನಾತ್** " ಎನ್ನುವುದರಿಂದ ಆ ದೇಶಗಳಲ್ಲಿ ಬೇರೆ ಪಂಚಾಂಗವೊಂದೂ ಇಲ್ಲವೆಂದು ಹೇಳಿದಂತಾಗಲಿಲ್ಲ. ಉದಾಹರಣೆಗಾಗಿ 'ಕಾಶ್ಯಾದಿದೇಶಗಳಲ್ಲೆಲ್ಲ ವರ್ಣಾಶ್ರಮಧರ್ಮವನ್ನಾಚರಿಸುತ್ತಾರೆ'. ಎಂದರೆ ಆ ದೇಶಗಳಲ್ಲಿ ವರ್ಣಾಶ್ರಮಧರ್ಮಕ್ಕೆ ಹೊರತುಪಟ್ಟವರು ಯಾರೂ ಇಲ್ಲವೆಂದು ಅರ್ಥವಾಗುವಂತಿಲ್ಲ. ಇಂತಹ ವಚನಗಳಿಗೆ ಲಕ್ಷಣೆಯಿಂದ ತಾತ್ಪರ್ಯತಿಳಿಯಬೇಕೆಂದು ಶಾಸ್ತ್ರದಲ್ಲಿಯೇ ಹೇಳಿದೆ. ಮೇಲಾಗಿ ಇವರು ಬರೆದಿರುವ ಮಕರಂದಸಾರಿಣ್ಯಾದಿಗ್ರಂಥಗಳಿಂದ ತಯಾರಿಸಲ್ಪಡುವ ಪಂಚಾಂಗಗಳು ಬೀಜಸಂಸ್ಕೃತಗಳೆನ್ನುವುದಾದರೂ ಅದು ಬಾಣವೃದ್ಧಿ-ರಸಕ್ಷಯಲಕ್ಷಣವುಳ್ಳವುಗಳಾಗಿಯೂ, ಸೂರ್ಯಸಿದ್ಧಾಂತಾನುಸಾರಿಗಳಾಗಿಯೂ ಇರುವುದರಿಂದ ಸಿದ್ಧಾಂತಪಂಚಾಂಗಗಳೆಂದೇ ಪ್ರಸಿದ್ಧವಾಗಿವೆ. ಇನ್ನು ಇವರು ಹೇಳುವ ಪಟವರ್ಧನ್ಯಾದಿಪಂಚಾಂಗಗಳಾದರೂ ಅವೆಲ್ಲವೂ ಒಂದೇ ರೀತಿಯನ್ನನುಸರಿಸತಕ್ಕವುಗಳಲ್ಲ. ಅವುಗಳಲ್ಲಿ ಕೆಲವು ಚೈತ್ರಪಕ್ಷವನ್ನೂ, ಕೆಲವು ರೈವತಪಕ್ಷವನ್ನೂ, ಇನ್ನೂ ಕೆಲವು ಬೇರೆ ಬೇರೆ ಮತವನ್ನೂ ಕಲ್ಪಿಸಿಕೊಂಡು ಪ್ರಕಟವಾಗುತ್ತಿವೆ. ಅವುಗಳಲ್ಲಿ ನಾವು ಹಿಂದೆ ೬ ನೇ ಪ್ರಶ್ನೆಯ ಉತ್ತರದಲ್ಲಿ ನಿರೂಪಿಸಿರುವಂತೆ ಸಂಕ್ರಾಂತಿ, ಅಧಿಕಮಾಸ, ನಿತ್ಯನಕ್ಷತ್ರ, ಯೋಗಾದಿಗಳಲ್ಲೆಲ್ಲ ಪರಸ್ಪರವಾಗಿ ಬಹುವಿಧವಾದ ವ್ಯತ್ಯಾಸಗಳಿರುತ್ತವೆಂಬುದು ಇವರೇ ಹೇಳಿರುವ (ರೈವತಪಕ್ಷದ) ಟಿಳಕ್ ಪಂಚಾಂಗವನ್ನೂ, ಮತ್ತು ಸ್ವತಃ ಇವರ ನವೀನದೃಕ್ಪಂಚಾಂಗವನ್ನೂ ತಾಳೆ ನೋಡುವಲ್ಲಿ ಎಲ್ಲರಿಗೂ ಸ್ವತಃ ತಿಳಿಯುವಂತಿದೆ. ಹೀಗಿರುವಲ್ಲಿ ಇವೆಲ್ಲಾ ತಮ್ಮ ಪಕ್ಷದ ಪಂಚಾಂಗಗಳೆಂದು ಅರ್ಥಬರುವಂತೆ ಅವುಗಳ ಹೆಸರನ್ನೆಲ್ಲ ಎತ್ತಿಕೊಂಡದ್ದು ತೀರ ವ್ಯರ್ಥವೇ ಆಗಿರುತ್ತದೆ ಅವುಗಳಲ್ಲಿ ಒಂದೆರಡು ಪಂಚಾಂಗಗಳು ಇವರ ಪಂಚಾಂಗಕ್ಕೆ ಅನುಸಾರವಾಗಿರಬಹುದಾದರೂ ಅದಷ್ಟರಿಂದಲೇ ಇವರ ನವೀನದೃಕ್ಪಂಚಾಂಗವು ಶಾಸ್ತ್ರಸಮ್ಮತವಾದ್ದೆಂದು ಸಿದ್ಧವಾಗುವುದಿಲ್ಲ. **ಹಲವು ಅಬದ್ಧಗಳು ಸೇರಿದ ಮಾತ್ರದಿಂದ ಅದು ಸುಬದ್ಧವೆಂತ ಸಿದ್ಧವಾಗುವುದಿಲ್ಲ.** ಇವುಗಳನ್ನೆಲ್ಲ ವಿಚಾರಿಸುವಲ್ಲಿ ಇವರ ಈ ವ್ಯರ್ಥಪ್ರಲಾಪಗಳಿಂದೆಲ್ಲ ಏನೊಂದೂ ಸಾಧಿಸದೆ ವಾಚಕರ

ಸಮಯವನ್ನೆಷ್ಟು ಹಾಳುಮಾಡಿ ಪುಸ್ತಕದ ಪುಟಗಳನ್ನೆಷ್ಟು ತುಂಬಿಕೊಂಡದ್ದೇ ಫಲವಾಗಿರುತ್ತದೆ.

'ತತ್ತದ್ಗತಿವಶಾನ್ನಿತ್ಯಂ' ಎಂಬಲ್ಲಿ ಲೋಕದ ಜನರ ದೃಕ್ಪ್ರತ್ಯಯಕ್ಕೆ ಸರಿಬರುವಂತೆ ಹೇಳುವುದಾಗಿ ಪ್ರತಿಜ್ಞೆಯಿರುವುದಿಲ್ಲ (ಹಾಗಾಗುವ ಸಂಭವವೂ ಇರುವದಿಲ್ಲ)ವೆಂಬುದನ್ನು ಪುಟ ೬೨ ರಲ್ಲಿ ಆಕ್ಷೇಪಿಸಿದ್ದಾರೆ. ಆದರೆ ಇವರು ಕಲ್ಪಿಸಿರುವ ಭೂಕೇಂದ್ರದ ದೃಕ್ತುಲ್ಯವೆಂಬುದು ಕೂಡ ಯಾರೊಬ್ಬರಿಗೂ ಎಂದೆಂದಿಗೂ ಗೋಚರಿಸತಕ್ಕದ್ದೇ ಅಲ್ಲವಾದುದರಿಂದ ಆ ಗರ್ಭ್ಯಾರ್ಥವು ಇವರ ಕಲ್ಪನೆಯಂತೆಯೂ ಯುಕ್ತವೇ ಆಗುವುದಲ್ಲದೆ ಅದರಂತೆ ಇವರ ದೃಕ್ತಿಥ್ಯಾದಿಗಳು ಸಹ ಕಾಚ, ಕಾಮಿಲಾದಿ ಶಾರೀರಕದೋಷಗಳೇನೂ ಇಲ್ಲದ ಸ್ವಚ್ಛದೃಷ್ಟಿಯವರಿಗಾದರೂ ಎಂದೆಂದಿಗೂ ಗೋಚರಿಸತಕ್ಕದ್ದೇ ಅಲ್ಲವಾಗಿರುವುದರಿಂದ ಇವರ ಕಲ್ಪಿತ ಆಕ್ಷೇಪವು ಇವರಿಗಾದರೂ ತಪ್ಪಿದ್ದಲ್ಲ. ಕಾರಣ ಇವರ ಈ ಆಕ್ಷೇಪವಾದರೂ ವ್ಯರ್ಥವೇ ಸರಿ.

ಪುಟ ೬೩ ರಲ್ಲಿ ಯಾವನಾದರೊಬ್ಬನು ಬರೆದ ಶಾಸ್ತ್ರದಲ್ಲಿದ್ದಂತೆ ಸರ್ವದಾ ಆ ಗ್ರಹಾದಿಗಳ ಪರಿಸ್ಥಿತಿಯು ಕಾಣಬೇಕೆಂಬುದು ಅಸಂಭವವೆಂದಿದ್ದಾರೆ. ಸರಿ; ನಾವಾದರೂ ಹಾಗಾಗಬೇಕೆಂದು ಹೇಳುವದಿಲ್ಲ. ಆದರೆ ಸೃಷ್ಟ್ಯಾದಿ ಪ್ರಳಯಾಂತದವರೆಗಿನ ಗ್ರಹಸ್ಥಿತಿಯನ್ನು ಯೋಗದೃಷ್ಟಿಯಿಂದಲ್ಲದೆ ಮನುಷ್ಯಮಾತ್ರರಿಂಗೆ ಪ್ರತ್ಯಕ್ಷದಿಂದ ನಿರ್ಣಯಿಸುವುದು ಶಕ್ಯವಿಲ್ಲ. ಶ್ರುತಿಸ್ಮೃತ್ಯಾದಿಶಾಸ್ತ್ರಗಳು ಮತ್ತು ಅವುಗಳಲ್ಲಿ ಹೇಳಲ್ಪಟ್ಟಿರುವ ಧರ್ಮವಿಧಿಗಳು ಸನಾತನವಾಗಿದ್ದು ಅವುಗಳನ್ನು ಸಮಯಕ್ಕೆ ಸರಿಯಾಗಿ ಆಗಾಗ ಬದಲಾಯಿಸಿಕೊಳ್ಳಲಿಕ್ಕೆ ಮನುಷ್ಯಮಾತ್ರರಿಂಗೆ ಎಂದಿಗೂ ಶಕ್ಯವಿಲ್ಲದ ಕಾರಣ ಅಂತಹ ಧರ್ಮ-ಕರ್ಮಗಳನ್ನಾಚರಿಸಲಿಕ್ಕೆ ಆವಶ್ಯಕವಾದ ತಿಥ್ಯಾದಿ ಕಾಲಗಳನ್ನಾದರೂ ಪ್ರಳಯಾಂತದ ವರೆಗೆ ಸರಿಯಾಗುವಂತಹ ಸ್ಥಿರವಾದ ಕ್ರಮದಿಂದಲೇ ನಿರ್ಣಯಿಸಬೇಕಾಗುತ್ತದೆ. ಆದುದರಿಂದ ತ್ರೈಕಾಲಿಕವಿಷಯಗಳನ್ನೆಲ್ಲ ಪ್ರತ್ಯಕ್ಷೀಕರಿಸಿಕೊಂಡಿರುವ ದಿವ್ಯಜ್ಞಾನಮಹಿಮಾತಿಶಯಸಂಪನ್ನರಾದ ದೇವತಾಪುರುಷರು, ಮಹರ್ಷಿಗಳು, ತಪಸ್ವಿಗಳೇ ಮೊದಲಾದವರು ಕಲ್ಪಾವಧಿ ಉಂಟಾಗತಕ್ಕ ಗ್ರಹಗತಿಭೇದಗಳನ್ನೆಲ್ಲ ಪ್ರತ್ಯಕ್ಷೀಕರಿಸಿಕೊಂಡವರಾಗಿದ್ದು ಅವುಗಳಲ್ಲಿ ಆಗಾಗ ಬದಲಾಯಿಸತಕ್ಕ ವಿಕಾರಾಂಶಗಳನ್ನು ಬಿಟ್ಟು ಸಾರ್ವಕಾಲಿಕವಾಗಿ(ಸ್ಥಿರವಾಗಿ)ರುವ ಗ್ರಹಗತಿಸ್ವರೂಪವನ್ನು ನಿರ್ಣಯಿಸಿ ವೈದಿಕಧರ್ಮ-ಕರ್ಮಾನುಷ್ಠಾನಗಳಿಗೆಲ್ಲ ಅನುಗುಣವಾಗಿರುವ ರೀತಿಯಲ್ಲಿ **"ವೇದೈಃ ಸಹ ಸಮುದ್ಭೂತಂ ವೇದಚಕ್ಷುಃ ಸನಾತನಂ।"** ಎಂದು ವಿಶೇಷಿಸಲ್ಪಟ್ಟಿರುವ ಸ್ಥಿರವಾದ ಕಾಲಜ್ಞಾನ (ಸಿದ್ಧಾಂತ)ಶಾಸ್ತ್ರವನ್ನು "ವೇದದೊಡನೆ ವೇದೋಕ್ತ ಕರ್ಮಾನುಷ್ಠಾನಕ್ಕೆಂದು ವೇದಾಂಗವಾಗಿಯೇ ಉಪದೇಶಿಸಿರುವರು. ಆದುದರಿಂದ ಶಾಸ್ತ್ರೋಕ್ತ ಕರ್ಮಕಾಲನಿರ್ಣಯಕ್ಕೆ ಸಿದ್ಧಾಂತಶಾಸ್ತ್ರವೇ ಪರಮ

ಪ್ರಮಾಣವಾಗಿರುವದು. ಅದನ್ನು ಬಿಟ್ಟು ಸಮಯಬಂದಹಾಗೆ ಭಿನ್ನ—ಭಿನ್ನ ರೀತಿಯ ಮಾನದ ತಿಥ್ಯಾದಿಗಳಿಂದ ಕರ್ಮಕಾಲಗಳನ್ನು ನಿರ್ಣಯಿಸುವಲ್ಲಿ ಮುಂದಿನ ಪ್ರಕರಣದಲ್ಲಿ ವಿವರಿಸಿದಂತೆ ಹಲವೆಡೆಗಳಲ್ಲಿ ಕರ್ಮಕಾಲವೇ ಬಾಧಿತವಾಗುವುದಲ್ಲದೆ ಇಡೀ ಕಲ್ಪದ ವೃಷ್ಟಿಯಿಂದ ಸ್ಥಿರಪಟ್ಟಿರುವ ಕರ್ಮಕಾಲ ಗಣನೆಯ ಏಕರೂಪತೆಯೂ ನಷ್ಟವಾಗಿ ಕರ್ಮಕಾಲದ ವ್ಯತ್ಯಯವೂ ಸಂಭವಿಸುವುದು. ಇನ್ನು ಕಲ್ಪಮಧ್ಯದ ಅವಾಂತರಕಾಲದಲ್ಲಿ ಭೂಪೃಷ್ಠದಲ್ಲಿ ಯಂತ್ರವೇಧಾದಿಗಳ ಮೂಲಕ ನಿಷ್ಪನ್ನವಾಗುವ ಅಂದರೆ- ಆಯಾ ಕಾಲದಲ್ಲಿ ಉಪಚಯಾಪಚಯವಶದಿಂದ ತೋರಿಬರುವ ಗತಿವಿಕಾರಗಳು ಭೂಪೃಷ್ಠಸ್ಥ ಜನರ ಕಣ್ಣಿಗೆ ತೋರುವ ಸ್ಥಿತಿಯನ್ನೇ ಅನುಲಕ್ಷಿಸಿರುವ ಗ್ರಹಣಾದಿ ನಿಯತ ವಿಷಯಗಳಲ್ಲಿ ಮಾತ್ರ ಪ್ರಯೋಜನಕರವಾಗಿರುವವು. ಇದರಿಂದಾಗಿ ಆಯಾ ಕಾಲದ ಅಭಿಯುಕ್ತರು ಗ್ರಂಥಾಂತರಗಳನ್ನು ರಚಿಸಿದ್ದು ಅವು ಆರ್ಷಶಾಸ್ತ್ರಗಳಿಂದ ನಿಷ್ಪನ್ನವಾಗುವ ವೃದ್ಧಿ—ಕ್ಷಯಗಳಿಗೆ ಅನುರೂಪವಾಗಿರುವಲ್ಲಿ ಗೌಣತ್ವೇನ ಕರ್ಮಾರ್ಹತಿಥ್ಯಾದಿಗಳಲ್ಲಿಯೂ ಗ್ರಾಹ್ಯವೆನಿಸಿದರೂ ವೃದ್ಧಿ-ಕ್ಷಯಾದಿಗಳಲ್ಲಿ ಬಹುವ್ಯತ್ಯಾಸಗಳು ಬರುವ ಇವರ ಈ ನವೀನರೀತಿಯ ದೃಕ್ಪಂಚಾಂಗವು ಶಾಸ್ತ್ರತಃ ಎಂದಿಗೂ ಗ್ರಾಹ್ಯವಾಗಿರುವುದಿಲ್ಲ. ಮತ್ತು ಅನಾದಿಯಾಗಿ ಪುರಾತನ ಕಾಲದಿಂದ ಈಗಿನ ಕಾಲದ ಇವರ ಈಗಿನ ನವೀನದೃಕ್ಪಂಚಾಂಗವು ನಿರ್ಮಾಣವಾಗುವವರೆಗೆ ಈ ಮುಂಚೆ ಆಗಿಹೋದ ಆಯಾ ಕಾಲದ ವಿದ್ವನ್ಮಣಿಗಳು ಇವರೇ ಹೇಳುವಂತೆ ಆಯಾ ಕಾಲದ ಪರಿಸ್ಥಿತಿಗನುಸರಿಸಿಯೇ ಗಣಿತಗ್ರಂಥಗಳನ್ನು ರಚಿಸಿದರೆಂತಾದರೂ ಆಯಾ ಗ್ರಂಥವನ್ನನುಸರಿಸಿ ಈ ವರೆಗಿನ ಶಿಷ್ಟಜನರೆಲ್ಲರೂ ನಿರಂತರವಾಗಿ ಆಚರಿಸಿ ಬಂದಿರುವ ಕರ್ಮಾರ್ಹತಿಥ್ಯಾದಿಗಳ ವೃದ್ಧಿ—ಕ್ಷಯಗಳೆಲ್ಲ ಅವ್ಯಾಹತವಾಗಿ ಏಕಪ್ರಕಾರವಾಗಿ ಬಾಣವೃದ್ಧಿ-ರಸಕ್ಷಯರೂಪವಾಗಿಯೇ ಇರುವುದರಿಂದ ಆಯಾ ಅವಾಂತರಕಾಲದ ವೈಕಾರಿಕಗತಿಯನ್ನನುಸರಿಸಿ ಕರ್ಮಾರ್ಹತಿಥ್ಯಾದಿಗಳು ನಿರ್ಣಯಿಸಲ್ಪಡತಕ್ಕವುಗಳಲ್ಲವೆಂತಲೂ, ಸೃಷ್ಟ್ಯಾದಿಯಾಗಿ ಪ್ರಳಯಾಂತದ ವರೆಗೆ ಸ್ಥಿರವಾಗಿರುವ ಶಾಸ್ತ್ರಸಿದ್ಧಗತಿಯಿಂದಲೇ ಕರ್ಮಾರ್ಹತಿಥ್ಯಾದಿಗಳನ್ನು ನಿರ್ಣಯಿಸಬೇಕೆಂತಲೂ ಸಮಸ್ತ ದೇಶಗಳ, ಸಮಸ್ತಜನರ ಈವರೆಗಿನ ಶಿಷ್ಟಾಚಾರಪ್ರಸಿದ್ಧಿಯಿಂದಲೂ ಸಿದ್ಧವಾಗಿರುತ್ತದೆ. ಆದುದರಿಂದ ಈ ಶಿಷ್ಟಾಚಾರಪ್ರಸಿದ್ಧ, ಸಮೂಲ, ಶಾಸ್ತ್ರೀಯ ರೀತಿಗನುಸಾರವಾಗಿ– '**ಯಥಾದೃಕ್ತುಲ್ಯತಾಂ ಗ್ರಹಾಃ |**' '**ಸ್ಫುಟಕ್ರಿಯಾ ದೃಗ್ಗಣಿತೈಕ್ಯಕೃದ್ಯಾ|**' '**ದೃಕ್ತುಲ್ಯಕರಂ ಸ್ಫುಟತ್ವಂ|**' ಇತ್ಯಾದಿ ವಚನಗಳಲ್ಲಿ '**ದೃಕ್ತುಲ್ಯ**' ವೆಂದಿರುವುದಕ್ಕೆ ಕರ್ಮಾರ್ಹತಿಥ್ಯಾದಿಸಾಧಕಸ್ಫುಟ, ಅಥವಾ ಶಾಸ್ತ್ರಪ್ರಸಿದ್ಧದೃಕ್ತುಲ್ಯ ಮಂದಾದಿಸ್ಫುಟವೆಂದೇ (ಸೂರ್ಯಚಂದ್ರರ ವಿಷಯದಲ್ಲಿ ಮಂದಸ್ಫುಟವೆಂಬಷ್ಟೇ) ಅರ್ಥವೆಂದು ಸಿದ್ಧವಾಗುವುದು. ಮುಂದೆ ಅಕ್ಷಾಯನಲಂಬನಾದಿ ದೃಕ್ಕರ್ಮಗಳನ್ನೆಲ್ಲ ಪ್ರತ್ಯೇಕ ಪ್ರಕರಣಗಳಲ್ಲಿ ಹೇಳಿ

ರುವುದರಿಂದ ಇಲ್ಲಿ ದೃಕ್ತುಲ್ಯವೆಂದು ಪ್ರಯೋಗಿಸಿದ್ದು ಪಾರಿಭಾಷಿಕವೇ ಹೊರತು ಯಥಾಶ್ರುತವಾದ ಶಬ್ದಾರ್ಥಕ್ಕನುಸಾರವಾಗಿ ಅಲ್ಲವೆಂಬುದನ್ನು ಇವರಾದರೂ ಒಪ್ಪಲೇ ಬೇಕಾಗಿದೆ. ಹೀಗಿದ್ದು ಈ ಯಾವ ವಿಚಾರವನ್ನೂ ಗಮನಿಸದೆ, ಗೊತ್ತಿದ್ದರೂ ಎತ್ತಿಹೇಳದೆ ಶ್ರವಣಮಾತ್ರದಿಂದ ಆಭಾಸವಾಗುವಂತೆ ಕೆಲವು ವಚನಗಳನ್ನೆತ್ತಿಕೊಂಡು ಶಾಸ್ತ್ರ, ಶಿಷ್ಟಾಚಾರ, ಪೂರ್ವಾಪರ ವಿಷಯಸಂಬಂಧಗಳಿಗೆಲ್ಲ ವಿರೋಧವಾಗಿ ಇವರು ಮನಬಂದಂತೆ ಜಲ್ಪಿಸುವದು ಅತೀವ ಶೋಚನೀಯವಾಗಿದೆ.

ಪುಟ ೬೪ ರಲ್ಲಿ '**ಮಧ್ಯಗ್ರಹಸಂಭೂತಾಸ್ತಿಥಯಃ**' ಎಂಬ ವಚನವಲ್ಲಿ ಗ್ರಹಣ, ಗ್ರಹಯುದ್ಧಾದಿಗಳ ದೃಷ್ಟಾಂತಕೊಟ್ಟು ಮಧ್ಯಗ್ರಹರ ಅಯೋಗ್ಯತೆಯನ್ನು ಹೇಳಿರುವುದು ತಿಥ್ಯಾದಿಗಣಿತದಲ್ಲಿ ಗ್ರಹಣಾದಿಗಳ ಗಣಿತರೀತಿಯನ್ನನುಸರಿಸದೆ ಇರತಕ್ಕ ಇವರ ನವೀನದೃಕ್ಪಕ್ಷಕ್ಕೆ ಸಾಧಕವಾಗಲಿ, ಕೇವಲ ಮಧ್ಯಗ್ರಹರಿಂದಲೇ ತಿಥ್ಯಾದಿಸಾಧನೆಯನ್ನು ಹೇಳದೇ ಇರುವ ನಮ್ಮ ಸಿದ್ಧಾಂತಪಕ್ಷಕ್ಕೆ ಬಾಧಕವಾಗಲಿ ಏನೂ ಇಲ್ಲ.

'**ಶೈಘ್ರ್ಯಾತ್ ಸ್ಫುಟಾಸ್ತೇ**' ಎಂಬ ವಚನವು ಭೂಮಧ್ಯ, ಭಮಧ್ಯಭೇದವಾದಕ್ಕನುಸರಿಸಿ ಕುಜಾದಿ ಎಲ್ಲ ಗ್ರಹರಿಗೂ ಅನ್ವಯಿಸುವಂತೆ ಹೇಳಿರುವುದರಿಂದ ಅದರಲ್ಲಿ ಶಾಸ್ತ್ರೋಕ್ತ ಶೀಘ್ರಾಂತಸಂಸ್ಕಾರ ಅಂದರೆ ಸೂರ್ಯಚಂದ್ರರ ಮಟ್ಟಿಗೆ ಯಥಾವಿಹಿತವಾಗಿರುವ ಮಂದಾಂತಸಂಸ್ಕಾರ ಮಾತ್ರ ಆಗಿರುವ ಗ್ರಹರು ಎಂಬ ಅರ್ಥವಿರುವುದರಿಂದ ಅದು ಪುಟ ೬೫ ರಲ್ಲಿ '**ಇಂದೋಸ್ತಿಥ್ಯೃಕ್ಷಲಾಟಾದೇಃ**' ಎಂದು ಚಂದ್ರನಿಗೆ ತಿಥ್ಯಾದಿಗಳಲ್ಲಿ ಮಂದೇತರ ತಿಥಿ-ಚ್ಯುತ್ಯಾದಿ ಸಂಸ್ಕಾರಗಳನ್ನು ನಿಷೇಧಿಸುವ ವಚನವನ್ನು ವಿರೋಧಿಸುವುದಿಲ್ಲವೆಂದು ತಿಳಿಯತಕ್ಕದ್ದು.

'**ಸೂರ್ಯಜ್ಞಯೋರ್ಬೀಜಫಲಂ**' ಎಂಬ ವಚನವು ಸೂರ್ಯಬುಧರಿಗೆ ಬೀಜಫಲವನ್ನು ಹೇಳಿದ ಶಾಸ್ತ್ರಪ್ರಸಿದ್ಧಿಯು ಆಗ ಇದ್ದಿಲ್ಲವೆಂಬುದನ್ನೇ ಸೂಚಿಸುತ್ತದೆ. '**ಕರ್ತವ್ಯಾಃ ಪಂಚಸಂಸ್ಕಾರಾಃ**' ಎಂಬಲ್ಲಿ ಹೇಳಿದ ೫ ಸಂಸ್ಕಾರಗಳು ದೇಶಾಂತರ, ಭುಜಾಫಲಾದಿ ರೂಪಗಳಾಗಿದ್ದು ಇವರ ನವೀನ ದೃಕ್ಪಂಚಾಂಗದ ತಿಥಿ-ಚ್ಯುತ್ಯಾದಿ ಸಂಸ್ಕಾರಗಳ ಗಂಧವೇ ಅದರಲ್ಲಿರುವದಿಲ್ಲ. ಮೇಲಾಗಿ ರಾಹು, ಮತ್ತು ಚಂದ್ರೋಚ್ಚಗಳು ಚಂದ್ರಗಣಿತಕ್ಕೆ ಉಪಕರಣಗಳಾಗಿದ್ದು ಅಂತಹ ಉಪಕರಣಗಳಿಗೂ ಸಹ ತಿಥ್ಯಾದಿಗಳಲ್ಲಿ ಬೀಜಸಂಸ್ಕಾರ ಮಾಡಬಾರದೆಂತಲೂ, ಗ್ರಹಣಾದಿಗಳಲ್ಲಿ ದೃಕ್ಸಂವಾದದ "ಅವಶ್ಯಕತೆಯಿರುವುದರಿಂದ" ಮಾಡಬೇಕೆಂತಲೂ ಹೇತುವನ್ನು ಕೊಟ್ಟು ಹೇಳಿರುವುದರಿಂದ ಈ ವ್ಯವಸ್ಥೆಯು ಸ್ವತಃ ಚಂದ್ರನಿಗೂ ಸಹ ಅನ್ವಯಿಸುವುದೆಂದು ತಿಳಿಯಬೇಕು. ಇಲ್ಲವಾದರೆ ಆ ವಚನಕ್ಕೆ ವಿಸಂಗತಿಯನ್ನು ಕಲ್ಪಿಸಿದಂತಾಗುವದು. ಹೇಗಂದರೆ— ಗ್ರಹಣಾದಿ ದೃಷ್ಟವಿಷಯಗಳಲ್ಲಿ ಮತ್ತು ತಿಥ್ಯಾದಿ ಅದೃಷ್ಟವಿಷ

ಯಗಳಲ್ಲಿ ಕ್ರಮವಾಗಿ ಬೀಜಸಂಸ್ಕಾರದ ಅವಶ್ಯಕತೆ, ಅನವಶ್ಯಕತೆಗಳು ಹೇಳಲ್ಪಟ್ಟಿದ್ದು ಅವು ಉಚ್ಚ-ರಾಹುಗಳಂತೆ ಚಂದ್ರನಿಗೂ ಸಮಾನವಾಗಿರುವುದರಿಂದ ಚಂದ್ರನನ್ನು ಬಿಟ್ಟು ಉಚ್ಚ-ರಾಹುಗಳಿಗೆ ಮಾತ್ರ ಬೀಜವ್ಯವಸ್ಥೆಯನ್ನು ಕಲ್ಪಿಸಿದರೆ ಮೂಲವಚನಕ್ಕೆ ವ್ಯರ್ಥತೆಯು ಸಂಭವಿಸುವದು. ಇದಲ್ಲದೆ ಒಂದು ಕಾರ್ಯದ ಸಹಕಾರಿಗಳಿಗೆ ಹೇಳಿರುವ ಯೋಗ್ಯತೆಯು ಆ ಕಾರ್ಯದ ಕರ್ತೃವಿಗೂ ಸಹ ಇರಬೇಕೆಂದು ಪ್ರತ್ಯೇಕವಾಗಿ ಹೇಳದಿದ್ದರೂ ತಾನಾಗಿ ಸೂಚಿತವಾಗುತ್ತದೆ. ಆದಕಾರಣ ಚಂದ್ರೋಚ್ಚ, ರಾಹುಗಳಿಗೆ ಹೇಳಿದ ಬೀಜಸಂಸ್ಕಾರದ ವ್ಯವಸ್ಥೆಯು ಕೈಮುತಿಕನ್ಯಾಯದಂತೆ ಚಂದ್ರನಿಗೂ ಕೂಡ ಅನ್ವಯಿಸತಕ್ಕದ್ದೆಂದೇ ಸಿದ್ಧವಾಗುತ್ತದೆ. ಮತ್ತು ಈ ವಚನದ '**ಚಂದ್ರೋಚ್ಚಸ್ಯ**' ಎಂಬ ಪದದಲ್ಲಿ ಚಂದ್ರ, ಉಚ್ಚಗಳೆರಡೂ ಸಮಾಹಾರದ್ವಂದ್ವಸಮಾಸದಿಂದ ಹೇಳಲ್ಪಟ್ಟಿವೆ ಎಂತಲೂ ತಿಳಿಯಬಹುದಾಗಿದೆ. ಇದರಿಂದೆಲ್ಲ ಈ ವಚನವು ಇವರಿಗೇನೂ ಸಾಧಕವಾಗಿಲ್ಲದೆ ಇವರ ದೃಕ್ಪಂಚಾಂಗಕ್ಕೆ ತೀರ ವಿರೋಧವಾಗಿದೆ.

ಪುಟ ೬೬, ೬೭ರಲ್ಲಿ ದೀಕ್ಷಿತೀಯಕಾರಿಕೆಯು ತಮ್ಮ ಪಕ್ಷಕ್ಕೇನೇ ಸಾಧಕವೆಂದೂ, '**ತತ್ಕಾಲಬೀಜೋಪನಯಃ**' ಎಂಬ ಶ್ಲೋಕವು ವಿಪಕ್ಷಿಗಳು (ನಾವು) ಅಡಗಿಸಿಟ್ಟ ಶ್ಲೋಕವೆಂದೂ ಕಲ್ಪಿಸಿದ್ದಾರೆ. ವಿಷಯಸಾಧನೆಗೆ ಅವಶ್ಯವಿದ್ದುದನ್ನೇ ಉದಾಹರಿಸಬೇಕಾಗಿದ್ದು ಅನವಶ್ಯಕವಾದ ಭಾಗವನ್ನು ಕಾಣಿಸಬೇಕೆಂಬ ನಿಯಮವೇನೂ ಇಲ್ಲವಾದುದರಿಂದ ಅದನ್ನು ಕಾಣಿಸದಿದ್ದುದಲ್ಲದೆ ಆ ಶ್ಲೋಕವು ನಮಗೆ ವಿರೋಧವಿರುವುದೆಂದು ಅಡಗಿಸಿಟ್ಟದ್ದಲ್ಲವೆಂದು ಇವರು ತಿಳಿದಿರಬೇಕು. ಇಷ್ಟೇ ಅಲ್ಲ; ಆ ಶ್ಲೋಕವನ್ನೂ ಕೂಡಿಸಿಕೊಂಡು ಕ್ರಮದಿಂದ '**ರವೀಂದುಮಂದಸಂಸಿದ್ಧಾತ್....।**' '**ತತ್ಕಾಲಬೀಜೋಪನಯಃ....**' '**ಅತಃ ಪೈತೃಕಕರ್ಮಾದೌ ।**' ಈ ಮೂರೂ ಶ್ಲೋಕಗಳಿಗೆ ಸರಳವಾಗಿ ಅರ್ಥ ಮಾಡುವಲ್ಲಿ– " ತಾತ್ಕಾಲಿಕ ಬೀಜಸಹಿತವಾಗಿ ಮಂದಸಂಸ್ಕೃತಸೂರ್ಯಚಂದ್ರರಿಂದ ಸಿದ್ಧವಾಗುವ ತಿಥಿಭೋಗದಿಂದ ಬಾಣವೃದ್ಧಿ–ರಸಕ್ಷಯಗಳು ಉಂಟಾಗತಕ್ಕವುಗಳಾಗಿವೆ. ಆ ತತ್ಕಾಲಬೀಜವಾದರೋ ಭಾಸ್ಕರರೇ ಮುಂತಾದವರಿಂದ ಬೀಜೋಪನಯಭಾಷ್ಯಾದಿಗಳಲ್ಲಿ ಹೇಳಲ್ಪಟ್ಟಿದೆ. ಆದಕಾರಣ ಶ್ರಾದ್ಧಾದಿಕರ್ಮಗಳಲ್ಲಿ ತಾತ್ಕಾಲಿಕ ಚರಬೀಜಗಳಿಂದ ಸಿದ್ಧವಾಗುವ ಬಾಣವೃದ್ಧಿರಸಕ್ಷಯವಿರುವ ತಿಥಿಯೇ ಗ್ರಾಹ್ಯವಾಗಿರುವುದಲ್ಲದೆ ಬೇರೆ ರೀತಿಯ (ವೃದ್ಧಿಕ್ಷಯವಿರುವ) ತಿಥಿಯು ಗ್ರಾಹ್ಯವಲ್ಲ" ಎಂದು ಅರ್ಥವಾಗುವುದು. ಇದರಿಂದ ಭಾಸ್ಕರಾದಿಗಳಿಂದ ಉಕ್ತವಾಗಿರುವ ತಾತ್ಕಾಲಿಕ ಚರಬೀಜಗಳಿಂದ ಬಾಣವೃದ್ಧಿ–ರಸಕ್ಷಯದ ತಿಥಿಯೇ ಸಿದ್ಧವಾಗುತ್ತದೆಂದು ಸ್ಪಷ್ಟವಾಗುತ್ತದೆ. ಆದುದರಿಂದ " ಬಾಣವೃದ್ಧಿ–ರಸಕ್ಷಯಲಕ್ಷಣದ ತಿಥಿಯು ಬೀಜಸಂಸ್ಕೃತವಾಗಿದ್ದರೂ ಧರ್ಮಶಾಸ್ತ್ರೋಕ್ತ ಕರ್ಮಕಾಲನಿರ್ಣಯಕ್ಕೆ ಬಾಧೆಯಿಲ್ಲದಿರುವುದರಿಂದ ಗೌಣತ್ವದಿಂದಾದರೂ ಗ್ರಾಹ್ಯವಾಗಬಹುದು; ಈ ಲಕ್ಷಣವಿಲ್ಲದ (ನವೀನದೃಕ್)

ತಿಥಿಯು ಮಾತ್ರ ಸರ್ವಥಾ ತ್ಯಾಜ್ಯವು" ಎನ್ನುವ ನಮ್ಮ ಸಿದ್ಧಾಂತಪಕ್ಷಕ್ಕೆ ಈ ವಚನಗಳಿಂದೇನೂ ಬಾಧಕವಿರುವುದಿಲ್ಲ. ಪರಂತು ಇವರ ಅಷ್ಟವೃದ್ಧಿ-ದಶಕ್ಷಯ ಬರುವ **ನವೀನ ದೃಕ್ತಿಥಿಗಳನ್ನು ಮಾತ್ರ ಈ ವಚನಗಳು ಸಮೂಲವಾಗಿ ಖಂಡಿಸುತ್ತವೆ.**

ಇನ್ನು ಆ ಭಾಸ್ಕರೀಯ ಬೀಜಸಂಸ್ಕಾರವಾಡಿದರೆ ಬಾಣವೃದ್ಧಿರಸಕ್ಷಯ ಬರುವುದು ಎಂದಾದರೂ ಶಕ್ಯವೇ?ಎಂದು ಇವರು ಆಕ್ಷೇಪಿಸಿದ್ದಾರೆ. ಆದರೆ ಇತ್ತೀಚೆಗೆ ಉಂಟಾಗಿದ್ದು ಇವರು ಎತ್ತಿಕೊಂಡಿರುವ. ಭಾಸ್ಕರೀಯವೆಂದು ಹೇಳುವ ಆ ಬೀಜೋಪನಯದಿಂದ ಹಾಗೆ ಬರುವುದು ಶಕ್ಯವಿಲ್ಲವಾದರೂ ದೀಕ್ಷಿತರು (ಮೇಲಿನ ಶ್ಲೋಕಕರ್ತರು) ಲಕ್ಷಿಸಿರುವ ನಿಜವಾದ ಬೀಜೋಪನಯವು ಬೇರೆ ಇದ್ದು ಅದರಲ್ಲಿ ಮಧ್ಯ, ಮಂದಫಲಾದಿಗಳ ಸಮೀಕರಣರೂಪ ಬೀಜಸಂಸ್ಕಾರಗಳನ್ನೇನಾದರೂ ಹೇಳಿದ್ದಾಗ ಅಂತಹ ಬೀಜಸಂಸ್ಕಾರಗಳನ್ನು ಮಾಡಿದರೆ ಬಾಣವೃದ್ಧಿ-ರಸಕ್ಷಯ ಬರುವುದು ಶಕ್ಯವೇ ಇರುವುದರಿಂದ ಇವರ ಈ ಆಕ್ಷೇಪವು ನಿರರ್ಥಕವಾಗಿರುತ್ತದೆ. ಇಷ್ಟೇ ಅಲ್ಲ; ಇವರು ಎತ್ತಿಕೊಂಡಿರುವ ಈ ಬೀಜೋಪನಯವು ದೀಕ್ಷಿತರು ಲಕ್ಷಿಸಿರುವ ಬೀಜೋಪನಯಕ್ಕಿಂತ ಬೇರೆಯದಾದುದೆಂದು ಇವರ ಈ ಆಕ್ಷೇಪದಿಂದಲೇ ಸಿದ್ಧವಾಗುತ್ತದೆ. ಮತ್ತು ನಿಜವಾದ ಭಾಸ್ಕರೀಯಬೀಜೋಪನಯವು ಸಮಗ್ರವಾಗಿ ಉಪಲಬ್ಧವಾಗಿಲ್ಲವಾದರೂ ಬೇರೆ ಬೇರೆ ಪ್ರಾಚೀನಗ್ರಂಥಕರ್ತರು ಅದರ ತಾತ್ಪರ್ಯವನ್ನು ತೆಗೆದು ಹೇಳಿದ್ದರಮೇಲಿಂದ ಅದು ಕರ್ಮಾರ್ಹವಾದ ನಿತ್ಯತಿಥ್ಯಾದಿಗಣಿತದಲ್ಲಿ ಬಾಣವೃದ್ಧಿ-ರಸಕ್ಷಯಲಕ್ಷಣದ ವಿರುದ್ಧ ಹೋಗುವುದಿಲ್ಲವೆಂದು ಸ್ಪಷ್ಟವಾಗುವುದರಿಂದ ಇವರು ಈಗ ಎತ್ತಿತೋರಿಸುವ ಬೀಜೋಪನಯವು ನಿಜವಾದ ಭಾಸ್ಕರೀಯ ಕೃತಿಯಲ್ಲವೆಂದೂ, ಆದಕಾರಣ ಈ ನಿರಾಧಾರವಾದ ಗ್ರಂಥವನ್ನಾಧರಿಸಿ ಇವರು ಕಲ್ಪಿಸಿಕೊಂಡಿರುವ 'ಸಮರ್ಥನೆಯೂ, ಖಂಡನೆಯೂ, ಇತರ ಹೇಳಿಕೆಗಳೂ ಕೂಡ ಕೇವಲ ನಿರಾಧಾರವೇ ಆಗಿರುತ್ತವೆಂದೂ ಸಿದ್ಧವಾಗುತ್ತಿದ್ದು ಇದರಿಂದ ಇವರ ಕಲ್ಪನೆಗಳೆಲ್ಲವೂ ಖಂಡಿಸಲ್ಪಟ್ಟಿದ್ದಾಗುತ್ತದೆ.

೧. ಪುಟ ೬೭ರಲ್ಲಿ 'ದೃಗ್ಗಣಿತಪ್ರಭಾ' ಎಂಬುದು ಅಪೂರ್ವಗ್ರಂಥವೆಂದಿದ್ದಾರೆ. ಶ್ರೀ ಜಗದ್ಗುರುವಿದ್ಯಾರಣ್ಯಸ್ವಾಮಿಗಳವರಿಂದ ರಚಿಸಲ್ಪಟ್ಟ ಈ ಗ್ರಂಥವು ಅವರಿಗಿಂತ ಮುಂಚೆ ಅಪೂರ್ವವಾಗಿದ್ದರೂ ಅವರ ನಂತರದ ಕಾಲದಲ್ಲಿ ಈಗ ಅದು ಅಪೂರ್ವವೆನ್ನುವುದು ಸರಿಯಲ್ಲ. ಪೂರ್ವವೆಂಬುದಕ್ಕೆ ದಿಕ್ಪರವಾಗಿ ಅರ್ಥಮಾಡಿದರೂ ಪಶ್ಚಿಮಪ್ರದೇಶದಲ್ಲಿರುವ ಇವರಿಗೆ ಅದು ಅಪೂರ್ವವೆಂಬುದು ಕೂಡುವದಿಲ್ಲ. ಇನ್ನು ಇವರು ನೋಡಿಲ್ಲವಾದ ಗ್ರಂಥವಾದ್ದರಿಂದ ಇವರಿಗೆ ಅದು ಅಪೂರ್ವ (ಅದೃಷ್ಟ) ವಾಗಿದೆ, ಎಂದು ಲಕ್ಷಣೆಯಿಂದ ಅರ್ಥ ತಿಳಿದುಕೊಳ್ಳಬೇಕಾಗುತ್ತದೆ. ಆದರೆ ಹಾಗೆ ಇವರು ನೋಡದ

ಷ್ಟದವರಲ್ಲಿ ಆ ಗ್ರಂಥವಿದ್ದಾಗಲಿ, ಗ್ರಂಥಕರ್ತೃಗಳದ್ದಾಗಲಿ, ಇತರರದಾಗಲಿ ದೋಷವೇನೂ ಇರುವದಿಲ್ಲ. ಪರಂತು ಪರಂಪರೆಯಿಂದ ಬಂದ ಶಾಸ್ತ್ರಸಿದ್ಧ ಪೂರ್ವಾಚಾರವನ್ನು ಬಿಟ್ಟುಬಿಡುವಾಗ ಸಾಕಷ್ಟು ಶಾಸ್ತ್ರವಿಚಾರವನ್ನೂ, ಪೂರ್ವಿಕರ ಗ್ರಂಥಪರಿಶೀಲನೆಯನ್ನೂ ಮಾಡದಿದ್ದುದು ಇವರದೇ ದೋಷವೆಂದು ಸಿದ್ಧವಾಗುತ್ತದೆ.

೨. 'ಗ್ರಂಥದ ಮುಖನೋಡಿದರೆ ದೃಗ್ಗಣಿತಪ್ರಭಾ' ಎಂದಿದ್ದಾರೆ. ಹೀಗಿವರು ಬರೆಯುವಾಗ ಆ ಗ್ರಂಥದ ಮುಖವನ್ನು ನೋಡಿಲ್ಲವೆಂಬುದು ಮೇಲಿನ ಇವರ 'ಅಪೂರ್ವ' ವೆಂಬ ಮಾತಿನಿಂದಲೇ ಸಿದ್ಧವಾಗುತ್ತಿರುವುದರಿಂದ ಇದನ್ನು ಇವರು ತಮ್ಮ ಪ್ರತ್ಯಕ್ಷ ಪ್ರಮಾಣವನ್ನನುಸರಿಸಿ ಬರೆದುದಲ್ಲವೆಂತಲೂ, (ಪರ) ವಾಕ್ಯಪ್ರಮಾಣವನ್ನನುಸರಿಸಿ ಹೀಗೆ ಬರೆದುದೆಂತಲೂ ತಿಳಿಯುವುದು. ಹೀಗೆ ತಾವು ಪ್ರತ್ಯಕ್ಷನೋಡದ ಗ್ರಂಥದ ವಿಷಯವಾಗಿ ಟೀಕಿಸಲು ಹೊರಟದ್ದರಿಂದ ಇವರ ಪ್ರತ್ಯಕ್ಷಪರಾಯಣತೆಗೆ ಭಂಗ ಬಂದದ್ದಲ್ಲದೆ ಇವರ ಅಪ್ರಬುದ್ಧತೆಯೂ ವ್ಯಕ್ತವಾಗುವದು. ಅಂತೂ ಇದರಿಂದ ಪ್ರತ್ಯಕ್ಷವಷ್ಟೇ ಪ್ರಮಾಣವೆಂಬುದು ಕೇವಲ ವ್ಯವಹಾರದಲ್ಲಿಯೂ ಸಹ ಸರ್ವತ್ರ ಉಪಯೋಗವಾಗುವದಿಲ್ಲವೆಂದು ಇವರಾದರೂ ತಿಳಿದುಕೊಳ್ಳಬಹುದು.

೩. ಒಳಗಿನ ವಿಷಯನೋಡಿದರೆ 'ದೃಗ್ವಿಪಕ್ಷಿಪ್ರಭಾ' ಎಂದಿದ್ದಾರೆ. ಇದಾದರೂ ಮೇಲಿನಂತೆ ಇವರ ಪ್ರತ್ಯಕ್ಷಪ್ರಮಾಣದ ಮಾತಾಗಿರದೆ ವಾಕ್ಯಪ್ರಮಾಣದಿಂದ ಬರೆದುದೆಂದೇ ತಿಳಿಯುತ್ತದೆ. ಗ್ರಹಣಾದಿಗಳಲ್ಲಿ ದೃಕ್ತುಲ್ಯತಾಸಿದ್ಧಿಗಾಗಿ ಅವಶ್ಯವಿರುವ ದೃಗ್ಗಣಿತಕ್ರಮಗಳನ್ನೆಲ್ಲ ವ್ಯವಸ್ಥಾಪೂರ್ವಕವಾಗಿ ಹೇಳಿರುವ ಆ ಗ್ರಂಥಕ್ಕೆ 'ದೃಗ್ಗಣಿತಪ್ರಭೆ'ಯೆನ್ನುವದೇ ಸರಿಯಾದ ಹೆಸರಾಗಿದೆ. ಮತ್ತು ಅಂತಹ ದೃಕ್ಸಂಸ್ಕಾರಗಳನ್ನೆಲ್ಲ ಗ್ರಹಣಾದಿ ದೃಷ್ಟವಿಷಯಗಳಲ್ಲಿ ಉಪಯೋಗಕರವೆಂದೇ ಹೇಳುವ ಸಿದ್ಧಾಂತವಾದಿಗಳು ಹೇಗೂ ದೃಗ್ವಿಪಕ್ಷಿಗಳೆಂತ ಆಗುವದಿಲ್ಲ. ವಿಷಯಭೇದವಿಲ್ಲದೆ ಅವ್ಯವಸ್ಥೆಯಿಂದ ಸರ್ವತ್ರ ದೃಗ್ಗಣಿತವೇ ಗ್ರಾಹ್ಯವೆಂದು ಕಲ್ಪಿಸಿಕೊಂಡಿರುವ ಈಗಿನ ಕಾಲದ ಇವರಂತಹ ನವೀನದೃಕ್ಪಿನವರು ತಮ್ಮ ಕಲ್ಪನೆಯು ಶಾಸ್ತ್ರಮಾರ್ಗಕ್ಕೂ, ಶಿಷ್ಟಾಚಾರಕ್ಕೂ ವಿರೋಧವೆಂದು ತೋರಿಸಿಕೊಡುವ ಸಿದ್ಧಾಂತಶಾಸ್ತ್ರಾನುಯಾಯಿಗಳನ್ನು ದೃಗ್ವಿಪಕ್ಷಿಗಳೆಂದು ಕಲ್ಪಿಸಿಕೊಂಡುದು ಸಹ ಇವರ ಕಲ್ಪನೆಯೇ ಆಗಿರುತ್ತದೆ. ಆದುದರಿಂದ ಶ್ರೀಮದ್ವಿದ್ಯಾರಣ್ಯಸ್ವಾಮಿಗಳಂತಹ ಪಕ್ಷಾತೀತ ಪ್ರಾಮಾಣಿಕಪುರುಷರ ಗ್ರಂಥಕ್ಕೆ ಇವರು ಈ ರೀತಿ ಹೆಸರಿಡುವದು ಎಷ್ಟರ ಮಟ್ಟಿಗೂ ಉಚಿತವಾದುದಲ್ಲ.

೪. 'ಇದನ್ನು ವಿಮರ್ಶಿಸಿದರೆ ಹೊರಡುವದು ವಿಸಂಗತಪ್ರಭಾ' ಎಂಬುದು ಇವರ ಮುಂದಿನ ಮಾತು. ಗ್ರಂಥವನ್ನೇ ನೋಡದ ಇವರು ವಿಮ

ರ್ತಿಸಿದ್ದೇನನ್ನು ? ವಿಮರ್ಶೆಯೇ ಇಲ್ಲದ ಮೇಲೆ (ಅಭಿಪ್ರಾಯ) ಹೊರಡುವದು ಹೇಗೆ ? ಹೊರಟದ್ದೇ ಇಲ್ಲದಿರುವಾಗ ವಿಸಂಗತಪ್ರಭೆಯಾದರೂ ಎಲ್ಲಿಂದ ಬಂತು ? ಇದೆಲ್ಲಾ ಇವರ ಬುದ್ಧಿ ವಿಕಲ್ಪದಿಂದಲೇ ಹೊರಟದ್ದಲ್ಲವೇ ? ಅಂದ ಮೇಲೆ ಕಾರಣದಂತೆ ಕಾರ್ಯವೆಂಬ ನಿಯಮದ ಪ್ರಕಾರ ವಿಕಲ್ಪಬುದ್ಧಿಯಿಂ ದ ವಿಸಂಗತಪ್ರಭೆ ಹೊರಟಿತೆನ್ನುವದೇ ಸುಸಂಗತವಾಗಿರುವದು. ಮತ್ತು ಇವರು ಈ ಗ್ರಂಥದ ಮೇಲೆ ಕಲ್ಪಿಸಿರುವ ವಿಸಂಗತಿಗಳನ್ನು ಮುಂದೆ ಕ್ರಮ ವಾಗಿ ಖಂಡಿಸಿರುವೆವು.

೫. ಮುಂದೆ 'ನಾವು ಮಾತ್ರ ಈ ಗ್ರಂಥವನ್ನು ನೋಡಲೂ ಇಲ್ಲ; ಕೇಳಲೂ ಇಲ್ಲ'ವೆಂದು ಹೇಳಿದ್ದಾರೆ. ಆದರೆ ಇವರು ನೋಡದೆ, ಕೇಳದೆ ಇರು ವ ವಿಷಯ(ಗ್ರಂಥ)ಗಳೆಲ್ಲ ಅಪ್ರಮಾಣವೆಂದು ಶಾಸ್ತ್ರಗಳಲ್ಲೇನೂ ಹೇಳಿದ್ದಿಲ್ಲ. ಇವರ ಪ್ರತ್ಯಕ್ಷಪ್ರಮಾಣದಂತೆಯೂ ಹಾಗೆ ಸಿದ್ಧಮಾಡಲಿಕ್ಕೆ ಬರುವಂತಿಲ್ಲ. ಪ್ರಾಮಾಣಿಕವಿಷಯಗಳನ್ನೆಲ್ಲ ಇವರು ಕಂಡು ಕೇಳಿದ್ದಾರೆಂದು ಸಿದ್ಧಮಾಡ ಲಿಕ್ಕೆ ಇವರಿಗೂ ಸಾಧ್ಯವಿಲ್ಲ. ಅಂದಮೇಲೆ ಇದರಿಂದ ಇವರ ಅಜ್ಞಾನವಷ್ಟೇ ಪ್ರಕಟವಾಗುವದಲ್ಲದೆ ಬೇರೇನೂ ಸಿದ್ಧಿಸುವುದಿಲ್ಲ. ಮೇಲಾಗಿ ಈ ಗ್ರಂಥಕ್ಕೆ 'ಗೋಮುಖವ್ಯಾಘ್ರ'ವೆಂಬ ವಿಶೇಷಣವನ್ನು ಕೂಡ ಜೇರಿ ಹಚ್ಚಿದ್ದಾರೆ. ವಿದ್ಯಾರಣ್ಯರಂತಹ ಲೋಕವಿಖ್ಯಾತ ಮಹಾಪುರುಷರ ಗ್ರಂಥಗಳನ್ನು ವಿಮತ ಸ್ಥರೂ, ವಿದೇಶೀಯರೂ ಸಹ ಗೌರವಿಸುತ್ತಿರುವಾಗ ವೈದಿಕಧರ್ಮಾನುಯಾ ಯಿಗಳಿಗಂತೂ ಅವರ ಗ್ರಂಥವು ಅಪೇಕ್ಷಿತಶಾಸ್ತ್ರಾರ್ಥನಿರ್ಣಯವೆಂಬ ದಿವ್ಯ ರಸವನ್ನು ಕರೆಯುವ ಕಾಮಧೇನುವೇ ಆಗಿರುವಾಗ ಶ್ರುತಿ, ಸ್ಮೃತಿ, ಪುರಾಣ, ಸಿದ್ಧಾಂತ, ಶಿಷ್ಟಾಚಾರಗಳಿಗೆಲ್ಲ ವಿಪರೀತವಾಗಿರುವ ನವೀನದೃಕ್ಪಕ್ಷದಲ್ಲಿ ಪ್ರವರ್ತಿಸಿರುವ ಇವರಿಗೆ ಅಂತಹ ಗೋರೂಪವಾದ ಗ್ರಂಥವು "ವಿಪರೀತೇ ವಿಪರ್ಯಯಃ" ಎಂಬ ವಚನದಂತೆ ವ್ಯಾಘ್ರದಂತಾದುದರಲ್ಲಿ ಆಶ್ಚರ್ಯವಿ ಲ್ಲ. ಇವರು ಏನೇ ಹೇಳಿಕೊಂಡರೂ ಅಶೇಷವಿದ್ವಜ್ಜನರ ಗೌರವಾದರಗಳಿಗೆ ಪಾತ್ರವಾದ ಅವರ ಗ್ರಂಥಕ್ಕೆ ಇವರ ತುಚ್ಛೋಕ್ತಿಗಳಿಂದೇನೂ ಚ್ಯುತಿಯುಂ ಟಾಗುವಂತಿಲ್ಲ. ಪ್ರತಿಯಾಗಿ ಸೂರ್ಯನಿಗೆ ಉಗುಳಿದ ಉಗುಳು ತನ್ನ ಮುಖ ಕ್ಕೇನೇ ಬೀಳುವಂತೆ ಇದರಿಂದ ಇವರ ತುಚ್ಛತನವಷ್ಟೇ ಪ್ರಕಟವಾಗುವದು. ಇನ್ನು ಇವರು ಈ ಗ್ರಂಥದ ಮೇಲೆ ಕಲ್ಪಿಸಿರುವ ವಿಸಂಗತಿಗಳಾದರೂ ಎಷ್ಟು ಅಯುಕ್ತವಾದುವೆಂದು ವಿಚಾರಿಸಿದರೆ ಎಲ್ಲರಿಗೂ ತಿಳಿಯುವಂತಿದೆ.

೬. ಈ ದೃಗ್ಗಣಿತಪ್ರಭೆಯಲ್ಲಿ ನೈಮಿತ್ತಿಕಕರ್ಮಗಳಿಗೆ ವೃಕ್ಸಿ ದ್ಧಗ್ರಹರಾಗಬೇಕೆಂತ ವಿಧಿಸಿದ್ದು ಅದರಂತೆ ನೈಮಿತ್ತಿಕವಾದ ಏಕೋದ್ದಿಷ್ಟಾದಿ ಶ್ರಾದ್ಧಕ್ಕೆ ದೃಕ್ಸಿದ್ಧತಿಥ್ಯಾದಿಗಳಿಂದಲೇ ಕಾಲನಿರ್ಣಯವಾಗಬೇಕೆಂತಾಗುವಾ ಗ ಅಂಥ ನಿರ್ಣಯವನ್ನು ಕಾಲಮಾಧವದಲ್ಲೂ ಅವರು (ಶ್ರೀವಿದ್ಯಾರಣ್ಯರು) ಪ್ರತ್ಯೇಕವಾಗಿ ಯಾಕೆ ಹೇಳಲಿಲ್ಲವೆಂದು ೧ ನೇ ವಿಸಂಗತಿಯನ್ನು ಕಲ್ಪಿಸಿದ್ದಾ

ರೆ. ಇದನ್ನು ವಿಚಾರಿಸುವಲ್ಲಿ ಕಾಲಮಾಧವವು ಧರ್ಮಶಾಸ್ತ್ರಗ್ರಂಥವಾದ್ದರಿಂದ ತತ್ತತ್ಕರ್ಮೋಪಯೋಗಿಯಾದ ತಿಥ್ಯಾದಿಗಳ ಗಣಿತವನ್ನು ಯಾವ ರೀತಿಯಿಂದ ಮಾಡಬೇಕೆಂದು ಹೇಳುವ ಪ್ರಸಕ್ತಿಯೇ ಅವರಲ್ಲಿ ಬರುವದಿಲ್ಲವೆಂಬುದು ಸಹಜವಾಗಿ ತಿಳಿಯುತ್ತದೆ. ಮೇಲಾಗಿ '**ಅನಿಯತನಿಮಿತ್ತೇನೋಪಾಧಾಚೋದಿತಂ ನೈಮಿತ್ತಿಕಂ। ಯಥಾ ಪುತ್ರಜನ್ಮಾದಿಷು।**' ಅಂದರೆ— ನಿರ್ದಿಷ್ಟವಾದ ಕಾಲನಿಯಮವಿಲ್ಲದೆ ಸಂಭವಿಸತಕ್ಕ ಪುತ್ರಜನನಾದಿ ವಿಶೇಷಸಂದರ್ಭಗಳಲ್ಲಿ ತನ್ನಿಮಿತ್ತವಾಗಿ ಆಚರಿಸತಕ್ಕ ಶ್ರಾದ್ಧವು ನೈಮಿತ್ತಿಕವೆನಿಸುವದು. ಎಂಬ ಶಾಸ್ತ್ರೀಯಲಕ್ಷಣದಂತೆ ಅನಿಯತನಿಮಿತ್ತವಾಗಿರತಕ್ಕ ನೈಮಿತ್ತಿಕಶ್ರಾದ್ಧಕ್ಕೆ ಪ್ರತ್ಯೇಕವಾಗಿ ಕಾಲನಿರ್ಣಯವನ್ನು ಹೇಳಬೇಕಾದ ಅವಶ್ಯಕತೆಯೇ ಇಲ್ಲವೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಹೀಗೆ ಅನಿಯತನಿಮಿತ್ತವಾಗಿರುವ (ನೈಮಿತ್ತಿಕ)ಶ್ರಾದ್ಧಕ್ಕೆ ಅಂತಹ ನಿಮಿತ್ತವು ಸಂಭವಿಸಿದ್ದೇ ಕಾಲವಾಗಿರುವಾಗ ಅದಕ್ಕೆ ಪ್ರತ್ಯೇಕವಾಗಿ ನಿರ್ಣಯಿಸತಕ್ಕದ್ದಾದರೂ ಏನಿದೆ ? ಹೀಗೆ ೧ನೇದಾಗಿ ಕಾಲಮಾಧವವು ಗಣಿತಕ್ರಮವನ್ನು ನಿರೂಪಿಸಲಿಕ್ಕಿರುವ ಗ್ರಂಥವಲ್ಲ: ೨ನೇದಾಗಿ ನೈಮಿತ್ತಿಕಶ್ರಾದ್ಧಕ್ಕೆ ಪ್ರತ್ಯೇಕವಾಗಿ ಕಾಲನಿರ್ಣಯ ಹೇಳುವ ಅಗತ್ಯವೇ ಇರುವುದಿಲ್ಲ; ೩ನೇದಾಗಿ ಏಕೋದ್ದಿಷ್ಟಾದಿಗಳಿಗೆಲ್ಲ ಅವಿಶೇಷವಾಗಿರತಕ್ಕ ಕಾಲನಿರ್ಣಯವನ್ನು ಕಾಲಮಾಧವದಲ್ಲಿ ಹೇಳಿಯೇ ಇದೆ. ಈ ಮೂರು ಕಾರಣಗಳಿಂದ ಇವರು ದೃಗ್ಗಣಿತಪ್ರಭೆಗೆ ವಿಸಂಗತಿಯನ್ನು ಕಲ್ಪಿಸಿಕೊಂಡದ್ದೇ ವಿಸಂಗತವಾಗಿರುವುದಲ್ಲದೆ ಆ ಗ್ರಂಥವು ಏನೂ ವಿಸಂಗತವಾಗಿಲ್ಲವೆಂದು ಸ್ವಯಂಸಿದ್ಧವಾಗುತ್ತದೆ.

೭. ದೃಗ್ಗಣಿತ ಪ್ರಭೆಯಲ್ಲಿ ಹೇಳಿರುವ ತಿಥಿಗಳ ಪರಮಕ್ಷಯವು ವಿಸಂಗತವೆಂದೂ, ಹರಿದ್ವಾರಾದಿ ಉತ್ತರಪ್ರದೇಶಗಳಲ್ಲಿ ವೃಕ್ತಿಥಿಯು ಅಪರಾಹ್ಣ, ಸಾಯಾಹ್ನಗಳೆರಡರಲ್ಲೂ ಇಲ್ಲದಂತಾಗುವುದು ಅಸಂಭವವೆಂದೂ ೨ ನೇ ವಿಸಂಗತಿಯನ್ನು ಕಲ್ಪಿಸಿದ್ದಾರೆ. ಇದಾದರೂ ಎಷ್ಟು 'ಅಗಣಿತಕಲ್ಪನೆ' ಎಂಬುದನ್ನು ವಾಚಕರು ಗಮನಿಸಬೇಕು. ದೃಗ್ಗಣಿತಪ್ರಭೆಯಲ್ಲಿ ಹೇಳಿರುವ ರವಿ-ಚಂದ್ರಗಣಿತಗಳ ಪ್ರಕಾರ ತಿಥಿಗತಿಯು ವೃದ್ಧಿಯಾದಾಗ ೮೯॥ ಕಲೆಗಳಾಗುತ್ತವೆಂದು ಗಣಿತದಿಂದಲೇ ಸಿದ್ಧವಾಗುತ್ತದೆ. ಅದರಂತೆ ತಿಥಿಯ ಆದ್ಯಂತಘಟಿಯು ೪೯–೪೧. ಬರುವುದರಿಂದ ತಿಥಿಯ ಪರಮಕ್ಷಯವು ೧೦ ಘಟಿ ೧೯ ಪಲವೆಂಬುದು ತೀರ ಸರಿಯಾಗಿಯೇ ಇರುತ್ತದೆಂದು ಸ್ವಲ್ಪಮಟ್ಟಿಗೆ ಗಣಿತಕ್ರಮಬಲ್ಲವರಿಗೂ ಸಹ ತಿಳಿಯುವಂತಿದೆ. ಇನ್ನು ಇವರ ಹೇಳಿಕೆಯಂತೆಯೇ ಹರಿದ್ವಾರದ ಕಡಿಮೆ ದಿವಾಮಾನದ ಘಟಿ ೨೫ ೬ ಇರುವಾಗ ಪೂರ್ವದಿನದ ತಿಥಿ ೨೫–೧೦, ಪರದಿನದಲ್ಲಿ ೧೫–೦ (ತಿಥಿ ಕ್ಷಯಘಟಿ ೧೦.೧೦) ಸಂಭವಿಸಿದರೂ ಸಹ ಇಲ್ಲಿ ಅಪರಾಹ್ಣಾರಂಭಘಟಿ ೧೫–೪ ಆಗಿದ್ದು ಪರದಿನದ ತಿಥಿಗೆ ಅಪರಾಹ್ಣಸ್ಪರ್ಶವೂ ಆಗದೆ ಪೂರ್ವದಿನದಲ್ಲಿ ಸಾಯಾಹ್ನ ಸ್ಪರ್ಶವೂ ಇಲ್ಲದೆ

ಇರುವುದರಿಂದ ಈ ಸಂದರ್ಭದಲ್ಲಿ "ಉಭಯೋರಪ್ಯಭಾವೇ ತು ಶ್ರಾದ್ಧಂ ತ್ಯಾಜ್ಯಂ ಕಿಮಾಸ್ತಿಕೈಃ ? ।" ಎಂದು ಆಕಾಂಕ್ಷಾಪೂರ್ವಕವಾಗಿ ಇವರ ನವೀನದೃಕ್ಪಂಚಾಂಗದ ತಿಥಿಯನ್ನು ಸಮೂಲವಾಗಿ ಖಂಡಿಸಿರುವ ಶ್ರೀವಿದ್ಯಾರಣ್ಯ ಸ್ವಾಮಿಗಳವರ ವಚನವು ಅವರು ಕಾಲಮಾಧವದಲ್ಲಿ ಹೇಳಿರುವ ಶ್ರಾದ್ಧ ತಿಥಿನಿರ್ಣಯಕ್ಕೂ, ದೃಗ್ಗಣಿತಪ್ರಭೆಯಲ್ಲಿ ಹೇಳಿರುವ ಸಿದ್ಧಾಂತ, ದೃಗ್ಗಣಿತಗಳ ವ್ಯವಸ್ಥೆಗೂ ಸರಿಯಾಗಿ ಹೊಂದುವುದರಿಂದ ಅತ್ಯಂತ ಸುಸಂಗತವೇ ಆಗಿರುತ್ತದೆ. ಇನ್ನು ಚಂದ್ರಗತಿಯ ಪರಮವೃದ್ಧಿಯು ೯೧೪ ಕಲೆಗಳಾಗುವವೆಂದು (ಶಾ. ವಿ. ಪಂ. ದ) ೨೨ನೇ ಪುಟದಲ್ಲಿ ಹೇಳಿರುವ ಪ್ರಕಾರ ತಿಥಿಕ್ಷಯಘಟಿ ೯॥।ಕ್ಕಿಂತ ಹೆಚ್ಚು ಬರುವದಿಲ್ಲವೆಂತ ಆದರಂತೆಯೇ ಇವರು ತಮ್ಮ ಮುಂದಿನ ಲೆಕ್ಕವನ್ನು ಸಾಗಿಸಿದ್ದಾರೆ. ದೃಗ್ಗಣಿತಪ್ರಭೆಯಲ್ಲಿ ವಿಸಂಗತಿಯನ್ನು ಕಲ್ಪಿಸಲಿಕ್ಕೆ ಹೊರಟ ಇವರು ಶಾ. ವಿ. ಪಂ. ದಲ್ಲಿ ಹೇಳಿದ ಗತಿಯ ಮೇಲಿಂದ ಅದರ ವಿಸಂಗತಿಯನ್ನು ಕಲ್ಪಿಸಲಿಕ್ಕೆ ಯತ್ನಿಸಿದ್ದು ತೀರಾ ಅನುಚಿತವೂ, ಅಸಂಬದ್ಧವೂ ಆಗಿದೆ. ಮೇಲಾಗಿ ಶಾ.ವಿ. ಪಂ.ದಲ್ಲಿ ಚಂದ್ರಗತಿಯನ್ನು ಹೇಳಿರುವ ಆ ವಚನವು ಬೇರೆ ಗ್ರಂಥದ್ದೆಂದು ಅದರಲ್ಲಿಯೇ (ಪುಟ ೧೭) ಸ್ಪಷ್ಟವಾಗಿ ಕಾಣಿಸಿದೆ. ಆ ಮೂಲಗ್ರಂಥಕರ್ತರಾದರೂ ಕೆಲವು ಲಘುಸಂಸ್ಕಾರಗಳನ್ನು ಬಿಟ್ಟು ಸರಿಸುಮಾರಾಗಿ ಹಾಗೆ ಹೇಳಿದ್ದೆಂತಲೂ, ಈಗಿನ ನವೀನದೃಗ್ಗಣಿತಗ್ರಂಥಗಳ ಪ್ರಕಾರ ಸಹ ದೃಗ್ಗಣಿತಪ್ರಭೆಯಲ್ಲಿ ಹೇಳಿದ ತಿಥಿಕ್ಷಯದ ಮಾನವು ತಪ್ಪಲ್ಲವೆಂತಲೂ, ಇಷ್ಟೇ ಅಲ್ಲ; ಚಂದ್ರನ ಸೂಕ್ಷ್ಮತರ ಸಂಸ್ಕಾರಗಳನ್ನೆಲ್ಲ ಸೇರಿಸಿದರೆ ೧೨ ಘಟಿಗಳಿಗೂ ಮಿಕ್ಕಿ ತಿಥಿಕ್ಷಯ ಬರುವುದು ಸಂಭವವೆಂದು ಆಧುನಿಕದೃಗ್ಗಣಿತಪಂಡಿತರೇ ಲೆಕ್ಕಿಸಿರುವರೆಂತಲೂ ದೃಗ್ಗಣಿತಪಂಡಿತರಿಗೆಲ್ಲ ತಿಳಿದಿರತಕ್ಕದ್ದೇ ಆಗಿದ್ದು ಇವರ ನವೀನದೃಕ್ಪಂಚಾಂಗದ ತಿಥಿಯ ಅಷ್ಟವೃದ್ಧಿ–ದಶಕ್ಷಯ ಲಕ್ಷಣವನ್ನೇ ಇಟ್ಟುಕೊಂಡರೂ ಹರಿದ್ವಾರಕ್ಕಿಂತ ಉತ್ತರಪ್ರದೇಶದಲ್ಲಿರತಕ್ಕ ಪತಿಯಾಲಾ, ಗಂಗೋತ್ರಿ, ಪಂಜಾಬ, ಲಾಹೋರ, ಅಮೃತಸರ, ಶ್ರೀನಗರ, ಬದರಿ, ಕಾಶ್ಮೀರಾದಿ ಹಲವು ಪ್ರದೇಶಗಳಲ್ಲಿ ಅನೇಕ ಸಂದರ್ಭಗಳಲ್ಲಿ ಅಪರಾಹ್ಣ, ಸಾಯಾಹ್ನಗಳೆರಡರಲ್ಲಿಯೂ ಇವರ ನವೀನದೃಕ್ತಿಥಿಯು ಸಿಗದಿರುವ ಸಂಭವವಿರುವದೆಂಬುದು ಇವರ ನವೀನದೃಗ್ಗಣಿತದಂತೆಯೂ ಸಿದ್ಧವಾಗುತ್ತಿರುವಾಗ ಈ ಯಾವುದನ್ನೂ ಗಣಿಸದೆ ದೃಗ್ಗಣಿತಪ್ರಭೆಗೆ ವಿಸಂಗತಿಯನ್ನೇ ಕಲ್ಪಿಸಲು ಹವಣಿಸಿರುವ ಇವರು ಕಲ್ಪಿಸಿರುವ ವಿಸಂಗತಿಯೇ ವಿಸಂಗತವಾದುದೆಂದೂ, ಆ ಗ್ರಂಥವು ಎಷ್ಟುಮಟ್ಟಿಗೂ ವಿಸಂಗತವಾದುದಲ್ಲವೆಂದೂ ಸಿದ್ಧವಾಗುತ್ತದೆ.

೮. ಇದಲ್ಲದೆ ತಿಥಿಕ್ಷಯ ೧೧, ದಿವಾಮಾನ ೨೪ ಘಟಿ ಇಟ್ಟುಕೊಂಡರೂ ಸಹ ವೈದ್ಯನಾಥೀಯದ 'ತ್ರಿಮುಹೂರ್ತಾ ನ ಚೇದ್ಗ್ರಾಹ್ಯಾ' ಎಂಬ ವಚನದಿಂದ ಶ್ರಾದ್ಧತಿಥಿಯ ವ್ಯವಸ್ಥೆಯಾಗುತ್ತದೆಂದೂ, ಅದನ್ನು ಶ್ರೀವಿದ್ಯಾರಣ್ಯರು ಮನ್ನಿಸದಿರುವುದು ಸುತ್ತೊಂದು ವಿಸಂಗತಿಯೆಂದೂ ಕಲ್ಪಿಸಿದ್ದಾರೆ.

ಶ್ರೀವಿದ್ಯಾರಣ್ಯರ ಕಾಲನಿರ್ಧಾರದ, ಮತ್ತು ದೃಗ್ಗಣಿತಪ್ರಭೆಯೊಳಗಿನ ಪರಸ್ಪರ ವಿಸಂಗತಿಯನ್ನು ಕಲ್ಪಿಸಲಿಕ್ಕೆ ತೊಡಗಿರುವ ಇವರು ಅವೆರಡೂ ಅಲ್ಲದ ಪರಕೀಯ ಗ್ರಂಥವಾದ ವೈದ್ಯನಾಥೀಯವನ್ನೆತ್ತಿಕೊಂಡು ಅದರಿಂದ ವಿದ್ಯಾರಣ್ಯರ ಕೃತಿಯೊಳಗಿನ ವಿಸಂಗತಿಯನ್ನು ಕಲ್ಪಿಸಲಿಕ್ಕೆ ಯತ್ನಿಸಿದ್ದು ಇವರ ವಿಚಿತ್ರಬುದ್ಧಿಮತ್ತೆಯ ದ್ಯೋತಕವೇ ಆಗಿರುತ್ತದೆ. ಇರಲಿ! ಇವರ ಈ ಕಲ್ಪನೆಯಾದರೂ ಎಷ್ಟು ವಿಪರೀತವಾದದ್ದೆಂಬುದನ್ನು ವಾಚಕರು ಲಕ್ಷಿಸಬೇಕು. ವೈದ್ಯನಾಥೀಯದಲ್ಲಿ — ಶ್ರಾದ್ಧತಿಥಿಯು ಎರಡುದಿನಗಳಲ್ಲಿಯೂ ಅಪರಾಹ್ಣಸ್ಪರ್ಶವಿಲ್ಲದಿದ್ದಾಗ ಪೂರ್ವದಿನ ೩ ಮುಹೂರ್ತ(ಸಂಪೂರ್ಣ)ಸಾಯಾಹ್ನವ್ಯಾಪ್ತವಾಗಿದ್ದರೆ ಪೂರ್ವದಿನದಲ್ಲಿಯೇ ಶ್ರಾದ್ಧಮಾಡಬಹುದು. **'ತ್ರಿಮುಹೂರ್ತಾನ ಚೇತ್'** ಅಂದರೆ ಹಾಗೆ ೩ ಮುಹೂರ್ತಗಳಷ್ಟು ಸಂಪೂರ್ಣವಾಗಿ ಇಲ್ಲದಿದ್ದರೆ **'ಪರೈವ ಕುತಪೇ'** ಅಂದರೆ ಮರುದಿನ ಕುತಪಕಾಲವಲ್ಲಾದರೂ ಶ್ರಾದ್ಧತಿಥಿಯು ಸಿಗುವುದರಿಂದ ಮಾರನೆದಿನ ಶ್ರಾದ್ಧಮಾಡತಕ್ಕದ್ದು; ಎಂದು ಸಹೇತುಕವಾಗಿರುವ ಗೋಭಿಲವಚನವನ್ನುದಾಹರಿಸಿ ಅದರಂತೆಯೇ ಸ್ವವಾಕ್ಯವನ್ನು ಸಹ ಕೊಟ್ಟು ನಿರ್ಣಯಿಸಲ್ಪಟ್ಟಿದೆ. ಇವರ ನವೀನದೃಕ್ತಿಥಿಯು ಈ ವೈದ್ಯನಾಥೀಯ ನಿರ್ಣಯಕ್ಕೂ ಸಹ ಸರಿಯಿಲ್ಲದೆ ತೀರ ವಿರುದ್ಧವಾಗಿರುತ್ತದೆ. (ಈ ವಿಷಯವನ್ನು ಮುಂದಿನ ಪ್ರಕರಣದಲ್ಲಿ ವಿವರವಾಗಿ ವಿವೇಚಿಸಿದೆಯಾದರೂ ಈ ಸಂದರ್ಭದಲ್ಲಿ ಅಗತ್ಯವಿರುವಷ್ಟನ್ನು ಇಲ್ಲಿ ಸೂಚಿಸಿದೆ.) ಹೇಗಂದರೆ: ದಿವಾಮಾನವು ೩೭ ಘಟಿ ಇರುವಾಗ ೧೨ ಘಟಿ ೩೬ ಪಲದ ನಂತರ ಕುತಪಕಾಲದ ಆರಂಭವಾಗುವುದು. ಮತ್ತು ೨೧ ಘಟಿ ೩೬ ಪಲದನಂತರ ಸಾಯಾಹ್ನ(ತ್ರಿಮುಹೂರ್ತ) ದ ಆರಂಭವಾಗುವದು. ಆಗ ಪೂರ್ವದಿನ ತಿಥಿಘಟಿ ೨೨–೦ ಪರದಿನ ೧೨–೦ ಈ ರೀತಿ ನವೀನ ದೃಕ್ತಿಥಿಯು ಬರುವ ಸಂಭವವಿದೆ. ಈ ಸಂದರ್ಭದಲ್ಲಿ ಇವರು ತೋರಿಸಿರುವ ವೈದ್ಯನಾಥೀಯ ನಿರ್ಣಯದಂತೆಯೇ (ಪರದಿನದ) ಶ್ರಾದ್ಧತಿಥಿಯು ಎರಡೂ ದಿನಗಳಲ್ಲಿ ಅಪರಾಹ್ಣಸ್ಪರ್ಶವೂ ಇಲ್ಲದೆ, ಪೂರ್ವದಿನ ಸಾಯಾಹ್ನದಲ್ಲಿ ಮೂರು ಮುಹೂರ್ತಗಳ ವ್ಯಾಪ್ತಿಯೂ ಇಲ್ಲದೆ ಪಾರ್ವಣಶ್ರಾದ್ಧಕ್ಕೆ ಅತ್ಯಂತ ಗೌಣವಾಗಿರುವ ಕುತಪಕಾಲವ್ಯಾಪ್ತಿಯೂ ಸಹ ಸಿಗದಂತಾಗಿ ಶ್ರಾದ್ಧದಿನದ ನಿರ್ಣಯವೇ ತೀರಾ ಅಶಕ್ಯವಾಗುವದು. ಇದರಿಂದ ಇವರ ನವೀನದೃಕ್ತಿಥಿಯು ಧರ್ಮಶಾಸ್ತ್ರಗಳಿಗೆಲ್ಲ ಹೇಗೆ ವಿರೋಧವಿರುತ್ತದೆಂಬುದನ್ನು ಸ್ಥಾಲೀಪುಲಾಕನ್ಯಾಯದಿಂದ ತಜ್ಞವಾಚಕರು ಇಷ್ಟರಿಂದಲೇ ನಿಶ್ಚಯಿಸಿಕೊಳ್ಳಬಹುದು. ಇಷ್ಟಿದ್ದರೂ ಇವರು ಇವನ್ನೆಲ್ಲ ಮುಚ್ಚಿಟ್ಟು ಪ್ರಕೃತವಿಷಯಕ್ಕೆ ಸಂಬಂಧವಿಲ್ಲದ ಏನಾದರೊಂದು ವಚನವನ್ನೆತ್ತಿಕೊಂಡು ಅದಕ್ಕೂ ಸಹ ತಮ್ಮ ಸ್ವಕಪೋಲ ಕಲ್ಪಿತ ತಾತ್ಪರ್ಯವನ್ನೇ ಕಲ್ಪಿಸಿ ಶ್ರೀವಿದ್ಯಾರಣ್ಯರಂತಹ ಪ್ರಾಮಾಣಿಕಪುರುಷರ ಕೃತಿಯಮೇಲೆ ಅಸ್ವತ, ಅಸಂಬದ್ಧ, ಅಸಂಭಾವಿತ ರೀತಿಗಳಿಂದೆಲ್ಲ ದೋಷ ಕಲ್ಪನೆಮಾಡಿ ಸ್ವೈರವ್ಯ

ತ್ತಿಯ ಸಮರ್ಥನೆ, ಶಾಸ್ತ್ರವಿಹಿತವಾದವುಗಳ ಖಂಡನೆಗೆಂದು ಆಕಾಶ-ಪಾತಾಳ ಗಳನ್ನೊಂದುಮಾಡುವಂತೆ ಅವ್ಯಾಹತವಾಗಿ ಪರಿಶ್ರಮಿಸುವವನ್ನು ವಿಚಾರಿಸಿ ದರೆ ಇವರ ವಿಷಯವಾಗಿ ಯಾರಿಗೂ ಕನಿಕರವುಂಟಾಗದೆ ಇರಲಿಕ್ಕಿಲ್ಲ. ಇರ ಲಿ ! ಇಷ್ಟಾದರೂ ಇವರ ಇಷ್ಟಸಿದ್ಧಿಯಾಯಿತೇ ? ಇಲ್ಲ. "ತಾನೆತ್ತಿದ ಕಲ್ಲು ತನ್ನ ತಲೆಯ ಮೇಲೆಯೇ ಬಿತ್ತು" ಎಂಬಂತೆ ಇವರು ಹೇಳುವ ಆಧಾರವಚ ನಗಳೇ ಇವರ ಕಲ್ಪನೆಗಳನ್ನು ಸಮೂಲವಾಗಿ ಖಂಡಿಸುತ್ತಿರುವವು. ಹೀಗೆ ಇವ ರು ವೈದ್ಯನಾಥೀಯವನ್ನೆತ್ತಿ ದೃಗ್ಗಣಿತಪ್ರಭೆಯಲ್ಲಿ ವಿಸಂಗತಿಯನ್ನು ಕಲ್ಪಿಸಲಿ ಕ್ಕೆ ಯತ್ನಿಸಿದ ಅಕ್ರಮ, ಅಸಂಬದ್ಧ, ವಿಚಾರಶೂನ್ಯಪ್ರವೃತ್ತಿಯು ಕೂಡ ನಿಷ್ಫಲವಾದುದಲ್ಲದೆ ಪ್ರತಿಯಾಗಿ ಇವರ ದೃಕ್ಪಂಚಾಂಗಖಂಡನೆಯನ್ನೇ ಸಿದ್ಧ ಪಡಿಸಿ ಇವರ ನವೀನದೃಕ್ಪಂಚಾಂಗವು ಶಾಸ್ತ್ರವಿರುದ್ಧವೆಂದು ಘಂಟಾಘೋ ಷವಾಗಿ ಸಾರುವಂತಾದ್ದು "........ಭವತಿ ವಿನಿಪಾತಃ ಶತಮುಖಃ" ಎಂಬಂ ತೆ ಪೂರ್ವಮಾರ್ಗಾನುಸರಣೆಯಿಂದ ವಿಚ್ಯುತಿಹೊಂದಿದ್ದರ ಫಲವಲ್ಲದೆ ಬೇರೆ ಯಲ್ಲ. ಶ್ರೀವಿದ್ಯಾರಣ್ಯರು ಕಾಲಮಾಧವದಲ್ಲಿ ಹೇಳಿರುವ ಶ್ರಾದ್ಧತಿಥಿನಿರ್ಣಯ ಕ್ಕೂ ಸಹ ಇವರ ನವೀನದೃಕ್ತಿಥಿಯು ಹೊಂದುವದಿಲ್ಲವೆಂಬುವನ್ನು ಈ ಮೇಲೆ ಇವರ ೨ನೇ ವಿಸಂಗತಿಯನ್ನು ಖಂಡಿಸುವಾಗಲೇ ಉದಾಹರಣಸಹಿತವಾಗಿ ತೋರಿಸಿದ್ದು ವಾಚಕರ ಲಕ್ಷ್ಯದಲ್ಲಿರಬಹುದು. ಹೀಗೆ ಇವರ ದೃಕ್ಪಂಚಾಂಗವು ಸುಪ್ರಸಿದ್ಧವಾಗಿರುವ ಪ್ರತಿಯೊಂದು ಧರ್ಮಶಾಸ್ತ್ರಕ್ಕೂ ವಿರೋಧವಾಗಿದ್ದು ಇವರ ಆಚಾರ,ವಿಚಾರ, ಪ್ರಚಾರಗಳೆಲ್ಲ ತೀರ ವಿಸಂಗತವಾದ್ದರಿಂದಲೇ ಇವ ರಿಗೆ ಶ್ರೀವಿದ್ಯಾರಣ್ಯಸ್ವಾಮಿಗಳಂತಹ ಪರಮಪೂಜ್ಯವ್ಯಕ್ತಿಗಳ ಗ್ರಂಥಗಳಲ್ಲಿ ವಿಸಂಗತಿಯ ಕಲ್ಪನೆಯುಂಟಾಗಿ ಅದರಿಂದಲೇ ಅಂತ್ಯದಲ್ಲಿ ಈ ೩ ಪ್ರಕಾರ ವಿಸಂಗತಿ ತೋರುವದೆಂದು ಇವರು ಹೇಳಿಕೊಂಡದ್ದಲ್ಲದೆ ನಿಜವಾಗಿ ಆ ದೃಗ್ಗ ಣಿತಪ್ರಭೆಯಲ್ಲಿ ವಿಸಂಗತಿಯೇನೂ ಇಲ್ಲವೆಂದೂ, ಪ್ರತಿಯಾಗಿ ವಿದ್ಯಾರಣ್ಯರ ಅಷ್ಟೇ ಅಲ್ಲ; ಹೇಮಾದ್ರಿ, ಕಮಲಾಕರ, ವೈದ್ಯನಾಥ, ಕಾಶೀನಾಥರೇ ಮೊದ ಲಾದ ಸಮಸ್ತ ಘನಪಂಡಿತರ ಧರ್ಮಶಾಸ್ತ್ರನಿಬಂಧಗಳ ಮಾತ್ರವಲ್ಲ; ಶ್ರುತಿ, ಸ್ಮೃತಿ, ಸಿದ್ಧಾಂತ,ಆಗಮ, ಪುರಾಣಾದಿ ಸಮಸ್ತ ವೈದಿಕ-ಧಾರ್ಮಿಕಗ್ರಂಥಗ ಳ ಏಕಾಂತಿಕವಾದ ಕರ್ಮಕಾಲನಿರ್ಣಯತತ್ವಕ್ಕೆ ಆದು ಆ ದೃಗ್ಗಣಿತಪ್ರಭೆ ಯು ತೀರ ಸಮಂಜಸವೂ, ಸುಸಂಗತವೂ ಆಗಿದ್ದು ನಿಜವಾಗಿಯೂ ಅಪ್ರತಿ ಮ ಪ್ರತಿಭಾ ಪ್ರಭಾವಶಾಲಿಗಳಾದ ಶ್ರೀ ವಿದ್ಯಾರಣ್ಯಸ್ವಾಮಿಗಳೇ ಅದನ್ನು ರಚಿಸಿದ್ದೆಂದೂ ದೃಢತರವಾಗಿ ಸಿದ್ಧಾಂತವಾಗುತ್ತದೆ.

ಪುಟ ೬೮ ರಲ್ಲಿ ಸಿದ್ಧಾಂತಶಾಸ್ತ್ರಕ್ಕೂ, ತಾತ್ಕಾಲಿಕದೃಗ್ಗಣಿತಕ್ಕೂ ವಿಷಯಭೇದದಿಂದ ವ್ಯವಸ್ಥೆ ಹೇಳುವದು ಅಸಮಂಜಸವೆಂದೂ, ಅದರಿಂದ ಸೂರ್ಯಸಿದ್ಧಾಂತವು ಯಾವ ಕಾಲಕ್ಕೂ ದೃಕ್ತುಲ್ಯವಾಗುವದಿಲ್ಲವೆಂದು ಹೇಳಿ ದಂತಾಯಿತೆಂದೂ ಮತ್ತು 'ತತ್ತದ್ಗತಿವಶಾನ್ನಿತ್ಯಂ' ಎಂತ ಹೇಳಿದ್ದು ಅಸಂಗ

ಕಲ್ಪಿಸಿಕೊಂಡಿದ್ದಾರೆ. ಆದರೆ ಕರ್ಮಾಚರಣೆಯಲ್ಲಿ ದೃಷ್ಟಾ
ತವಾಗುವದೆಂದೂ ಕಲ್ಪಿಸಿಕೊಂಡಿದ್ದಾರೆ. ಆದರೆ ಕರ್ಮಾಚರಣೆಯಲ್ಲಿ ದೃಷ್ಟಾ
ದೃಷ್ಟಭೇದದಿಂದ ೨ ವಿಧಗಳುಂಟೆಂತಲೂ, ಅಪ್ರತ್ಯಕ್ಷವಾಗಿಯೂ, ಶಾಸ್ತ್ರದಿಂ
ದಲೇ ತಿಳಿದುಕೊಳ್ಳತಕ್ಕದ್ದಾಗಿಯೂ ಇರುವ ತಿಥ್ಯಾದಿಗಳ ಸಂಬಂಧದಿಂದ
ಆಚರಿಸತಕ್ಕ ಅದೃಷ್ಟಾರ್ಥಕರ್ಮಗಳಿಗೆಲ್ಲ ಶಾಸ್ತ್ರವೇ ಪ್ರಮಾಣವಾಗಿರುವದೆಂ
ದೂ, ಕೇವಲ ಪ್ರತ್ಯಕ್ಷಕ್ಕೂ ಗೋಚರವಾಗುವ ಗ್ರಹಣಾದಿ ದೃಷ್ಟವಿಷಯಗಳ
ನಿಮಿತ್ತವಾಗಿ ಆಚರಿಸತಕ್ಕ ದೃಷ್ಟಾರ್ಥಕರ್ಮಗಳಿಗೆ ತಾತ್ಕಾಲಿಕ ದೃಕ್ತುಲ್ಯವಿ
ರುವ ದೃಗ್ಗಣಿತವೇ ಪ್ರಯೋಜಕವೆಂತಲೂ ಹೀಗೆ ವಿಷಯಭೇದದಿಂದ ಉಭ
ಯವಿಧ ಗಣಿತಕ್ರಮಗಳಿಗೂ ಸಾರ್ಥಕತೆಯನ್ನು ವ್ಯವಸ್ಥಾಪೂರ್ವಕವಾಗಿ
ಶಾಸ್ತ್ರಗಳಲ್ಲಿ ಹೇಳಿದ್ದು ಅತ್ಯಂತ ಸಮಂಜಸವಾದುದೆಂದೂ ಹಿಂದೆ ಆಸ್ತಿಕಪಂ
ಚಾಂಗನಿರೂಪಣೆಯಲ್ಲಿ ಸಪ್ರಮಾಣವಾಗಿ ನಿರೂಪಿಸಿರುವೆವು. ಇದಲ್ಲದೆ ಕಲ್ಪ
ಮಧ್ಯದಲ್ಲಿ ಆಗಾಗ ಅವಾಂತರಕಾಲಿಕ ಗತಿವಿಕಾರಗಳು ಉಪಚಯಾಪಚಯ
ಗಳಿಂದ ಲೋಪವಾಗಿರುವ ಕಾಲದಲ್ಲಿ ಸೂರ್ಯಸಿದ್ಧಾಂತಗಣಿತವೂ ದೃಕ್ಸಂ
ವಾದವನ್ನು ಹೊಂದುವಲ್ಲಿ ಅದರಿಂದ ಸೂರ್ಯಸಿದ್ಧಾಂತದ ಪ್ರಾಮಾಣ್ಯವು
ನಿತ್ಯವಾಗಿರಲಿಕ್ಕೆ ವಿರೋಧವೇನೂ ಇಲ್ಲವೆಂಬುದನ್ನು ಈ ಹಿಂದೆ ಪುಟ ೧೩೪.
ರಲ್ಲಿ ಇವರ ಗ್ರಂಥದ ವಿಷಯವನ್ನು ನಾವು ಖಂಡಿಸುವಾಗಲೇ ಸಕಾರಣವಾ
ಗಿ ವಿವರಿಸಿರುವೆವು. ಇದರಿಂದ 'ತತ್ತದ್ಗತಿವಶಾನ್ನಿತ್ಯಂ' ಎಂಬ ವಚನಕ್ಕೆ
ಅಸಂಗತಿಯುಂಟಾಗುವದಿಲ್ಲವೆಂದೂ, ಮೇಲಾಗಿ ಆ ಶ್ಲೋಕದಲ್ಲಿರುವ
'ದೃಕ್ತುಲ್ಯತಾಂ' ಎಂಬ ಶಬ್ದಕ್ಕೆ ಶಾಸ್ತ್ರೀಯಪರಿಭಾಷೆಯಿಂದ ಸಿದ್ಧವಾಗುವ
ಅರ್ಥವನ್ನೇ ಗ್ರಹಿಸಬೇಕೆಂಬುದನ್ನೂ ಸಹ ಈ ಮುಂಚೆ ಪುಟ ೧೩೮ರಲ್ಲಿ
ಸಕಾರಣವಾಗಿ ವಿವರಿಸಿರುವೆವು.

ಇದಲ್ಲದೆ ಇವರ ನವೀನದೃಕ್ಪಂಚಾಂಗದ ತಿಥ್ಯಾದಿಗಳು ಸಿದ್ಧಾಂ
ತಶಾಸ್ತ್ರಕ್ಕೂ, ಧರ್ಮಶಾಸ್ತ್ರೋಕ್ತ ಕರ್ಮಕಾಲನಿರ್ಣಯಕ್ಕೂ, ಕೇವಲ ದೃಕ್ಪ
ರೀಕ್ಷೆಗೂ ಸಹ ವಿರೋಧವಾಗಿರುತ್ತದೆಂಬುದನ್ನೂ, ಮತ್ತು ಇವರ ಸಾಯನಾ
ಯನವಾದರೂ ಹೇಗೆ ಅಶಾಸ್ತ್ರೀಯ ಮತ್ತು ವಿಸಂಗತವಾಗಿರುವುದೆಂಬುದನ್ನೂ
ಈವರೆಗಿನ ನಮ್ಮ ನಿರೂಪಣೆ, ಖಂಡನೆಗಳಿಂದೆಲ್ಲ ಸಕಾರಣವಾಗಿಯೂ, ಸಪ್ರ
ಮಾಣವಾಗಿಯೂ ಸಿದ್ಧಪಡಿಸಿ ತೋರಿಸಿರುವೆವು.

ಇವನ್ನೆಲ್ಲ ವಾಚಕರು ಸಮಗ್ರವಾಗಿ ಪರಿಶೀಲಿಸುವಲ್ಲಿ ನವೀನದೃ
ಗ್ವಾದಿಗಳು ತಮ್ಮ ದೃಕ್ಪಂಚಾಂಗದ ಸಮರ್ಥನೆಗೆಂದು ಲೇಖನ, ಭಾಷಣಾದಿ
ಗಳಲ್ಲಿ ಪ್ರಚಾರಪಡಿಸುವ ವಚನ, ದೃಷ್ಟಾಂತ, ಪ್ರತಿಪಾದನೆಗಳೇ ಮುಂತಾದ
ಇವರ ಹೇಳಿಕೆಗಳೆಲ್ಲವೂ ಕೇವಲ ಆಭಾಸಿಕವೂ, ವಿಸಂಗತವೂ ಆಗಿರುವ
ಸ್ವಕಪೋಲಕಲ್ಪಿತ ಕಲ್ಪನೆಗಳೇ ಆಗಿರುತ್ತವೆಂದೂ, ಮತ್ತು ಇವರ ನವೀನ
ದೃಕ್ಪಂಚಾಂಗವು ಶ್ರುತಿ-ಸ್ಮೃತ್ಯಾದಿ ಸಕಲ ಶಾಸ್ತ್ರಗಳಿಗೂ, ಪರಂಪರೆಯಿಂದ

ಆಚರಿಸಿಬಂದ ಶಿಷ್ಟಾಚರಣೆಗಳಿಗೂ, ಯಂತ್ರ-ವೇಧಾದಿಗಳ ಮೂಲಕ ಸಂಘ ವಿಸತಕ್ಕ ದೃಕ್ಪ್ರತ್ಯಕ್ಷಕ್ಕೂ ಸಹ ವಿಸಂಗತವಾಗಿರುವ ಮೂಲಕ ಕೇವಲ ಅಶಾಸ್ತ್ರೀಯ, ಅನಾಚಾರ, ಅಪ್ರಮಾಣವೆಂದೂ ಸ್ವತಃ ತಿಳಿದುಬರುವದು. ಮತ್ತು ಶ್ರುತಿ, ಸ್ಮೃತಿ, ಸಿದ್ಧಾಂತಾದಿ ಸಕಲಶಾಸ್ತ್ರಗಳಿಗೂ, ಪರಂಪರೆಯಿಂದ ಬಂದ ಶಿಷ್ಟಸಾಂಪ್ರದಾಯಗಳಿಗೂ, ಗ್ರಹಣಾದಿ ದೃಷ್ಟವಿಷಯಗಳಲ್ಲಿ ದೃಕ್ಪರೀಕ್ಷೆಗೂ ಸಹ ಸಂಮತವಾಗಿರುವ ಶಾಸ್ತ್ರವಿಹಿತಸಿದ್ಧಾಂತಪಂಚಾಂಗವೇ ಶ್ರೌತಸ್ಮಾರ್ತಾದಿ ಸಕಲಕರ್ಮಾನುಷ್ಠಾನಗಳಲ್ಲಿಯೂ ಪರಿಗ್ರಾಹ್ಯವೆಂಬ ನಿರ್ಣಯವು ಆಚಂದ್ರಾರ್ಕ ( ಸ್ಥಿರ ) ವಾಗಿ ನಿಲ್ಲುವುದು.

" ದೃಙ್‌ಮೌಢ್ಯಾಽಸಂಗತಾರ್ಥಾಢ್ಯದುರ್ಲೇಖನತಮಸ್ತ್ವಯಂ ।
ಹೃತ್ವಾಽರ್ಥಂ ಭಾಸಯತ್ಯೇವ ಸ್ಪಷ್ಟಂ ಖಂಡನಭಾಸ್ಕರಃ ॥ "



## ೪. ಧರ್ಮಶಾಸ್ತ್ರಪರಿಶೀಲನೆ.

ದೃಕ್ಪಕ್ಷದಲ್ಲಿ ಪ್ರವರ್ತಿಸುತ್ತಿರುವ ಪಂಡಿತರು ತಮ್ಮ ದೃಕ್ಪಂಚಾಂಗದ ಸಮರ್ಥನೆ ಮಾಡಿಕೊಳ್ಳುವ ಭರದಲ್ಲಿ ತಾವು ಹಿಡಿದ ಹೊಸ ಮಾರ್ಗವು ಧರ್ಮಶಾಸ್ತ್ರಕ್ಕೂ ವಿರುದ್ಧವಾಗುತ್ತದೆಂಬುದನ್ನು ಲಕ್ಷಿಸದೆ, ಯಾರಾದರೂ ಸೂಚಿಸಿದರೂ ಒಪ್ಪಿಕೊಳ್ಳದೆ, ತಮ್ಮ ಪಂಚಾಂಗವು ಶಾಸ್ತ್ರಸಮ್ಮತವೆಂದು ಸಾಧಿಸಲಿಕ್ಕಾಗಿ ಅಲ್ಲಲ್ಲಿ ಹರಿದು ಹಚ್ಚುವ, ಮುಚ್ಚಿಡುವ, ಅರ್ಥಮರ್ಥವಚನಗಳನ್ನು ಎತ್ತಿ ತೋರಿಸುವ ಕುಹಕ ರೀತಿಯನ್ನು ತೋರಿಸುತ್ತಿರುವರು. ಆದುದರಿಂದ ನವೀನ ದೃಕ್ಪಂಚಾಂಗವು ಹೇಗೆ ಧರ್ಮಶಾಸ್ತ್ರಗಳಿಗೆ ವಿರುದ್ಧವಾಗಿರುತ್ತದೆಯೆಂಬುದನ್ನು ಆಸ್ತಿಕಮಹಾಜನರ ಅವಗಾಹನೆಯ ಬಗ್ಗೆ ಇಲ್ಲಿ ಸಂಕ್ಷೇಪವಾಗಿ ತೋರಿಸಿಕೊಡುವೆವು.

೧. ಜಗದ್ವಿಖ್ಯಾತವಿದ್ವಾಂಸರೂ, ಸರ್ವತಂತ್ರಸ್ವತಂತ್ರರೂ ಆದಶ್ರೀ ಮಾಧವಾಚಾರ್ಯರು ತಮ್ಮ ದೃಗ್ಗಣಿತಪ್ರಭೆಯೆಂಬ ಗ್ರಂಥದಲ್ಲಿ— "ಸಾರ್ಧಬಾಣಸಪಾದಾಂಗಘಟೀವೃದ್ಧಿಕ್ಷಯಾನ್ವಿತಾಃ । ಗೃಹೀತಾ ಧರ್ಮಶಾಸ್ತ್ರೇ ಹಿ ತಿಥಯೋ ನಿತ್ಯಕರ್ಮಸು ॥ ಸ್ಮೃತೀನಾಂ ಚ ಪುರಾಣಾನಾಮೀದೃಕ್ತಿಥಿವಶಾತ್ಸದಾ । ನಿರ್ಣಯೋ ಯುಜ್ಯತೇ ನೋ ಚೇತ್ ಸ್ಮೃತ್ಯಾದೀನಾಮಸಂಗತಿಃ ॥ " ತಾತ್ಪರ್ಯ:--ಧರ್ಮಶಾಸ್ತ್ರಗಳಲ್ಲಿ ತಿಥಿಯ ಪರಮವೃದ್ಧಿಯು ೫॥ ಘಟಿಗಳೆಂದೂ, ಪರಮಕ್ಷಯ ೬। ಘಟಿಗಳೆಂದೂ ನಿಯಮವಾಗಿಟ್ಟು

ಕೊಂಡು ಶ್ರಾದ್ಧಾದಿ ಕರ್ಮಕಾಲನಿರ್ಣಯಗಳನ್ನು ಹೇಳಿರುವರು. ಈ ಪ್ರಕಾರ ವಿರುವ ತಿಥಿಗಳಿಂದಲೇ ಶ್ರುತಿ, ಸ್ಮೃತಿ, ಪುರಾಣೋಕ್ತ ಕರ್ಮಕಾಲನಿರ್ಣಯ ವನ್ನು ಮಾಡುವುದಾಗಿದೆ. ಈ ವೃದ್ಧಿಕ್ಷಯಗಳಿಗೆ ವಿರುದ್ಧವಿರುವ ತಿಥ್ಯಾದಿಗಳಿಂದ ಕರ್ಮಕಾಲನಿರ್ಣಯಮಾಡುವುದು ಅಸಂಗತವಾಗುವದು; ಎಂದಿರುವರು. ವಿದ್ಯಾರಣ್ಯಸ್ವಾಮಿಗಳವರ ಈ ವಾಕ್ಯದಂತೆ ೮-೧೦: ಘಟಿ ವೃದ್ಧಿಕ್ಷಯ ಬರುವ ತಿಥಿಯುಳ್ಳ ನವೀನದೃಕ್ಪಂಚಾಂಗವು ಶಾಸ್ತ್ರವಿರುದ್ಧವಾಗಿರುವದು.

೨. ಜ್ಯೋತಿರ್ವಿದಾಭರಣದಲ್ಲಿ:—' ವೃದ್ಧಿಕ್ಷಯೌ ಸ್ತಃ ಪರಮೌ ತಿಥೌ ಸದಾ ವೃದ್ಧಿರ್ಗಾ ರಸಾ ಸಾಂಘ್ರಿರಸಾಶ್ಚ ನಾಡಿಕಾಃ |' ಅಂದರೆ-ಯಾವಾಗಲೂ ತಿಥಿಯ ಪರಮವೃದ್ಧಿಯು (ಅಲ್ಪಾಂಶವನ್ನು ಬಿಟ್ಟು) ೫|| ಘಟಿಗಳು, ಮತ್ತು ಕ್ಷಯವು ೬| ಘಟಿಗಳಾಗಿರುವವು; ಎಂದಿರುವದು. ಕಾಳಿದಾಸರ ಈ ವಚನದಂತೆಯೂ ನವೀನದೃಕ್ಪಂಚಾಂಗವು ಶಾಸ್ತ್ರವಿರುದ್ಧವಾಗಿದೆ.

೩. ಪುರುಷಾರ್ಥಚಿಂತಾಮಣಿಯಲ್ಲಿ— (೧) ಅತಿಶೀಘ್ರಗತೌ ಚತುಃಪಂಚಾಶತಾ ಘಟಿಕಾಭಿರ್ಭವತಿ | ಅತಿಮಂದಗತೌ ಪಂಚಷಷ್ಟ್ಯಾ ಘಟಿಕಾಭಿರ್ಭವತಿ |' ಅಂದರೆ ತಿಥಿಯ ಪರಮಘಟಿಗಳು ವೃದ್ಧಿಯಲ್ಲಿ ೬೫, ಕ್ಷಯದಲ್ಲಿ ೫೪ ಅರ್ಥಾತ್ ಬಾಣವೃದ್ಧಿ ರಸಕ್ಷಯವು ಬರುತ್ತದೆ; ಎಂದಿರುವದು. ಈ ವಚನದಿಂದಲೂ ನವೀನದೃಕ್ಪಂಚಾಂಗವು ಶಾಸ್ತ್ರವಿರುದ್ಧವಾಗಿರುವದು.

(೨) ಇದೇ ಪುರುಷಾರ್ಥಚಿಂತಾಮಣಿಯ ಇನ್ನೊಂದು ಕಡೆಯಲ್ಲಿ ' ಅಷ್ಟಘಟಿಕಾಪರಿಮಿತತಿಥಿವೃದ್ಧೇರಸಂಭಾವಿತತ್ವೇನ ' ಅಂದರೆ ತಿಥಿವೃದ್ಧಿಯು ೮ ಗಳಿಗೆ ಬರುವುದು ಕೇವಲ ಅಸಂಭವವಾಗಿದೆ ಎಂದಿದೆ. ಈ ವಚನವು ಸಹ ತಿಥಿವೃದ್ಧಿಯು ೮ ಘಟಿ ಬರುವ ದೃಕ್ಪಂಚಾಂಗವನ್ನು ಅಸಂಭಾವಿತವೆಂದು ಸ್ಪಷ್ಟಪಡಿಸಿರುವುದರಿಂದ ಪ್ರತ್ಯಕ್ಷವಾಗಿ ಅದನ್ನು ಖಂಡಿಸಿರುವದು.

೪. ತಿಥಿನಿರ್ಣಯಕಾರಿಕೆಯಲ್ಲಿ:— ' ಬಾಣವೃದ್ಧಾ ರಸಕ್ಷೀಣಾ ಗ್ರಾಹ್ಯಾ ನಾನ್ಯಾ ತಿಥಿಃ ಕ್ವಚಿತ್ |' ಅಂದರೆ ೫ ವೃದ್ಧಿ, ೬ ಕ್ಷಯಬರುವ ತಿಥಿಯೇ ಗ್ರಾಹ್ಯವು. ಬೇರೆ ತಿಥಿಯು ಗ್ರಾಹ್ಯವಲ್ಲ; ಎಂಬ ವಚನದಿಂದಲೂ ನವೀನದೃಕ್ಪಂಚಾಂಗವು ಶಾಸ್ತ್ರವಿರುದ್ಧವಾಗಿರುವದೆಂದು ಸ್ಪಷ್ಟವಾಗುವದು.

೫. ನಿರ್ಣಯಸಿಂಧುವಿನಲ್ಲಿ- ' ಅವಿದ್ಧಾನಿ ನಿಷಿದ್ಧೈಸ್ತು ನ ಲಭ್ಯಂತೇ ದಿನಾನಿ ತು | ಮುಹೂರ್ತಪಂಚಭಿರ್ವಿದ್ಧಾ ಗ್ರಾಹ್ಯೈವೈಕಾದಶೀ ತಿಥಿಃ || ಇತ್ಯೃಷ್ಯಶೃಂಗೋಕ್ತೇಷ್ಟ ಮುಹೂರ್ತಪಂಚಕಮರುಣೋದಯಪೂರಭ್ಯಜ್ಞೇಯಂ, ಅನ್ಯಥಾ ಉತ್ತರೇಽಹ್ನಿ ಏಕಾದಶ್ಯಭಾವಾಸಂಭವಾತ್ |' ಅಂದರೆ ೫ ಮುಹೂರ್ತ (೧೦ ಗಳಿಗೆ) ದಶಮೀವೇಧವಿರುವ ಏಕಾದಶಿಯನ್ನಾದರೂ ಪರಿಗ್ರಹಿಸಬಹುದೆಂದು ಹೇಳಿದ್ದು ಏಕಾದಶಿಯೇ ಕ್ಷಯವಾಗಿ (ಉಪರಿಯಾಗಿ) ಬರುವ ಸಂದರ್ಭದಲ್ಲಿ ಆ ೧೦ ಘಟಿಗಳನ್ನು ಅರುಣೋದಯದಿಂದ ಎಣಿಸತ

ಕ್ಕದ್ದೆಂದು ತಿಳಿಯಬೇಕು. ಅಂದರೆ ಸೂರ್ಯೋದಯದಿಂದ ಎಣಿಸಿದರೆ೬ ಗಳಿಗೆಯೆಂತಾಗುವದು. ಇಲ್ಲವಾದರೆ ( ಸೂರ್ಯೋದಯದಿಂದಲೇ ೧೦ ಗಳಿಗೆಯನ್ನು ಹಿಡಿದರೆ) ಮಾರನೆಯ ದಿನ ಏಕಾದಶಿಯು ಇಲ್ಲದಂತಾಗುವದು ಅಸಂಭವವಾದ್ದರಿಂದ (ಅಂದರೆ ಇದ್ದೇ ಇರುವುದರಿಂದ) ವಾಕ್ಯಾರ್ಥವು ಕೂಡುವದಿಲ್ಲವೆಂದು ಈ ವಚನದ ತಾತ್ಪರ್ಯವಿರುತ್ತದೆ. ಇದರಿಂದ ೬ ಘಟಿ ತಿಥಿಕ್ಷಯವೇ ಗ್ರಾಹ್ಯವಾಗಿರುವುದೆಂದೂ, ೧೦ ಘಟಿ ತಿಥಿಕ್ಷಯವು ಬರುವ ದೃಕ್ಪಂಚಾಂಗವು ಶಾಸ್ತ್ರವಿರುದ್ಧವೆಂದೂ ಸಿದ್ಧವಾಗುವದು.

೬. ಜಯಸಿಂಹಕಲ್ಪದ್ರುಮದಲ್ಲಿ— **'ಮುಹೂರ್ತಪಂಚಕವೇಧಃ ಅರುಣೋದಯಮಾರಭ್ಯ ಜ್ಞಾತವ್ಯಃ, ಸೂರ್ಯೋದಯಮಾರಭ್ಯ ಗ್ರಹಣೇ ತು ಉತ್ತರದಿನೇ 'ಪ್ರಾತರ್ಭವತು ವಾ ಮಾ ವಾ' ಇತಿತದ್ವಚನೇ ಏಕಾದಶ್ಯಭಾವಕಥನಂ ನೋಪಪದ್ಯೇತ!** ' ಅಂದರೆ ಐದು ಮುಹೂರ್ತಗಳ ವೇಧವನ್ನು ಅರುಣೋದಯದಿಂದ ಎಣಿಸಬೇಕು. ಸೂರ್ಯೋದಯದಿಂದ ಎಣಿಸಿದರೆ ' ಮರುದಿನ ಏಕಾದಶಿಯು ಇದ್ದರೂ ಇಲ್ಲದಿದ್ದರೂ ' ಎಂಬ ವಚನಾರ್ಥದಂತೆ ಮರುದಿನ ಏಕಾದಶಿಯು ಇಲ್ಲದಂತೆ ಆಗುವದೇ ಇಲ್ಲ; ಎಂದಿರುವದು. ಮೇಲಿನ ನಿರ್ಣಯಸಿಂಧುವಿನ ವಚನದಂತೆಯೇ ಇದರ ತಾತ್ಪರ್ಯವೂ ಇರುವುದರಿಂದ ಈ ವಚನದಿಂದಲೂ ಸಹ ನವೀನದೃಕ್ಪಂಚಾಂಗವುಶಾಸ್ತ್ರವಿರುದ್ಧವಾಗಿದೆ.

೭. ಕಾಲಾರ್ಕದಲ್ಲಿ— **'ಮಾಂದ್ಯೈಕಕರ್ಮಸಂಸಿದ್ಧವ್ಯರ್ಕೇಂದೂತ್ಪಾದಿತಾ ತಿಥಿಃ। ಶ್ರಾದ್ಧಾದಿಷು ಪರಿಗ್ರಾಹ್ಯಾ ಗ್ರಹಣಾದೌ ತು ಬೀಜಯುಕ್॥'** ಅಂದರೆ ಮಂದಸಂಸ್ಕಾರಮಾತ್ರಮಾಡಿದ ಸೂರ್ಯ-ಚಂದ್ರಸ್ಫುಟಾಂತರದಿಂದ ಸಾಧಿಸಿದ ತಿಥಿಯೇ ಶ್ರಾದ್ಧಾದಿಕರ್ಮಗಳಲ್ಲಿ ಗ್ರಾಹ್ಯವಾಗಿರುವದು. ಇತರ ಸಂಸ್ಕಾರಗಳನ್ನು ಗ್ರಹಣಾದಿಗಳಲ್ಲಿ ಮಾಡತಕ್ಕದ್ದು; ಎಂದಿದೆ. ಇದರಿಂದಲೂ ಸಹ ಗ್ರಹಣಾದಿಗಳಿಗೆ ಉಚಿತವಾದ ಮಂದೇತರ ತಿಥಿ-ಚ್ಯುತ್ಯಾದಿ ಸಂಸ್ಕಾರಗಳನ್ನು ನಿತ್ಯತಿಥಿಯಲ್ಲಿಯೂ ಮಾಡಿರುವ ದೃಕ್ಪಂಚಾಂಗವು ಶಾಸ್ತ್ರವಿರುದ್ಧವಾಗಿರುವದು.

೮. ತಿಥಿಕೌಸ್ತುಭದಲ್ಲಿ-**'ಸ್ವದೇಶೋಚಿತನಿರ್ಬೀಜಗ್ರಹೈಃ ಪಂಚಾಂಗಸಾಧನಂ। ಸಬೀಜೈರ್ಗ್ರಹಣಾದೀನಾಂ ಪುಣ್ಯಕರ್ಮಣಿ ಶಸ್ಯತೇ॥'** ಅಂದರೆ— ಸ್ವದೇಶೋಚಿತ (ದೇಶಾಂತರ,ಚರ) ಸಂಸ್ಕಾರಗಳ ಹೊರತು ಬೀಜಸಂಸ್ಕಾರವನ್ನೇನೂ ಮಾಡದ ಗ್ರಹರಿಂದಲೇ ತಿಥ್ಯಾದಿ ಪಂಚಾಂಗವನ್ನು ಸಾಧಿಸಬೇಕು. ಗ್ರಹಣಾದಿ ಪುಣ್ಯಕಾಲಸಾಧನೆಯಲ್ಲಿ ಮಾತ್ರ ಬೀಜಸಂಸ್ಕಾರವು ಯುಕ್ತವಾಗುವುದು; ಎಂದಿದೆ. ಇದರಿಂದಲೂ ಸಹ ಗ್ರಹಣೋಚಿತ ಬೀಜಸಂಸ್ಕಾರಗಳನ್ನು ತಿಥ್ಯಾದಿಗಳಲ್ಲಿ ಮಾಡಿರುವ ನವೀನದೃಕ್ಪಂಚಾಂಗವು ಶಾಸ್ತ್ರವಿರುದ್ಧವಾಗಿರುತ್ತದೆ-

೯. ಸ್ಮೃತಿಸಾರಸಮುಚ್ಚಯದಲ್ಲಿ— **'ಸೂರ್ಯಸಿದ್ಧಾಂತಪಂಚಾಂ**

ಗಂ ವಿಲೋಕ್ಯೈವ ಪ್ರವರ್ತಯೇತ್ । ಪ್ರಮಾಣಂ ತದಿತಿ ಜ್ಞೇಯಮನ್ಯಥಾ ವ್ಯಾಕುಲಂ ಭವೇತ್ ॥' ಅಂದರೆ– ಸೂರ್ಯಸಿದ್ಧಾಂತಪಂಚಾಂಗವೇ ಸಕಲ ಕರ್ಮಾಚರಣೆಯಲ್ಲಿಯೂ ಪ್ರಮಾಣವಾಗಿರುವದು. ಇಲ್ಲವಾದರೆ ಕಾಲನಿರ್ಣಯದಲ್ಲಿ ವ್ಯಾಕುಲತೆಯುಂಟಾಗುವದು; ಎಂದಿದೆ. ಇದರಿಂದಲೂ ಸಹ ಸೂರ್ಯಸಿದ್ಧಾಂತದ ವಿರುದ್ಧವಾದ ತಿಥ್ಯಾದಿಗಳನ್ನು ಸಾಧಿಸುವ ನವೀನ ದೃಕ್ಪಂಚಾಂಗವು ಶಾಸ್ತ್ರವಿರುದ್ಧವಾಗಿರುವದು.

ಹೀಗೆ ಇನ್ನೆಷ್ಟೆಂದು ಉದಾಹರಿಸಲಿ ! ಶ್ರುತಿ, ಸ್ಮೃತಿ,ಪುರಾಣಾದಿ ಯಾವುದೊಂದು ಆರ್ಷಗ್ರಂಥದಲ್ಲಾಗಲಿ, ಯಾವುದೊಂದು ಧರ್ಮನಿಬಂಧಗಳಲ್ಲಾಗಲಿ ೮–೧೦ ವೃದ್ಧಿಕ್ಷಯದ ತಿಥಿಯು ಕರ್ಮಾರ್ಹವೆಂದು ಹೇಳಿದ್ದಿಲ್ಲ. ಇಷ್ಟೇ ಅಲ್ಲ; ಅದು ಕೇವಲ ಅಸಂಭಾವಿತ, ಅಯುಕ್ತ, ವರ್ಜ್ಯವೆಂತಲೇ ಸ್ಪಷ್ಟವಾಗಿ ಅವೆಲ್ಲ ಉದ್ಘೋಷಿಸುತ್ತಿರುವಾಗ ಹಾಗೆ ೮-೧೦ ವೃದ್ಧಿ-ಕ್ಷಯಬರುವ ನವೀನದೃಕ್ಪಂಚಾಂಗದ ತಿಥ್ಯಾದಿಗಳನ್ನು ಧರ್ಮಾಭಿಮಾನಿಗಳಾದ ಆಸ್ತಿಕರು ಧರ್ಮ-ಕರ್ಮಗಳಲ್ಲಿ ಪರಿಗ್ರಹಿಸುವದಾದರೂ ಹೇಗೆ ? ಕಣ್ಣಿದ್ದೂ ಕುರುಡರಾಗಿ, ಕಿವಿಯಿದ್ದೂ ಕಿವುಡರಾಗಲಿಕ್ಕೆ ಯಾರೂ ಅಪೇಕ್ಷಿಸಲಿಕ್ಕಿಲ್ಲ. ಆದುದರಿಂದ ನವೀನದೃಕ್ಪಂಚಾಂಗದ ತಿಥ್ಯಾದಿಗಳು ಆಸ್ತಿಕಧರ್ಮಾಭಿಮಾನಿಗಳಿಗೆ ಎಂದಿಗೂ ಪರಿಗ್ರಾಹ್ಯವಾಗತಕ್ಕದ್ದಲ್ಲ. ಕೇವಲ ಅಗ್ರಾಹ್ಯ, ಅಯುಕ್ತ, ಸರ್ವಥಾ ತ್ಯಾಜ್ಯವಾಗಿರುತ್ತದೆ.

ಈವರೆಗೆ ನಾವು ಉದಾಹರಿಸಿದ ಹಲವು ಶಾಸ್ತ್ರವಚನಗಳಿಂದ ದೃಕ್ಪಂಚಾಂಗವು ಕರ್ಮಾರ್ಹವಲ್ಲವೆಂಬುದು ಸ್ವಲ್ಪಮಟ್ಟಿಗೆ ವಿಚಾರವುಳ್ಳ ಯಾರಿಗಾದರೂ ತಿಳಿಯದಿರಲಿಕ್ಕಿಲ್ಲ. ಇನ್ನು ದೃಕ್ಪಂಚಾಂಗವನ್ನು ಪರಿಗ್ರಹಿಸುವಲ್ಲಿ ಧರ್ಮಶಾಸ್ತ್ರರೀತ್ಯಾ ಹಲವು ಸಂದರ್ಭಗಳಲ್ಲಿ ನವೀನ ದೃಕ್ಸಿದ್ಧತಿಥ್ಯಾದಿಗಳಿಂದ ಹೇಗೆ ಕರ್ಮಕಾಲವನ್ನು ನಿರ್ಣಯಿಸಲಿಕ್ಕೆ ಬರುವದಿಲ್ಲವೆಂಬುದು ವಾಚಕರಿಗೆ ಸ್ಪಷ್ಟವಾಗಿ ತಿಳಿಯುವ ಬಗ್ಗೆ ಅಂಥ ಕೆಲವು ಸಂದರ್ಭಗಳನ್ನು ದೃಷ್ಟಾಂತಪೂರ್ವಕವಾಗಿ ಈ ಕೆಳಗೆ ತೋರಿಸುವೆವು.

ಕರ್ಮಕಾಲನಿರ್ಣಯದ ವಿಚಾರಕ್ಕೆ ತೊಡಗುವ ಮುಂಚೆ ಕೆಲವು ಮಟ್ಟಿಗೆ ಧರ್ಮಶಾಸ್ತ್ರದ ಪ್ರಕ್ರಿಯೆಗಳನ್ನು ತಿಳಿದಿರಬೇಕಾಗುತ್ತದೆ. ಆದುದರಿಂದ ಆ ಭಾಗದಲ್ಲಿ ಸ್ವಲ್ಪಮಟ್ಟಿಗೆ ಇಲ್ಲಿ ಸೂಚಿಸತಕ್ಕದ್ದಿದೆ. ಏನಂದರೆ:— ಒಂದು ಮುಹೂರ್ತಕ್ಕೆ ಸಾಮಾನ್ಯವಾಗಿ ೨ ಗಳಿಗೆಯೆನ್ನುವುದಾದರೂ ಕರ್ಮಕಾಲನಿರ್ಣಯಗಳಲ್ಲೆಲ್ಲ 'ಅಹ್ನಃ ಪಂಚದಶೋ ಭಾಗೋ ಮುಹೂರ್ತ ಇತಿ ಕಥ್ಯತೇ ' ಎಂಬಂತೆ ಆಯಾ ದಿನದ ದಿವಾಮಾನದ ೧/೧೫ ಅಂಶಕ್ಕೆ ಮುಹೂರ್ತವೆಂದು ಪರಿಗಣಿಸುವದು ಶಾಸ್ತ್ರಪ್ರಸಿದ್ಧವಾಗಿದೆ. ಆ ಪೈಕಿ ೮ ನೇ ಮುಹೂರ್ತಕ್ಕೆ ಕುತಪವೆಂದು ಹೆಸರು. ಇದಲ್ಲದೆ ದಿವಾಮಾನವನ್ನು ೫ ಭಾಗಮಾಡಿದ ಅಂದರೆ ೩ ಮುಹೂರ್ತದ ಒಂದೊಂದು ಭಾಗವು ಸೂರ್ಯೋದಯಾದಿಯಾ

ಗಿ ಕ್ರಮದಿಂದ ಪ್ರಾತಃ, ಸಂಗವ, ಮಧ್ಯಾಹ್ನ, ಅಪರಾಹ್ಣ, ಸಾಯಾಹ್ನಗಳೆಂದು ಪ್ರತ್ಯೇಕಿಸಲ್ಪಟ್ಟಿದೆ. ಮತ್ತು '**ಯಥೋಕ್ತೇಷು ಪಂಚಸು ಕಾಲೇಷು ಯಾನಿ ವಿಹಿತಾನಿ ಕರ್ಮಾಣಿ, ತಾನಿ ದೈವಪಿತ್ರ್ಯರೂಪೇಣ ರಾಶಿದ್ವಯಂ ಕೃತ್ವಾ ತಯೋರ್ಗೌಣಕಾಲಾಭ್ಯನುಜ್ಞಾನಾಯ ದ್ವೇಧಾ ವಿಭಾಗೋ ದರ್ಶಿತಃ** |' ಎಂದಿರುವಂತೆ ಪ್ರಾತರಾದಿ ಪ್ರತಿಯೊಂದು ಕಾಲದಲ್ಲಿ ಬೇರೆ-ಬೇರೆಯಾಗಿ ಆಚರಿಸತಕ್ಕದ್ದಾಗಿ ಹೇಳಿರುವ ಶಾಸ್ತ್ರೋಕ್ತವಾದ ಕರ್ಮಗಳನ್ನೆಲ್ಲ ದೇವಕಾರ್ಯ, ಪಿತೃಕಾರ್ಯ ಎಂದು ಎರಡು ವರ್ಗಮಾಡಿ ಆಯಾ ಕರ್ಮಗಳಿಗೆ ಉಕ್ತವಾದ ತಿಥಿಯು ಮುಖ್ಯಕಾಲದಲ್ಲಿ ಸಿಗದಿದ್ದರೆ ಗೌಣಕಾಲದಲ್ಲಾದರೂ ಸಿಗಬೇಕಾಗುವುದರಿಂದ ಅಂಥ ಗೌಣಕಾಲವನ್ನು ತಿಳಿಸಲಿಕ್ಕಾಗಿ ದಿನಮಾನವನ್ನು ೨ ವಿಭಾಗಮಾಡಿದೆ. ಅಂದರೆ ಮಧ್ಯಾಹ್ನದ ವರೆಗೆ(ಪೂರ್ವಾಹ್ಣದಲ್ಲಿ) ಇರುವ ತಿಥಿಯು ದೇವಕಾರ್ಯಕ್ಕೆಂದೂ, ಮಧ್ಯಾಹ್ನದ ನಂತರ ಸೂರ್ಯಾಸ್ತದವರೆಗೆ (ಅಪರಾಹ್ಣದಲ್ಲಿ) ಇರುವ ತಿಥಿಯು ಪಿತೃಕಾರ್ಯಕ್ಕೆಂದೂ ಸಾಮಾನ್ಯವಾಗಿ ಗೌಣಕಾಲವನ್ನು ಹೇಳಿದೆ.

ಹೀಗೆ ದೈವಿಕ, ಪೈತೃಕಗಳೆಂದು ಬೇರೆ ಬೇರೆಯಾಗಿರುವ ಈ ೨ ಕಾಲಗಳಲ್ಲಿ ಸಂಪೂರ್ಣವಾಗಿ ತಿಥಿಯ ವ್ಯಾಪ್ತಿಯು ಸಿಗದಿದ್ದರೆ '**ಉದಿತೇ ದೈವತಂ ಭಾನೌ ಪಿತ್ರ್ಯಂ ಚಾಸ್ತಮಿತೇ ರವೌ | ದ್ವಿಮುಹೂರ್ತಂ ತ್ರಿರಹ್ನಶ್ಚ ಸಾ ತಿಥಿರ್ಹವ್ಯಕವ್ಯಯೋಃ ||**' ಎಂಬಂತೆ ಸೂರ್ಯೋದಯದ ನಂತರ ೨ ಮುಹೂರ್ತದವರೆಗಾದರೂ ಸಂಪೂರ್ಣ ಇರತಕ್ಕ ತಿಥಿಯು ಶಾಸ್ತ್ರದೃಷ್ಟಿಯಿಂದ ಮಧ್ಯಾಹ್ನದವರೆಗೂ ವ್ಯಾಪಿಸಿದ್ದೆಂದು ತಿಳಿದು ದೈವಕಾರ್ಯವನ್ನು ಮಾಡತಕ್ಕದ್ದೆಂತಲೂ, ಸೂರ್ಯಾಸ್ತಕ್ಕಿಂತ ಮುಂಚೆ ಮೂರು ಮುಹೂರ್ತಗಳಾದರೂ ಪೂರ್ಣವಾಗಿ ಇರತಕ್ಕ ತಿಥಿಯು ಶಾಸ್ತ್ರದೃಷ್ಟಿಯಿಂದ ಸಂಪೂರ್ಣವಾಗಿ ಅಪರಾಹ್ಣವನ್ನು ವ್ಯಾಪಿಸಿದ್ದೆಂದು ತಿಳಿದು ಪಿತೃಕಾರ್ಯವನ್ನು ಮಾಡತಕ್ಕದ್ದೆಂತಲೂ ಶಾಸ್ತ್ರನಿರ್ಣಯವಿರುವದು. ಇದಕ್ಕೆ ಸಾಕಲ್ಯವಚನವೆಂದು ಹೆಸರು. ಇನ್ನು ಉದಯಾಸ್ತಕಾಲಗಳಲ್ಲಿ ಸ್ವಲ್ಪಮಟ್ಟಿಗಾದರೂ ಇದ್ದ ತಿಥಿಯು ಕ್ರಮದಿಂದ ದೈವ-ಪಿತೃಕಾರ್ಯಗಳಿಗೆ ಯುಕ್ತವಾಗಿರುವುದೆಂದು ಹೇಳುವ ವಚನಗಳೆಲ್ಲ **ವೈಶ್ವಾನರಾಧಿಕರಣನ್ಯಾಯ**ದಿಂದ ನಾವು ಮೇಲೆ ಹೇಳಿದಂತೆ ಉದಯಕಾಲದ ೨ ಮುಹೂರ್ತಗಳ, ಮತ್ತು ಅಸ್ತಮಯಕಾಲದ ೩ ಮುಹೂರ್ತಗಳ ಪ್ರಶಂಸೆಗಾಗಿ ಹೇಳಿರುವುದಲ್ಲದೆ ಸ್ವತಂತ್ರ ತಾತ್ಪರ್ಯದಿಂದಲ್ಲವೆಂದು ಸಕಲಶಾಸ್ತ್ರಗಳ ಏಕಮುಖವಾದ ನಿರ್ಣಯವಾಗಿದೆ. ಇದು ಸಕಲ ದೈವ, ಪಿತೃಕರ್ಮಗಳಿಗೂ ಸಾಮಾನ್ಯವಾದ ನಿಯಮವಾಗಿರುವದು.

ಈ ಪ್ರಕಾರ ಆಯಾ ದಿನಮಾನಗಳಿಗನುಸರಿಸಿ ವಿಭಾಗಿಸಲ್ಪಟ್ಟ ಮುಹೂರ್ತ ಮತ್ತು ಮುಂದೆ ಹೇಳುವ ಶ್ರಾದ್ಧತಿಥಿನಿರ್ಣಯಕ್ಕೆ ಬೇಕಾದ

ತ್ರಿಮುಹೂರ್ತಾದಿಕಾಲಗಳ ಪರಿಮಿತಿಯನ್ನು ಸುಲಭವಾಗಿ ತಿಳಿದುಕೊಳ್ಳುವದ ಕ್ಕಾಗಿ ಈ ಮುಂದಿನ ಕೋಷ್ಟಕದಲ್ಲಿ ಅವನ್ನು ವಿವರಿಸಿದೆ.

**ಶ್ರಾದ್ಧದಿನನಿರ್ಣಯೋಪಯೋಗಿ ಕಾಲವಿಭಾಗಪ್ರದರ್ಶಕ ಕೋಷ್ಟಕವು.**

| ದಿವಾಮಾನ | ಘ. ವಿ. ಘ. ೩೦ — ೦ | ಘ. ವಿ. ೨೯ — ೦ | ಘ. ವಿ. ೨೮ — ೦ | ಘ. ವಿ. ೨೭ — ೦ | ಘ. ವಿ. ೨೫ — ೦ |
|---|---|---|---|---|---|
| ಮುಹೂರ್ತದ ಪರಿಮಾಣ | ೨ — ೦ | ೧—೫೬ | ೧—೫೨ | ೧--೪೮ | ೧—೪೦ |
| ತ್ರಿಮುಹೂರ್ತ | ೬ — ೦ | ೫---೪೮ | ೫—೩೬ | ೫---೨೪ | ೫ — ೦ |
| ಕುತಪಕಾಲ | ೧೪-೦ ರಿಂದ ೧೬-೦ ರ ವರೆಗೆ | ೧೩-೩೨ ರಿಂದ ೧೫-೨೮ ರ ವರೆಗೆ | ೧೩-೪ ರಿಂದ ೧೪-೫೬ ರ ವರೆಗೆ | ೧೨-೩೬ ರಿಂದ ೧೪-೨೪ ರ ವರೆಗೆ | ೧೧-೪೦ ರಿಂದ ೧೩-೨೦ ರ ವರೆಗೆ |
| ಅಪರಾಹ್ಣಾರಂಭ | ೧೮---೦ | ೧೭---೨೪ | ೧೬—೪೮ | ೧೬---೧೨ | ೧೫---೦ |
| ಸಾಯಾಹ್ನಾರಂಭ | ೨೪---೦ | ೨೩---೧೨ | ೨೨---೨೪ | ೨೧—೩೬ | ೨೦—೦ |

ಮುಂದಿನ ನಿರ್ಣಯಾಂಶವನ್ನು ವಿಚಾರಿಸುವ ಮುಂಚೆ ಇವಿಷ್ಟು ವಿಷಯಗಳನ್ನು ತಿಳಿದಿರಬೇಕೆಂದು ಇಲ್ಲಿ ವಿವರಿಸಿರುವೆವು.



## ಸಾಂವತ್ಸರಿಕಾದಿ ಪಾರ್ವಣಶ್ರಾದ್ಧನಿರ್ಣಯದ ವಿಚಾರ.

'ಅಪರಾಹ್ಣಃ ಪಿತೄಣಾಂ' 'ಪಾರ್ವಣೇ ಚಾಪರಾಹ್ಣಿಕೀ' ಈ ಮುಂತಾದ ಶ್ರುತಿ, ಸ್ಮೃತ್ಯಾದಿ ಪ್ರಮಾಣಗಳಿಂದ ಶ್ರಾದ್ಧತಿಥಿಯು ಅಪರಾಹ್ಣ ದಲ್ಲಿ ಅಂದರೆ ಹಿಂದೆ ವಿವರಿಸಿರುವಂತೆ ದಿವಾಮಾನದ ೫ ಭಾಗಗಳಪೈಕಿ ೪ನೇ ಭಾಗದಲ್ಲಿ ಸಿಗುವುದು ಮುಖ್ಯವಾಗಿದೆ. ಹೀಗೆ ಅಪರಾಹ್ಣವ್ಯಾಪ್ತಿಯು ಸಿಗದಿದ್ದ ರೆ ವೈದ್ಯನಾಥೀಯಶ್ರಾದ್ಧಕಾಂಡದಲ್ಲಿ 'ಯಥಾಕಾಮಂ ಉದಯೇ ದ್ವಿಮು ಹೂರ್ತಾ ತಿಥಿಃ ದೈವೇ ಕರ್ಮಣಿ ಗ್ರಾಹ್ಯಾ । ಸಾಯಂ ತ್ರಿಮುಹೂರ್ತಾ ಕವ್ಯೇ ಗ್ರಾಹ್ಯೇತ್ಯರ್ಥಃ । ಏವಂ ಚ ಸತಿ 'ದರ್ಶಂ ಚ ಪೌರ್ಣಮಾಸಂ ಚ ಪಿತುಃ ಸಾಂವತ್ಸರಂ ದಿನಂ ॥ ಪೂರ್ವವಿದ್ಧಮಕುರ್ವಾಣೋ ನರಕಂ ಪ್ರತಿಪ ದ್ಯತೇ ॥' ಇತಿ ನಾರದವಚನಂ, 'ಯಸ್ಯಾಮಸ್ತಂ ರವಿರ್ಯಾತಿ' ಇತ್ಯಾದಿ

ಪೂರ್ವೋಕ್ತವಾಗ್ವಾದವಚನಜಾತಂ ಚ ಅಪರಾಹ್ಣದ್ವಯಸ್ಪರ್ಶಾಭಾವೇ ಸಾಯಂ ತ್ರಿಮುಹೂರ್ತತಿಥಿಗ್ರಹಣಪರಂ ದ್ರಷ್ಟವ್ಯಂ । ತ್ರಿಮುಹೂರ್ತವ್ಯಾಪಿತ್ವಾಭಾವೇ ತು ಗೋಭಿಲಃ— 'ತ್ರಿಮುಹೂರ್ತಾ ನ ಚೇದ್ಗ್ರಾಹ್ಯಾ ಪರೈವ ಕುತಪೇ ಹಿ ಸಾ । ಕುರ್ವೀತ ಕುತಪೇ ಶ್ರಾದ್ಧಂ ಸಾಯಾಹ್ನವ್ಯಾಪಿನೀ ನ ಚೇತ್ ॥ "ಇತಿ. ಅಂದರೆ ಮೃತತಿಥಿಯು ಎರಡು ದಿನಗಳಲ್ಲಿಯೂ ಅಪರಾಹ್ಣದಲ್ಲಿ ಸ್ವಲ್ಪವೂ ಸಿಗದಿದ್ದಾಗ ಮುಂಚಿನ ದಿನ ಸಾಯಾಹ್ನದಲ್ಲಿ ಸಂಪೂರ್ಣವಾಗಿ ೩ ಮುಹೂರ್ತಗಳ ವ್ಯಾಪ್ತಿಯು ಸಿಕ್ಕರೆ ಮುಂಚಿನ ದಿನವೇ ಶ್ರಾದ್ಧ ಮಾಡಬೇಕು. ೩ ಮುಹೂರ್ತಗಳ ವ್ಯಾಪ್ತಿಯು ಮುಂಚಿನ ದಿನ ಸಾಯಾಹ್ನದಲ್ಲಿ ಸಿಗದಿದ್ದರೆ ಮರುದಿನ (ಪಾರ್ವಣಶ್ರಾದ್ಧಕ್ಕೆ ಅತ್ಯಂತಗೌಣವಾಗಿ ಹೇಳಲ್ಪಟ್ಟ) ಕುತಪಕಾಲವ್ಯಾಪ್ತಿಯಾದರೂ ಸಿಕ್ಕಿಯೇ ಸಿಕ್ಕುವುದರಿಂದ ಮರುದಿನವಲ್ಲಿಯೇ ಶ್ರಾದ್ಧ ಮಾಡಬೇಕು. ಪೂರ್ವವಿದ್ಧತಿಥಿಯಾಗಲಿ, ಸೂರ್ಯಾಸ್ತಕಾಲದ ತಿಥಿಯಾಗಲಿ ಗ್ರಾಹ್ಯವೆಂದಿರುವ ವಚನಗಳೆಲ್ಲವೂ ಎರಡೂ ದಿನಗಳಲ್ಲಿ ಅಪರಾಹ್ಣವ್ಯಾಪ್ತಿಯು ಸಿಗದಿದ್ದಾಗ ಮುಂಚಿನ ದಿನ ಸಾಯಾಹ್ನ ೩ ಮುಹೂರ್ತವಿರುವ ತಿಥಿಯನ್ನು ಸ್ವೀಕರಿಸುವಬಗ್ಗೆ ಹೇಳಿದ್ದೆಂದು ತಿಳಿಯಬೇಕು. ಅದೂ ಸಿಗದಿದ್ದರೆ ಮರುದಿನ ಕುತಪಕಾಲಕ್ವಾದರೂ ಸಿಕ್ಕಿಯೇ ಸಿಗುವುದರಿಂದ ಮರುದಿನವೇ ಶ್ರಾದ್ಧ ಮಾಡಬೇಕೆಂದು ಗೋಭಿಲ ಮಹರ್ಷಿಗಳು ಹೇಳಿರುವರು;" ಎಂದು ನಿರ್ಣಯಿಸಿ ಈ ಎಲ್ಲ ನಿರ್ಣಯಗಳ ಒಟ್ಟು ಅರ್ಥವನ್ನೇ ಸಂಗ್ರಹಿಸಿರುವ 'ಸಾಯಂತನ್ಯಪರತ್ರ' ಎಂಬ ಶ್ಲೋಕವನ್ನೇ ಉದಾಹರಿಸಿರುವರು.

ಇದರಂತೆ ನಿರ್ಣಯಸಿಂಧುವಿನಲ್ಲಿಯೂ ಸಹ 'ಪಾರ್ವಣಂ ತ್ವಪರಾಹ್ಣೇ ಕಾರ್ಯಂ .... ದಿನದ್ವಯೇ .... ತದಸ್ಪರ್ಶೇ ಪೂರ್ವೈವ ॥ದ್ವ್ಯಹೇಽಪ್ಯವ್ಯಾಪಿನೀ ಚೇತ್ಸ್ಯಾನ್ಮೃತಾಹಸ್ಯ ಚ ಯಾ ತಿಥಿಃ । ಪೂರ್ವವಿದ್ಧಾ ಪ್ರಕರ್ತವ್ಯಾ ತ್ರಿಮುಹೂರ್ತಾ ಭವೇದ್ಯದಿ ॥ ಇತಿ ಸುಮಂತೋಕ್ತೇಃ, ವೃದ್ಧಮನುಃ 'ನ ದ್ವ್ಯಹವ್ಯಾಪಿನೀ ಚೇತ್ಸ್ಯಾನ್ಮೃತಾಹಸ್ಯ ಚ ಯಾ ತಿಥಿಃ । ಪೂರ್ವವಿದ್ಧೈವ ಕರ್ತವ್ಯಾ ತ್ರಿಮುಹೂರ್ತಾ ಚ ಯಾ ಭವೇತ್ ॥' ಪೂರ್ವೇದ್ಯುಸ್ಸಾಯಂ ತ್ರಿಮುಹೂರ್ತಾಭಾವೇ ತು ಪರೈವ 'ತ್ರಿಮುಹೂರ್ತಾ ನ ಚೇದ್ಗ್ರಾಹ್ಯಾ ಪರೈವ ಕುತಪೇ ಹಿ ಸಾ ।' ಇತಿ ಗೋಭಿಲೋಕ್ತೇಃ । ಅಂದರೆ ಮೃತತಿಥಿಯು ಪೂರ್ವದಿನ ಸಾಯಾಹ್ನದಲ್ಲಿ ತ್ರಿಮುಹೂರ್ತ ವ್ಯಾಪ್ತಿಯಿಲ್ಲದಿದ್ದರೆ ಮರುದಿನ ಕುತಪಕಾಲದಲ್ಲಿ ಅದು ಇದ್ದೇ ಇರುವುದರಿಂದ ಪರದಿನವೇ ಶ್ರಾದ್ಧ ಮಾಡಬೇಕೆಂದು ಹೇಳಿದ್ದು, ಇದರ ಸಮುದಿತಾರ್ಥಕ್ಕಾಗಿ ಮುಂದಿನ 'ಸಾಯಂತನ್ಯಪರತ್ರ' ಎಂಬಶ್ಲೋಕವನ್ನುದಾಹರಿಸಿರುತ್ತದೆ. ಶ್ಲೋಕ— 'ಸಾಯಂತನ್ಯಪರತ್ರ ಚೇನ್ಮೃತತಿಥಿಃ ಸೈವಾಬ್ದಿಕೇ ಮಾಸಿಕೇ । ಗ್ರಾಹ್ಯಾ ಸಾ ದ್ವ್ಯಪರಾಹ್ಣಯೋರ್ಯದಿ ತದಾ ಯತ್ರಾಧಿಕಾ ಸಾ ಮತಾ॥ ತುಲ್ಯಾ ಚೇದುಭಯಾಪರಾಹ್ಣಸಮಯೇ ಪೂರ್ವಾ ನ ಚೇತ್ತು ದ್ವಯೇ । ಪೂರ್ವೈವ ತ್ರಿಮುಹೂರ್ತಗಾಽಸ್ತ

**ಸಮಯೇ ನೋ ಚೇತ್ಪರೈವೋದಿತಾ** * ॥ ” ಹೀಗೆ ನಿರ್ಣಯಿಸಲ್ಪಟ್ಟಿರುವ ಧರ್ಮಶಾಸ್ತ್ರನಿರ್ಣಯದ ಪ್ರಕಾರ ಶ್ರಾದ್ಧಮಾಡುವುದಕ್ಕೆ ಅಷ್ಟವೃದ್ಧಿ–ದಶಕ್ಷಯಬರುವ ನವೀನದೃಕ್ಪಂಚಾಂಗದ ತಿಥಿಗಳು ತುಂಬಾ ಬಾಧಕವಾಗಿರುವವು. (ಹಿಂದೆ ಕೊಟ್ಟಿರುವ ಕಾಲವಿಭಾಗಪ್ರದರ್ಶಕ ಕೋಷ್ಟಕವನ್ನು ಇಲ್ಲಿ ನೋಡಿಕೊಳ್ಳಬೇಕು.) ಹೇಗಂದರೆ:— ದಿವಾಮಾನವು ೨೮ ಗಳಿಗೆಯಿರುವಾಗ ಶ್ರಾದ್ಧ ಮಾಡುವ ಪ್ರಸಂಗದಲ್ಲಿ ಶ್ರಾದ್ಧತಿಥಿಯು ೧೨-೪೫ ಇದ್ದು ಮುಂಚಿನ ದಿವಸದಲ್ಲಿ ಪೂರ್ವತಿಥಿಯು ೨೨-೩೦ ಇರುವಾಗ ದಿವಾಘಟಿ ೧೬–೪೮ ರಿಂದ ೨೨-೨೪ ರವರೆಗೆ ಮಾತ್ರ ಅಪರಾಹ್ಣಕಾಲವಿರುವುದರಿಂದ ಎರಡೂ ದಿನಗಳಲ್ಲಿಯೂ ಅಪರಾಹ್ಣದಲ್ಲಿ ಶ್ರಾದ್ಧತಿಥಿಯಿಲ್ಲದೆ ಮುಂಚಿನ ದಿನ ಸಾಯಾಹ್ನದಲ್ಲಿಯೂ ಸಂಪೂರ್ಣವಾಗಿ ೩ ಮುಹೂರ್ತಗಳು ಸಿಗದೆ ಪರದಿನ ಕುತಪಕಾಲಕ್ಕೂ ಶ್ರಾದ್ಧತಿಥಿಯು ಸಿಕ್ಕದೆ ಹೋಗುವುದರಿಂದ ಮೇಲೆ ನಿರ್ಣಯಿಸಿರುವ ಶಾಸ್ತ್ರನಿರ್ಣಯದಂತೆ ಸಾಂವತ್ಸರಿಕಶ್ರಾದ್ಧಮಾಡತಕ್ಕ ದಿನವೇ ಸಿಗದಂತಾಗಿ ಲೋಪಪ್ರಸಂಗವೇ ಉಂಟಾಗುವುದು. ಇಷ್ಟಾಗಿಯೂ ‘ **ಸಾಯಂತನ್ಯಪರತ್ರ** ’ ಎಂಬ ಶ್ಲೋಕಕ್ಕೆ ಕಲ್ಪಿತಾರ್ಥವನ್ನು ನಿರ್ಮಿಸಿಕೊಂಡು ‘ **ಪರೈವೋಚಿತಾ** ’ ಎಂಬಿಷ್ಟರಿಂದಲೇ ( ಪೂರ್ವಾಪರ ವಚನಗಳ ತಾತ್ಪರ್ಯವನ್ನು ಗ್ರಹಿಸದೆ ) ಪರದಿನದಲ್ಲಿ ಶ್ರಾದ್ಧ ಮಾಡಹೋದರೆ ಪಿತೃಕಾರ್ಯ (ಪಾರ್ವಣಶ್ರಾದ್ಧ) ಕ್ಕೆ ಅತ್ಯಂತ ಗೌಣಕಾಲವಾದ ದ್ವಿಧಾ (೨) ವಿಭಾಗಪಕ್ಷದ ಅಪರಾಹ್ಣ (ಕುತಪದ ಅಪರಾರ್ಧ) ವೂ ಸಿಗದೆ ದೇವ–ಪಿತೃಕಾರ್ಯಗಳನ್ನು ಏಕಕಾಲದಲ್ಲಿ ಅಂದರೆ ಪೂರ್ವಾಹ್ಣದಲ್ಲಿಯೇ ಮಾಡುವ ಪ್ರಸಂಗವೊದಗಿ ಶಾಸ್ತ್ರದಂತೆ ಮಹಾ ಅನರ್ಥವು ಸಂಭವಿಸುವದು. ಇನ್ನು “ **ತ್ರಿಮುಹೂರ್ತಗಾ** ” ಎಂಬ ಪದಕ್ಕೆ ವಿಪರೀತಾರ್ಥವನ್ನು ಕಲ್ಪಿಸಿಕೊಂಡು ಸಂಪೂರ್ಣಸಾಯಾಹ್ನ ವ್ಯಾಪ್ತಿಯಿಲ್ಲದಿದ್ದರೂ ಹಿಂದಿನ ದಿನದಲ್ಲಿಯೇ

---

* ಈ ಶ್ಲೋಕವು ಹೀಗೆಯೇ ಷಡ್ಧನಿರ್ಣಯ, ಧರ್ಮಪ್ರವೃತ್ತಿ, ಹೇಮಾದ್ರಿ, ಸ್ಮೃತಿದರ್ಪಣ, ಪ್ರಯೋಗಮಣಿದರ್ಪಣ, ಸ್ಮೃತಿಚಂದ್ರಿಕಾ ಮೊದಲಾದ ಅನೇಕ ಮಾನ್ಯ ಗ್ರಂಥಗಳಲ್ಲಿ ಉದಾಹರಿಸಿದ್ದಾಗಿವೆ. ಈ ಶ್ಲೋಕದ ಕೊನೆಯ ಚರಣಕ್ಕೆ ದೃಕ್ಪಕ್ಷೀಯರೇ ಆದ ಶ್ರೀ ಯರ್ಮುಂಜ ಶಂಕರ ಜೋಯಿಸರು ಸಹ ನಾವು ಹೇಳಿದಂತೆಯೇ ‘ ಪೂರ್ವದಿನ ಸೂರ್ಯಾಸ್ತಕ್ಕಿಂತ ಮೊದಲು ಮೃತತಿಥಿಯು (೩ ಮುಹೂರ್ತ) ೬ ಘಟಿಯಿಲ್ಲದೇ ಹೋದರೆ ಮಾರನೇ ದಿನ ಶ್ರಾದ್ಧಮಾಡುವದೇ ಯೋಗ್ಯವು’ ಎಂದು ಸರಳವಾದ ಅರ್ಥವನ್ನೇ ತಮ್ಮ ಪಂಚಾಂಗದಲ್ಲಿ ಹೇಳಿದ್ದಾರೆ. ಮತ್ತು ದೃಕ್ಪಂಚಾಂಗದ ಪ್ರೋತ್ಸಾಹಕರಾದ ನಾಜಗಾರ ಜ್ಯೋತಿಷಕಾರ್ಯಾಲಯದವರೂ ಸಹ ತಮ್ಮ ಶ್ರಾದ್ಧಪ್ರಯೋಗಪುಸ್ತಕದಲ್ಲಿ ಹೀಗೆಯೇ ಸರಳಾರ್ಥವನ್ನು ಮಾಡಿದ್ದಾರೆ. ಆದರೆ ಬಗ್ಗೋಣ ಪಂಚಾಂಗಸಂಪಾದಕರು ಮಾತ್ರ ತಮ್ಮ ಪಂಚಾಂಗದ ಶ್ರಾದ್ಧತಿಥಿನಿರ್ಣಯದಲ್ಲಿ “ಪೂರ್ವದಿನ ಸಾಯಾಹ್ನದಲ್ಲಿ ” (ಎಂದಿಷ್ಟೇ ಬರೆದಿದ್ದು ಸಂಪೂರ್ಣವಾಗಿ ಮೂರು ಮುಹೂರ್ತಗಳ ವರೆಗೆ ಎಂಬ ಅರ್ಥವನ್ನು ಸ್ಪಷ್ಟಪಡಿಸದೆ ಬಿಟ್ಟಿದ್ದಾರೆ. ) ಮೃತತಿಥಿಯಿಲ್ಲದಿದ್ದರೆ ಪರದಿನದಲ್ಲೇ ಮಾಡಬೇಕೆಂದಿದ್ದಾರೆ. ಹೀಗೆ ಮರೆಮೋಸದ ಅರ್ಥವನ್ನು ಬರೆಯಲು ಕಾರಣವೇನಿರಬಹುದೆಂಬುದು ನಾವು ಮುಂದೆ ಕಾಣಿಸಿರುವ ವಿಚಾರಗಳಿಂದ ವಾಚಕರಿಗೆ ಸೂಚಿಸಬಹುದು.

ಮಾಡುವುದೆಂದರೆ 'ಆ ವಚನವು "ತ್ರಿಮುಹೂರ್ತಾ ನ ಚೇದ್ಗ್ರಾಹ್ಯಾ ಪರೈವ ಕುತಪೇ ಹಿ ಸಾ।" ಎಂಬ ಗೋಭಿಲಸ್ಮೃತಿಯ ಪರ್ಯವಸಿತಾರ್ಥದ್ದಿದ್ದು ಅದರಂತೆ ಪೂರ್ವದಿನದ ಸಾಯಾಹ್ನದಲ್ಲಿ ಸಂಪೂರ್ಣವಾಗಿ ತ್ರಿಮುಹೂರ್ತವ್ಯಾಪ್ತಿಯು ಇಲ್ಲವಾದ ಕಾರಣ ಸರ್ವಧರ್ಮಗ್ರಂಥಗಳಲ್ಲಿಯೂ ನಿರ್ಣಯಿಸಲ್ಪಟ್ಟಿರುವ ಅಸ್ತಮಯಕಾಲದ ೩ ಮುಹೂರ್ತಗಳಾದರೂ ಪಿತೃಕಾರ್ಯಗಳಿಗೆ ಬೇಕೆಂದಿರುವ ಸಾಕಲ್ಯವಚನಗಳಿಗೆಲ್ಲ ಅದು ಅತ್ಯಂತ ವಿರೋಧವಾಗುವುದರಿಂದ ಹಾಗೆ ಮಾಡಲೂ ಆಸ್ಪದವಿಲ್ಲದೆ ಅದೂ ಮಹಾ ಅನರ್ಥವೇ ಆಗುವುದು.*

ಒಟ್ಟಾರೆ ದೃಕ್ತಿಥಿಯಿಂದ ಶ್ರಾದ್ಧಮಾಡುವುದೆಂದರೆ ಧಾರ್ಮಿಕಜನರಿಗೆ ಉಭಯತಃ ಪಾಶರಜ್ಜುವೇ ಸರಿ. ಇನ್ನೊಂದು ಭಯವೇನಂದರೆ ನಮ್ಮಲ್ಲಿ ಸಾಮಾನ್ಯವಾಗಿ ವೈದಿಕಧರ್ಮನಿಷ್ಠರಲ್ಲಿಯೇ ಆದರೂ ಪ್ರತಿಯೊಬ್ಬನ ಜನನಘಟಿಯನ್ನು ಬರೆದಿಡುವಂತೆ ಮರಣಘಟಿಯನ್ನು ಬರೆದಿಡುವ ಪ್ರಸಕ್ತಿಯಿಲ್ಲ. ಮರಣಕಾಲದ (ಆಗಿನ) ಸೂರ್ಯಸಿದ್ಧಾಂತಾನುಸಾರಿಪಂಚಾಂಗದ ಮೃತತಿಥಿಯನ್ನು ಮಾತ್ರ ನೆನಪಿಟ್ಟು ಅದನ್ನೇ ಆಧರಿಸಿ ಮೃತರ ಶ್ರಾದ್ಧಾದಿಗಳನ್ನೆಲ್ಲ ಈ ವರೆಗೆ ಆಚರಿಸಿಕೊಂಡು ಬಂದಿರುವರು. ಈಗ ಹಿಂದಿನ ಸಿದ್ಧಾಂತಾನುಸಾರಿ ಪಂಚಾಂಗವನ್ನು ಬಿಟ್ಟು ಇಂದಿನ ನವೀನದೃಕ್ಪಂಚಾಂಗವನ್ನು ಪರಿಗ್ರಹಿಸಿದರೆ ಮೃತತಿಥಿಯ ನಿರ್ಣಯದಲ್ಲಿ ತುಂಬಾ ಅವ್ಯವಸ್ಥೆಯುಂಟಾಗುವದು. ಹೇಗಂದರೆ— ಒಮ್ಮೆ ದೃಕ್ತಿಥಿಯೇ ಮಾನ್ಯವೆನ್ನುವವರಿಗಾದರೂ ತಾವು ಆಚರಿಸತಕ್ಕ ಶ್ರಾದ್ಧಕ್ಕೆ ಕಾರಣರಾದ ಮೃತರ ಮರಣಕಾಲದಲ್ಲಿ ಯಾವ ದೃಕ್ತಿಥಿಯು ಇದ್ದಿತ್ತೆಂಬುದು (ಘಟಿಕೆಯ ಉಲ್ಲೇಖವಿಲ್ಲದ್ದರಿಂದ) ಈಗ ಗಣಿತದಿಂದ.ಸಹ ತಿಳಿಯಲಿಕ್ಕೆ ಶಕ್ಯವಾಗಿರುವದಿಲ್ಲ. ಹೀಗಿರುವಲ್ಲಿ ಸಿದ್ಧಾಂತಶಾಸ್ತ್ರಸಿದ್ಧಘಟಿಗೂ, ದೃಗ್ಗಣಿತದಿಂದ ಸಾಧಿಸಿದ ಘಟಿಗೂ ೧೫ ಗಳಿಗೆಯ ವರೆಗೂ ವ್ಯತ್ಯಾಸಬರುವುದರಿಂದ ಮೃತತಿಥಿಯನ್ನು ನಿಶ್ಚಿತವಾಗಿ ಸಾಧಿಸಲು ಅಶಕ್ಯವಾಗಿ ಮೃತಾಹಾತಿಕ್ರಮಣವುಂಟಾಗುವುದು ಹೇಗೂ ತಪ್ಪಿದ್ದಲ್ಲವೆಂಬುದು ಸರಿಯಷ್ಟೇ! ಇದರಿಂದ 'ಮೃತಾಹಂ ಸಮತಿಕ್ರಮ್ಯ ಚಾಂಡಾಲಾಃ ಕೋಟಿಜನ್ಮಸು' ಎಂಬ ಮಹರ್ಷಿಗಳ ವಚನದಂತೆ ಭಯಂಕರವಾದ ಧರ್ಮಶಾಸನಕ್ಕೆ ಒಳಗಾಗಲೇಬೇಕಲ್ಲವೇ? ಇಂಥ ಮಹಾ ಅನರ್ಥಗಳಿಗೆ ಗುರಿಯಾಗುವುದು ಆಸ್ತಿಕರಿಗೆ

---

* ೧. ಕಾಲಮಾಧವದ ನಿರ್ಣಯದಂತೆಯೂ ಸಹ ದೃಕ್ತಿಥಿಯಿಂದ ಶ್ರಾದ್ಧದಿನದ ನಿರ್ಣಯವಾಗುವದಿಲ್ಲವೆಂಬುದನ್ನು ಹಿಂದೆ ದೃಗ್ಗಣಿತಪ್ರಭೆಯ ಮೇಲೆ ಕಲ್ಪಿಸಿದ ವಿಸಂಗತಿಯನ್ನು ಖಂಡಿಸಿರುವಲ್ಲಿಯೇ ತೋರಿಸಿರುತ್ತೇವೆ.

೨. ಇಂಥ ಧರ್ಮಸಂಕಟವು ಅತ್ಯಂತ ತಿಥಿಕ್ಷಯದಲ್ಲಿ ದಿವಾಪ್ರಮಾಣವು ೩೦-೦ ಕ್ಕಿಂತ ಕಡಿಮೆಯಾಗುವ ಸಂದರ್ಭದಲ್ಲೆಲ್ಲ ಬಂದೇ ಬರುವುದೆಂಬುದನ್ನು ಸುಜ್ಞವಾಚಕರು ಲಕ್ಷಿಸತಕ್ಕದ್ದಾಗಿದೆ. ಗ್ರಹಣದಂತೆ ಪ್ರತ್ಯಕ್ಷಸಂಸ್ಕಾರಗಳನ್ನೆಲ್ಲ ಮಾಡಿ ತಿಥಿಯನ್ನು ಸಿದ್ಧಪಡಿಸಿದರಂತೂ ದಿವಾಪ್ರಮಾಣವು ೩೦ ಕ್ಕಿಂತ ಹೆಚ್ಚು ಇರುವಾಗಲೂ ಸಂಭವಿಸುವುದು.

ಇಷ್ಟವಾದೀತೋ ? ಸಮಸ್ತ ವೈದಿಕಧರ್ಮಾಭಿಮಾನಿಗಳೂ ಶ್ರದ್ಧಾದರಪೂರ್ವಕವಾಗಿ ಆಚರಿಸತಕ್ಕ ಸಾಂವತ್ಸರಿಕ ಶ್ರಾದ್ಧ ವಿಚಾರವೊಂದರಿಂದಲೇ ೬-೧೦ ಘಟಿ ವೃದ್ಧಿ-ಕ್ಷಯಬರುವ ತಿಥಿಗಳುಳ್ಳ ದೃಕ್ಪಂಚಾಂಗವು ಇಷ್ಟು ಮಹಾ ಅನರ್ಥಕರವೆಂದು ಸಿದ್ಧವಾಗುತ್ತಿರುವಾಗ ಮತ್ತಿನ್ನು ಬೇರೆ ಉದಾಹರಣೆಗಳನ್ನು ತೋರಿಸಿ ವೃಥಾ ಗ್ರಂಥವಿಸ್ತಾರವಮಾಡುವ ಅವಶ್ಯವಿದೆಯೇ ? ಆದರೂ ವಾಚಕರ ದೃಢನಿರ್ಧಾರಕ್ಕಾಗಿ ಇನ್ನೂ ಒಂದೆರಡು ಸಂಗತಿಗಳನ್ನು ಸಂಕ್ಷಿಪ್ತವಾಗಿ ಸೂಚಿಸುವೆವು.

೨. ದರ್ಶಶ್ರಾದ್ಧನಿರ್ಣಯದಲ್ಲಿ:— ವೈದ್ಯನಾಥೀಯದಲ್ಲಿ:— "ಹಾರೀತೇನೋಕ್ತಂ ಪೂರ್ವಾಹ್ಣೇ ಚೇದಮಾವಾಸ್ಯಾ ಹ್ಯಪರಾಹ್ಣೇ ನ ಚೇತ್ತು ಸಾ । ಪ್ರತಿಪದ್ಯಪಿ ಕರ್ತವ್ಯಂ ಶ್ರಾದ್ಧಂ ಶ್ರಾದ್ಧವಿದೋ ವಿದುಃ ॥ ಇತಿ. ತದ್ದಿನದ್ವಯೇಽಪ್ಯಪರಾಹ್ಣವ್ಯಾಪಿತ್ವಾಭಾವೇಽಪಿ ಕುತಪಕಾಲವ್ಯಾಪಿತ್ವೇನ ಅನಗ್ನಿಕೇನ ಪರದಿನೇ ಕರ್ತವ್ಯಮಿತ್ಯೇವಂ ಪರಂ। ತಥಾಚ ಶೇನ್ವೈವೋಕ್ತಂ 'ಭೂತವಿದ್ಧಾಽಪ್ಯಮಾವಾಸ್ಯಾ ಪ್ರತಿಪನ್ಮಿಶ್ರಿತಾಪಿ ವಾ। ಪಿತ್ರ್ಯೇ ಕರ್ಮಣಿ ವಿದ್ವದ್ಭಿರ್ಗ್ರಾಹ್ಯಾ ಕುತಪಕಾಲಿಕೀ ॥' ಅಂದರೆ— ಎರಡೂ ದಿನ ಅಪರಾಹ್ಣಕ್ಕೆ ಅಮಾವಾಸ್ಯೆಯು ಸ್ಪರ್ಶವಿಲ್ಲದಿದ್ದರೆ ಪರದಿನ ಕುತಪಕಾಲವಲ್ಲಾದರೂ ಅದು ಇದ್ದೇ ಇರುವುದರಿಂದ ಶ್ರೌತಾಗ್ನಿಯನ್ನಿಡದಿದ್ದ ಸಾಮಾನ್ಯಜನರು ಆ ಪರದಿನದಲ್ಲಿಯೇ ದರ್ಶಶ್ರಾದ್ಧವನ್ನು ಮಾಡತಕ್ಕದ್ದು; ಎಂದು ಹೇಳಿದೆ. ಮತ್ತು ನಿರ್ಣಯಸಿಂಧುವಿನಲ್ಲಿ ಸಹ 'ನಿರಗ್ನಿಕಾದಿಭಿಸ್ತು ಅಮಾವಾಸ್ಯಾ ಪರಾಹ್ಣವ್ಯಾಪ್ತ್ಯಭಾವೇ ತು ಕುತಪಕಾಲವ್ಯಾಪಿನೀ ಗ್ರಾಹ್ಯಾ।' ಎಂತಲೂ, ಹೀಗೆಯೇ ಜಯಸಿಂಹ ಕಲ್ಪದ್ರುಮದಲ್ಲಿಯೂ ಕೂಡ 'ಕಾಲತತ್ವವಿವೇಚನೇಪಿ— 'ಉಭಯತ್ರಾಪರಾಹ್ಣವ್ಯಾಪಿತ್ವಾಭಾವೇ ಸ್ವಾತಂತ್ರ್ಯೇಣ ಕುತಪಕಾಲವ್ಯಾಪಿನೀ ವಿಧೀಯತ ಇತಿ' ಎಂಬುದಾಗಿಯೂ, ಇದರಂತೆಯೇ ಷಡ್ನಿರ್ಣಯ, ಕಾಲಾದರ್ಶ, ನಿರ್ಣಯಾಮೃತ ಮೊದಲಾದ ನಿರ್ಣಯಗ್ರಂಥಗಳಲ್ಲೆಲ್ಲ ಇದೇ ಅರ್ಥವನ್ನು ಹೇಳಿರುವುದಲ್ಲದೆ ಕಾಲಮಾಧವದಲ್ಲಿಯೂ ಸಹ— 'ಅಪರಾಹ್ಣವ್ಯಾಪ್ತಿಃ ಪಾರ್ವಣೇ ಮುಖ್ಯಃ ಕಲ್ಪಃ। ಕುತಪವ್ಯಾಪ್ತಿರನುಕಲ್ಪಃ। ತಥಾಚ ಮುಖ್ಯಾಸಂಭವೇಽನುಕಲ್ಪಸ್ಯೋಪಾದೇಯತ್ವಾನ್ನಿರಗ್ನಿಕೈಃ ಪ್ರತಿಪನ್ಮಿಶ್ರಿತಾ ಗ್ರಹೀತುಂ ಶಕ್ಯತೇ ॥" ಅಂದರೆ— ದರ್ಶಶ್ರಾದ್ಧದಲ್ಲಿ ಅಪರಾಹ್ಣವ್ಯಾಪ್ತಿಯು ಮುಖ್ಯವು. ಕುತಪವ್ಯಾಪ್ತಿಯು ಗೌಣವು. ಒಟ್ಟಿನ ಮೇಲೆ ಮುಖ್ಯಕಾಲವ್ಯಾಪ್ತಿಯಿಲ್ಲದಿದ್ದಾಗ ಗೌಣಕಾಲವನ್ನು ತಕ್ಕೊಳ್ಳಬೇಕಾದ್ದರಿಂದ ನಿರಗ್ನಿಕರು ಕುತಪವ್ಯಾಪ್ತಿಯುಳ್ಳ ಪರದಿನವನ್ನು ಸ್ವೀಕರಿಸಲಿಕ್ಕೆ ಬಂದೇ ಬರುವುದು; ಎಂದಿದ್ದಾರೆ. ಹೀಗೆ ಅನೇಕ ಧರ್ಮನಿಬಂಧಗಳು ಒಂದೇ ಬಗೆಯಾಗಿ ದರ್ಶಶ್ರಾದ್ಧನಿರ್ಣಯವನ್ನು ಏಕಮುಖವಾಗಿ ಸಾರುತ್ತಿರಲು ದೃಕ್ತಿಥಿಯು ದಿವಾಪ್ರಮಾಣವು ೩೦ ಘ. ಇರುವಾಗ ಸಹ ಈ ಎಲ್ಲ ವಚನಗಳಿಗೂ ವಿರೋಧವನ್ನುಂಟುಮಾಡುವದು. ಹೇಗಂ

ವರೆ– ಚತುರ್ದಶೀ ಘಟಿ ೨೪–೦. ಮರುದಿನ ಅಮಾವಾಸ್ಯೆ ಘಟಿ ೧೪-೦ ಇದ್ದರೆ ಇಲ್ಲಿ ಹಿಂದು ಮುಂದಿನ ಎರಡು ದಿನಗಳಲ್ಲಿಯೂ ಮುಖ್ಯಕಾಲ-ಗೌಣಕಾಲಗಳಾದ ಅಪರಾಹ್ಣ-ಕುತಪಗಳೆರಡರಲ್ಲಿ ಒಂದಕ್ಕೂ ಅಮಾವಾಸ್ಯೆಯು ಸಿಗದಿರುವ ಕಾರಣ ದರ್ಶಶ್ರಾದ್ಧಕ್ಕೆ ದಿನವೇ ನಿರ್ಣಯವಾಗದೆ ಅನವಸ್ಥೆಯುಂಟಾಗಿ ಆಸ್ತಿಕರಾದವರಿಗೆ ಈ ದೃಕ್ತಿಥಿಯು ಉಭಯತಃ ಗಳಪಾಶವಾಗಿ ( ಕುತ್ತಿಗೆಗೆ ಹಾಕಿದ ಉರುಳಿನಂತೆ ) ಪರಿಣಮಿಸುವದು. ಇವೆಲ್ಲ ಕಾರಣಗಳಿಂದಲೇ ವ್ಯಾಸರು ಕಲಿಮಹಾತ್ಮೆಯಲ್ಲಿ " ದೃಕ್ತಿಥಿಗಳಲ್ಲಿ ಶ್ರಾದ್ಧಾದಿಗಳನ್ನು ಮಾಡಿದರೆ ಪುಣ್ಯಕ್ಷಯದ ಮೂಲಕ ನರಕಭಾಗಿಗಳಾಗುವರು " ಎಂದು ಪಾರ್ವತಿಗೆ ಶ್ರೀಶಿವನು ಹೇಳಿದ ವಚನವನ್ನು ಉಲ್ಲೇಖಿಸಿದ್ದಾರೆ.

೩. ಇದರಂತೆಯೇ ನರಕಚತುರ್ದಶಿಯ ಅಭ್ಯಂಗದಿನದ ನಿರ್ಣಯವನ್ನು ಸಹ ವಿಚಾರಿಸುವಲ್ಲಿ ನಿರ್ಣಯಸಿಂಧುವಿನಲ್ಲಿ— ' **ತೇನ ಚತುರ್ಥಯಾಮಗಾಮಿನೀ ಗ್ರಾಹ್ಯಾ । ಅತ ಏವ ಸರ್ವಜ್ಞನಾರಾಯಣಃ— 'ತಥಾ ಕೃಷ್ಣಚತುರ್ದಶ್ಯಾಮಾಶ್ವಿನೇಽರ್ಕೋದಯಾತ್ಪುರಾ । ಯಾಮಿನ್ಯಾಃ ಪಶ್ಚಿಮೇ ಯಾಮೇ ತೈಲಾಭ್ಯಂಗೋ ವಿಶಿಷ್ಯತೇ ॥ ಇತಿ, ತೇನಾಯಮರ್ಥಃ— ಯಥಾ ಅಗ್ನಿಹೋತ್ರೇ ಯಾವಜ್ಜೀವಂ ಸಾಯಂಪ್ರಾತಃಕಾಲೇಷು ವ್ಯಾಪ್ತಕಾಲಸ್ಯ ಗುರುತ್ವಂ ತಥಾಽತ್ರ ಚತುರ್ದಶೀಚತುರ್ಥಯಾಮ, ಅರುಣೋದಯ, ಚಂದ್ರೋದಯಾನಾಂ ಉತ್ತರೋತ್ತರಸ್ಯ ವ್ಯಾಪ್ಯತ್ವಾದ್ಗುರುತ್ವಮಿತಿ॥"** ತಾತ್ಪರ್ಯ:— ಆಶ್ವಿನ ಕೃಷ್ಣಪಕ್ಷದಲ್ಲಿ ರಾತ್ರಿಯ ಕೊನೆಯ ಯಾಮದಲ್ಲಿರುವ ಚತುರ್ದಶಿಯಲ್ಲಿ ಅಭ್ಯಂಗಸ್ನಾನವನ್ನು ವಿಧಿಸಿರುವುದರಿಂದ ಆ ಚತುರ್ದಶಿಯನ್ನು ರಾತ್ರಿಯ ಅಂತ್ಯಯಾಮದಲ್ಲಿರುವುದನ್ನೇ ಸ್ವೀಕರಿಸಬೇಕು. ಆದುದರಿಂದ ರಾತ್ರಿಯ ಅಂತ್ಯಯಾಮಕ್ಕೆ ಚತುರ್ದಶಿಯ ಸ್ಪರ್ಶವಾದರೂ ಇರಲೇಬೇಕೆಂಬುದು ಶಾಸ್ತ್ರದಿಂದ ನಿರ್ಬಂಧಿತವಾಗಿದೆ. ಅದರಲ್ಲಿಯೂ ಅಂತ್ಯಯಾಮದ ಅರುಣೋದಯಕ್ಕಿಂತ ಮುಂಚಿನ ಕಾಲವು ಕನಿಷ್ಠವು; ಅರುಣೋದಯಕಾಲವು ಮಧ್ಯಮವು; ಚಂದ್ರೋದಯ ಕಾಲವು ಉತ್ತಮವು ಎಂದು ( ತಾರತಮ್ಯವನ್ನೂ ) ಹೇಳಿದೆ. ಪುರುಷಾರ್ಥಚಿಂತಾಮಣಿ*ಯಲ್ಲಿಯೂ ಸಹ ಹೀಗೆಯೇ ಹೇಳಿ— **" ಯದಾ ಸೂರ್ಯೋದಯಾನಂತರಂ ಪ್ರವೃತ್ತಾ ಅರುಣೋದಯಾತ್ಪೂರ್ವಂ ಸಮಾಪ್ತಾ ತದಾ ಅರುಣೋದಯಾತ್ಪೂರ್ವಮಪಿ ಚತುರ್ಥಯಾಮೇ ಚತುರ್ದಶ್ಯಾಮೇವಾಽಭ್ಯಂಗಃ । ಅಭ್ಯಂಗೇ ಚೋದಧಿಸ್ನಾನೇ........ತಿಥಿಸ್ತಾತ್ಕಾಲಿಕೀಸ್ಮೃತಾ ॥ ಇತಿ ಪೂರ್ವೋದಾಹೃತ ಸಾಕಲ್ಯವಚನಾಪವಾದವಚನಾತ್ । 'ಯಾಮಿನ್ಯಾಃ ಪಶ್ಚಿಮೇ ಯಾಮೇ' ಇತಿ ಪ್ರಕೃತೋದಾಹೃತವಚನಾಚ್ಚ ।'** ಅಂದರೆ— ತಿಥಿಕ್ಷಯದಲ್ಲಿ ಸೂರ್ಯೋ

---

* ಈ ಗ್ರಂಥವನ್ನು ಆದ್ಯಂತವಾಗಿ ಓದಿನೋಡಿದರೆ ದೃಕ್ಪಂಚಾಂಗವು ಕರ್ಮಕಾಂಡಕ್ಕೆ ಹೇಗೆ ಸರ್ವಥಾ ವಿಸಂಗತವಾಗಿರುವುದೆಂಬುದು ಪದೇ ಪದೇ ತಿಳಿಯುವಂತಿದೆ

ದಯಾನಂತರ ಆರಂಭವಾದ (ಉಪರಿಯಾದ) ಚತುರ್ದಶಿಯು ಮುಂದೆ ರಾತ್ರಿಯ ಅಂತ್ಯಯಾಮದಲ್ಲಿ ಅರುಣೋದಯಕ್ಕಿಂತ ಮುಂಚೆಯೇ ಸಮಾಪ್ತವಾದಾಗ ಈ ಅಭ್ಯಂಗಕ್ಕೆ ರಾತ್ರಿಯ ಅಂತ್ಯಯಾಮವೇ ವಿಧಿಸಲ್ಪಟ್ಟಿದ್ದು ಅದನ್ನು ತತ್ಕಾಲವ್ಯಾಪ್ತವಾದ ಚತುರ್ದಶೀತಿಥಿಯಲ್ಲಿಯೇ ಮಾಡಬೇಕೆಂದು ವಿಶೇಷವಚನಗಳನ್ನು ಶಾಸ್ತ್ರಗಳಲ್ಲಿ ಹೇಳಿರುವುದರಿಂದ ಅರುಣೋದಯಕ್ಕೆ ಮುಂಚೆಯೇ ಆದರೂ ಆ ಅಂತ್ಯಯಾಮದ ವ್ಯಾಪ್ತಿಯುಳ್ಳ ಚತುರ್ದಶೀತಿಥಿಯಲ್ಲಿಯೇ ಅಭ್ಯಂಗಸ್ನಾನ ಮಾಡಬೇಕು; ಎಂದು ಸ್ಪಷ್ಟವಾಗಿ ಹೇಳಿದೆ. ಹೀಗಿರುವಾಗ ೧೦ ಘಟಿಯವರೆಗೆ ತಿಥಿಕ್ಷಯಬರುವ ದೃಕ್ಪಂಚಾಂಗದ ಪ್ರಕಾರ ತ್ರಯೋದಶೀ ದಿನ ಘಟಿ ೧–೦, ಉಪರಿ ಚತುರ್ದಶೀಘಟಿ ೫೧–೦ ಬಂದಾಗ ಎರಡೂ ದಿನಗಳಲ್ಲಿಯೂ ರಾತ್ರಿಯ ಅಂತ್ಯಯಾಮಕ್ಕೆ ಚತುರ್ದಶಿಯು ಸಿಗದೆ ಇರುವುದರಿಂದ ಸುಪ್ರಸಿದ್ಧವಾದ ನರಕಚತುರ್ದಶಿ (ದೀಪಾವಳಿ)ಯನ್ನೂ, ಅಭ್ಯಂಗಸ್ನಾನವನ್ನೂ ಸಹ ಶಾಸ್ತ್ರಪ್ರಕಾರವಾಗಿ ಆಚರಿಸತಕ್ಕ ಕಾಲನಿರ್ಣಯವೇ ಇಲ್ಲದಂತಾಗಿ ಕರ್ಮವೇ ಲೋಪಹೊಂದುವ ಮಹಾ ಅನರ್ಥದ ಪ್ರಸಕ್ತಿಯು ಉಂಟಾಗುವದು.

೪. ಇನ್ನು ನಕ್ತತಿಥಿಯ ನಿರ್ಣಯದಲ್ಲಿಯೂ ಸಹ ಧರ್ಮಸಿಂಧುವಿನಲ್ಲಿ– '**ದಿನದ್ವಯೇ ಪ್ರದೋಷವ್ಯಾಪ್ತ್ಯಭಾವೇ ಪರತ್ರೈವ ಸಾಯಾಹ್ನೇ ದಿನಾಷ್ಟಮಭಾಗೇ ನಕ್ತಂ ಕಾರ್ಯಂ ನ ತು ರಾತ್ರೌ।**' ಅಂದರೆ– ನಕ್ತವ್ರತದ ತಿಥಿಯು ಎರಡು ದಿನಗಳಲ್ಲಿಯೂ ಪ್ರದೋಷಕಾಲದಲ್ಲಿ ಇಲ್ಲದಿದ್ದಾಗ ಪರದಿನದ ದಿನಾಷ್ಟಮಭಾಗದಲ್ಲಿ (ಸೂರ್ಯಾಸ್ತಕ್ಕಿಂತ ಮುಂಚೆ ೩॥ ಘಟಿಯಲ್ಲಿ) ಯಾದರೂ ನಕ್ತವ್ರತವನ್ನು ಮಾಡಬೇಕು; ಎಂದು ನಿರ್ಣಯಿಸಲ್ಪಟ್ಟಿದೆ. ಇಲ್ಲಿ ದೃಕ್ತಿಥಿಯು ಪರಮಕ್ಷಯದಲ್ಲಿ ಪೂರ್ವತಿಥಿಘಟಿ ೩೬–೦ ಮರುದಿನ ನಕ್ತತಿಥಿಘಟಿ ೨೬–೦ ಹೀಗೆ ಬಂದಿರುವಲ್ಲಿ ದಿವಾಮಾನ ೩೦-೦ ಇರುವಾಗಲೂ ಸಹ ಎರಡೂ ದಿನಗಳಲ್ಲಿ ಪ್ರದೋಷವ್ಯಾಪ್ತಿಯು ಸಿಗದೆ ಮರುದಿನ ದಿನಾಷ್ಟಮಭಾಗದಲ್ಲಿ (ಅಂದರೆ ಘಟಿ ೨೬–೧೫ ರ ನಂತರ) ಸಹ ನಕ್ತತಿಥಿಯು ಸಿಗದೇ ಹೋಗುವುದರಿಂದ ಉಕ್ತಕಾಲವ್ಯಾಪ್ತಿಯುಳ್ಳ ತಿಥಿಯನ್ನೇ ನಕ್ತದಲ್ಲಿ ಸ್ವೀಕರಿಸಬೇಕಾದ್ದರಿಂದ ಮೇಲಿನ ಧರ್ಮಸಿಂಧುವಚನಕ್ಕೆ ದೃಕ್ಪಕ್ಷದವರು ಔಚಿತ್ಯವನ್ನು ಹೇಗೆ ಕಲ್ಪಿಸುವರು ?

೫. ಇದರಂತೆಯೇ ಪರಶುರಾಮಜಯಂತೀನಿರ್ಣಯದಲ್ಲಿಯೂ ಸಹ '**ಇಯಂ ರಾತ್ರಿಪ್ರಥಮಯಾಮವ್ಯಾಪಿನೀ ಗ್ರಾಹ್ಯಾ। ಪೂರ್ವೇದ್ಯುರೇವ ಪ್ರಥಮಯಾಮವ್ಯಾಪ್ತೌ ಪೂರ್ವಾ। ದಿನದ್ವಯೇ ರಾತ್ರಿಪ್ರಥಮಯಾಮೇ ಸಾಮ್ಯೇನ ವೈಷಮ್ಯೇಣ ವಾ ಏಕದೇಶವ್ಯಾಪ್ತೌ ಪರಾ॥**' ಅಂದರೆ:— ಈ ಪರಶುರಾಮಜಯಂತಿಯ ತದಿಗೆಯನ್ನು ರಾತ್ರಿಯ ಪ್ರಥಮಯಾಮದಲ್ಲಿ ವ್ಯಾಪಿಸಿ ಇರುವುದನ್ನೇ ಸ್ವೀಕರಿಸಬೇಕು. ಮುಂಚಿನ ದಿನದಲ್ಲಿ ಮಾತ್ರವೇ

ರಾತ್ರಿಯ ಪ್ರಥಮಯಾಮದಲ್ಲಿದ್ದರೆ ಮುಂಚಿನ ದಿನವೂ, ಎರಡೂ ದಿನಗಳಲ್ಲಿ ಸಮವಾಗಿಯಾಗಲಿ, ಹೆಚ್ಚು-ಕಡಿಮೆಯಿಂದಾಗಲಿ ರಾತ್ರಿಯ ಪ್ರಥಮಯಾಮದ ಅಂಶವನ್ನು ವ್ಯಾಪಿಸಿದ್ದರೆ ಮರುದಿನವೂ ಜಯಂತಿಯನ್ನಾಚರಿಸಬೇಕೆಂದು ನಿರ್ಣಯವನ್ನು ಹೇಳಿದೆ. ಈ ಸಂದರ್ಭದಲ್ಲಿ ಎರಡೂ ದಿನಗಳಲ್ಲಿ ರಾತ್ರಿಯ ಪ್ರಥಮಯಾಮದ ವ್ಯಾಪ್ತಿಯು ಸಿಗದಿದ್ದರೆ ಹೇಗೆ ಮಾಡಬೇಕೆಂಬುದಕ್ಕೆ ನಿರ್ಣಯವನ್ನು ಹೇಳಲೇ ಇಲ್ಲ. ಯಾಕಂದರೆ— ಸಿದ್ಧಾಂತಶಾಸ್ತ್ರದಂತೆ ಒಂದು ಯಾಮದಷ್ಟು ತಿಥಿಕ್ಷಯವು ಬರುವುದೇ ಇಲ್ಲವಾಗಿದೆ. ದೃಕ್ಪಂಚಾಂಗದ ಪ್ರಕಾರ ವೈಶಾಖಶುಕ್ಲಬಿದಿಗೆಯು ಘ. ೩೯-೦. ಮತ್ತು ತದಿಗೆಯು ಘ. ೩೦-೦ ಇದ್ದಾಗ ದಿವಾಮಾನ ೩೧-೦ ಇರುವಲ್ಲಿ ಈ ಧರ್ಮಸಿಂಧುವಿನ ನಿರ್ಣಯದಂತೆ ಜಯಂತೀದಿನವನ್ನು ನಿರ್ಣಯಿಸಲಿಕ್ಕೆ ಶಕ್ಯವೇ ಇಲ್ಲ.

ಇನ್ನೂ ಹೀಗೆಯೇ ವೈದ್ಯನಾಥೀಯಸ್ಮೃತಿಮುಕ್ತಾಫಲ, ಸ್ಮೃತಿಮುಕ್ತಾವಳಿ, ಸ್ಮೃತಿರತ್ನಾಕರ, ನಿರ್ಣಯಸಿಂಧು, ಧರ್ಮಸಿಂಧು, ಕಾಲಮಾಧವ, ಜಯಸಿಂಹಕಲ್ಪದ್ರುಮ, ಪುರುಷಾರ್ಥಚಿಂತಾಮಣಿ, ಷಡ್ಧರ್ಮನಿರ್ಣಯ, ಧರ್ಮಪ್ರವೃತ್ತಿ, ಹೇಮಾದ್ರಿ, ಸ್ಮೃತಿದರ್ಪಣ, ಪ್ರಯೋಗಮಣಿದರ್ಪಣ, ಸ್ಮೃತಿಚಂದ್ರಿಕೆ, ಕಾಲಾದರ್ಶ, ಕಾಲತತ್ವವಿವೇಚನ, ನಿರ್ಣಯಾಮೃತ, ಸ್ಮೃತಿಸಾರಸಮುಚ್ಚಯ, ನೃಸಿಂಹಪಾರಿಜಾತ, ಸ್ಮೃತಿಕೌಸ್ತುಭ ಮೊದಲಾದ ಯಾವುದೊಂದು ಕರ್ಮಕಾಲನಿರ್ಣಯವನ್ನು ಹೇಳಿರುವ ಧರ್ಮಶಾಸ್ತ್ರವನ್ನು ಇಟ್ಟುಕೊಂಡರೂ ಇನ್ನೂ ಇಂತಹ ಹಲವು ಉದಾಹರಣೆಗಳು ಬಹಳ ಸಂದರ್ಭಗಳಲ್ಲಿ ಸಿಗುವವು. ಅವನ್ನೆಲ್ಲ ಕ್ರಮವಾಗಿ ಬರೆಯುವಲ್ಲಿ ಅವೇ ಒಂದು ಪ್ರತ್ಯೇಕ ಗ್ರಂಥವಾಗಬಹುದು. ಆದ್ದರಿಂದ ವ್ಯರ್ಥವಾಗಿ ಗ್ರಂಥವನ್ನು ವಿಸ್ತರಿಸಿದಲ್ಲಿ ವಾಚಕರಿಗೂ ಬೇಸರವುಂಟಾದೀತೆಂಬ ಶಂಕೆಯಿಂದ ಈ ವಿಷಯವನ್ನು ಇಷ್ಟಕ್ಕೆ ಮುಗಿಯಿಸಬೇಕಾಗಿದೆ.

ಹೀಗೆ ನಾವು ಹಿಂದೆ ೮ನೆಯ ಪ್ರಶ್ನೆಯ ಉತ್ತರದಲ್ಲಿ ಹೇಳಿರುವಂತೆ ಈ ವರೆಗೆ ನವೀನದೃಕ್ಪಂಚಾಂಗದ ತಿಥ್ಯಾದಿಗಳು ಧರ್ಮಶಾಸ್ತ್ರಗಳಿಗೆ ಹೇಗೆ ಪ್ರತಿಕೂಲವಾಗಿರುತ್ತವೆಂಬುದನ್ನು ವಾಚಕರ ಸ್ಪಷ್ಟಪ್ರತೀತಿಗಾಗಿ ಉದಾಹರಣಪೂರ್ವಕವಾಗಿ ವಿವರಿಸಿ ಹೇಳಿರುವೆವು. ಇವಿಷ್ಟರಿಂದಲೇ ೮-೧೦ ಘಟಿಗಳ ವೃದ್ಧಿ-ಕ್ಷಯಗಳು ಸಂಭವಿಸುವ ತಿಥಿಗಳುಳ್ಳ ನವೀನದೃಕ್ಪಂಚಾಂಗದಿಂದ ಕರ್ಮಕಾಲಗಳನ್ನು ನಿರ್ಣಯಿಸುವುದು ತೀರಾ ಅಸಾಧ್ಯವೇ ಆಗಿರುವುದೆಂದೂ, ಅದರಿಂದ ಕರ್ಮಲೋಪಪ್ರಸಕ್ತಿಯೂ, ಶಾಸ್ತ್ರವಿಹಿತ ಕಾಲವನ್ನು ಅತಿಕ್ರಮಿಸಿದ ದೋಷವೂ ಸಂಘಟಿಸುವದು ಅಪರಿಹಾರ್ಯವಾಗಿರುವುದೆಂದೂ ಸುವಿಚಾರಿಗಳಾದ ವಾಚಕರು ಮನಗಾಣದಿರರು.

ಈ ಪ್ರಕಾರ ನಾವು ಮೇಲೆ ಕಾಣಿಸಿದಂತಹ ಧರ್ಮಶಾಸ್ತ್ರಗಳಿಗೆಲ್ಲ ಆದ್ಯಪ್ರವರ್ತಕರಾದ ಮಹರ್ಷಿಗಳೇ ಅಂತಹ ಧರ್ಮಶಾಸ್ತ್ರಗಳಿಗೆ ಅನುಸಾರ

ವಾಗಿ ಕರ್ಮಕಾಲಗಳನ್ನೂ ಸಹ ನಿರ್ಣಯಿಸಿಕೊಳ್ಳಲಿಕ್ಕಾಗಿ ಜ್ಯೋತಿಃಶಾಸ್ತ್ರವನ್ನು ಪ್ರವರ್ತಿಸಿದವರಾದ್ದರಿಂದ ಧರ್ಮಶಾಸ್ತ್ರದಂತೆ ನಿರ್ಣಯಿಸತಕ್ಕ ಕರ್ಮಕಾಲಗಳ ನಿರ್ಣಯಕ್ಕೂ, ಜ್ಯೋತಿಃಶಾಸ್ತ್ರದಂತೆ ನಿರ್ಣಯಿಸತಕ್ಕ ತಿಥ್ಯಾದಿಗಳ ಕಾಲನಿರ್ಣಯಕ್ಕೂ ಪರಸ್ಪರವಾಗಿರುವ ಸಂಬಂಧವು ಅಭೇದ್ಯವಾಗಿದೆ. ಆದ ಕಾರಣ ಆರ್ಷಶಾಸ್ತ್ರಗಳ ಮೂಲತತ್ವಗಳನ್ನು ಮನುಷ್ಯಮಾತ್ರರಾದ ನಾವು ಸರಿಯಾಗಿ ತಿಳಿದುಕೊಳ್ಳುವದು ತೀರಾ ಅಸಾಧ್ಯವಾಗಿರುವುದರಿಂದ ನಮ್ಮ ಸ್ವಂತಬುದ್ಧಿಯಿಂದಾಗಲಿ, ಪರಿಶೋಧನೆಯಿಂದಾಗಲಿ ಆರ್ಷಪರಂಪರೆಯಿಂದ ಬಂದ ಶಾಸ್ತ್ರಪದ್ಧತಿಯ ಪರಿವರ್ತನವನ್ನು ಮಾಡುವುದು ತೀರ ಅಯುಕ್ತವಾಗಿದೆ. ಇದನ್ನು ಲಕ್ಷಿಸದೆ ಕೇವಲ ನಮ್ಮ ಮಾಸುಷೇಂದ್ರಿಯಗಳಿಗೇನೇ ಮಹತ್ವಕೊಟ್ಟು ಶಾಸ್ತ್ರರೀತಿಯನ್ನು ಬದಲಾಯಿಸಿಕೊಂಡರೆ ನಾವು ಇಲ್ಲಿ ತೋರಿಸಿರುವಂತೆ ದೃಕ್ಪಂಚಾಂಗದಂತಹ ಅನಿಷ್ಟಕರವಾದ ಮಹಾ ಅನರ್ಥಗಳು ಉಂಟಾಗುವದು ಎಂದಿಗೂ ತಪ್ಪಿದ್ದಲ್ಲ.

ಇಲ್ಲಿ ನಾವು ಮೇಲೆ ತೋರಿಸಿರುವ ಉದಾಹರಣೆಯಲ್ಲಿ ಸಾಮಾನ್ಯವಾಗಿ ನಮ್ಮ ದೇಶದಲ್ಲಿ ಸಂಭವಿಸತಕ್ಕ ದಿನಮಾನವನ್ನೇ ಇಟ್ಟುಕೊಂಡು ದೃಕ್ಪಂಚಾಂಗದ ವಿಸಂಗತಿಯನ್ನು ತೋರಿಸಿರುವೆವು. ಇನ್ನು ಈ ದೃಕ್ಪಂಚಾಂಗವು ಶಾಸ್ತ್ರಸಿದ್ಧವೆಂದು ಸಾಧಿಸಬೇಕಾದರೆ ಅದು ನಮ್ಮ ವೈದಿಕಧರ್ಮವು ಆಚರಣೆಯಲ್ಲಿರತಕ್ಕ ಕರ್ಮಭೂಮಿಯಾದ ಈ ಭರತಖಂಡದ ಎಲ್ಲ ದೇಶಗಳಲ್ಲಿಯೂ ಆಚರಿಸಲಿಕ್ಕೆ ಅನುಕೂಲವಾಗಿರಬೇಕಷ್ಟೇ ! ಆದರೆ ದಿವಾಮಾನವು ೨೫ ಗಳಿಗೆಗಿಂತ ಕಡಿಮೆಯಾಗುವ ಪಂಜಾಬ, ಲಾಹೋರ, ಅಮೃತಸರ, ಕಾಶ್ಮೀರ, ಶ್ರೀನಗರ, ಬದರಿ ಮುಂತಾದ ಹಲವು ಪ್ರದೇಶಗಳಲ್ಲೆಲ್ಲ ಮಾಧವಾಚಾರ್ಯರು ಕಾಲಮಾಧವದಲ್ಲಿ 'ಅನ್ಯಥಾ ಷಣ್ಮುಹೂರ್ತಕ್ಷಯಪ್ರಸಂಗಾತ್' ಎಂದು ಹೇಳಿ ಸರ್ವಥಾ ಅಸಂಗತವೆಂದು ಸೂಚಿಸಿರುವ ೬ ಮುಹೂರ್ತಗಳ ಕ್ಷಯಪ್ರಸಂಗವು ಆ ದೇಶಗಳ ದಿನಮಾನದ ಪ್ರಕಾರ ವೃಕ್ತಿಥಿಗೆ ಸಾಕ್ಷಾತ್ತಾಗಿ ಸಂಭವಿಸುತ್ತಿದ್ದು ಅದರಿಂದ ಧರ್ಮಶಾಸ್ತ್ರೋಕ್ತವಾದ ಹಲವು ಕರ್ಮಗಳಿಗೆ ಕಾಲನಿರ್ಣಯವೇ ಇಲ್ಲದಂತಾಗುವುದು. ಹೀಗೆ ಕಾಲನಿರ್ಣಯವೇ ಆಗದ ಮೇಲೆ ಕರ್ಮಾಚರಣೆಯನ್ನಾದರೂ ಹೇಗೆ ( ಯಾವಾಗ ) ಮಾಡಬೇಕು ? ಕರ್ಮಾಚರಣೆಯೇ ಸಿದ್ಧಿಸದಿದ್ದನಂತರ ಕರ್ಮಗಳನ್ನು ವಿಧಿಸಿರುವ ಧರ್ಮಶಾಸ್ತ್ರಗಳಿಂದಾಗಲಿ, ಕರ್ಮಕಾಲನಿರ್ಣಯಕ್ಕಾಗಿಯೇ ಇರುವ ಪಂಚಾಂಗದಿಂದಾಗಲಿ ಪ್ರಯೋಜನವೇನು ? ಈ ವಿಚಾರಗಳಿಂದೆಲ್ಲ ದೃಕ್ತಿಥಿಯಿಂದ ಕರ್ಮಕಾಂಡದ ಮೂಲವೇ ಕುಸಿದು ಬೀಳುವುದೆಂದು ಸ್ಪಷ್ಟವಾಗುವುದು. ಇಂಥ ಮಹಾ ಅನರ್ಥಗಳ ಪ್ರಸಕ್ತಿಯನ್ನು ತಿಳಿದೇ ಸರ್ವಜ್ಞಕಲ್ಪರಾದ ಶ್ರೀಮಾಧವಾಚಾರ್ಯರು ( ಶ್ರೀಮದ್ವಿದ್ಯಾರಣ್ಯರು ) ತಮ್ಮ "ದೃಗ್ಗಣಿತಪ್ರಭಾ"ಎಂಬ ಗ್ರಂಥದಲ್ಲಿ "ಸಾರ್ಧಬಾಣಸಪಾದಾಂಗಘಟೀವೃದ್ಧಿಕ್ಷಯಾನ್ವಿತಾಃ । ಗೃಹೀತಾ ಧರ್ಮ

ಶಾಸ್ತ್ರೇ ಹಿ ತಿಥಯೋ ನಿತ್ಯಕರ್ಮಸು ॥ ಸ್ಮೃತೀನಾಂ ಚ ಪುರಾಣಾನಾಮೀ ದೃಕ್ತಿಥಿವಶಾತ್ಸದಾ । ನಿರ್ಣಯೋ ಯುಜ್ಯತೇ ನೋ ಚೇತ್ ಸ್ಮೃತ್ಯಾದೀನಾಮಸಂಗತಿಃ ॥ ಪರಸ್ಸಹಸ್ರಕಾರ್ಯೇಷು ಧರ್ಮಶಾಸ್ತ್ರೋದಿತೇಷು ಹಿ । ತಿಥ್ಯಾದ್ಯಂತಘಟೀಮಾನವಶಾನ್ನಿರ್ಣಯ ಇಷ್ಯತೇ ॥ ತನ್ನಿರ್ಣಯಸ್ಯೈವ ಸದಾ ಸ್ಯಾದಸಂಗತಿರನ್ಯಥಾ । ತಸ್ಮಾದ್ಯುಕ್ತಂ ಮಯಾ ಪ್ರೋಕ್ತಂ ಗೃಹೀತವ್ಯಂ ಸದಾಽಽಸ್ತಿಕೈಃ ॥ ' ಹೀಗೆ ಹೇಳಿದ್ದು, ದೃಕ್ಪಂಚಾಂಗದಿಂದ ಸಾವಿರಾರು ಶಾಸ್ತ್ರೋಕ್ತ ಕರ್ಮಗಳಿಗೆಲ್ಲ ಭಂಗವುಂಟಾಗುವುದರಿಂದ ಆಸ್ತಿಕರಿಗೆ ಅದು ಸರ್ವಥಾ ತ್ಯಾಜ್ಯವಾಗಿರುವುದೆಂದು ಸ್ಪಷ್ಟವಾಗಿ ಉದ್ಘೋಷಿಸಿರುವರು.

ಈ ಪ್ರಕಾರ ದೃಕ್ಪಂಚಾಂಗದ ತಿಥ್ಯಾದಿಗಳಿಂದ ಧರ್ಮಶಾಸ್ತ್ರೋಕ್ತವಾದ ಹಲವು ಕರ್ಮಗಳ ಕಾಲನಿರ್ಣಯಕ್ಕೆ ಅವಕಾಶವೇ ಇಲ್ಲದಂತಾಗಿ ಅದರಿಂದ ಶ್ರುತಿ, ಸ್ಮೃತಿ, ಪುರಾಣಾದಿ ಸಮಸ್ತಶಾಸ್ತ್ರಗಳಿಗೆ ಹಾಗೂ ಆಯಾ ಶಾಸ್ತ್ರೋಕ್ತವಾದ ಕರ್ಮಗಳಿಗೆ ಸಹ ವಿರೋಧವು ಘಟಿಸುವುದರಿಂದಲೇ ಧರ್ಮಶಾಸ್ತ್ರಪ್ರವರ್ತಕರಾದ ಮಹರ್ಷಿಗಳೂ, ಸಾಂಪ್ರದಾಯಿಕರೂ, ಅಭಿಯುಕ್ತರೂ ಇವರೆಲ್ಲರೂ ಏಕಮುಖವಾಗಿ ಪ್ರತ್ಯಕ್ಷತಾಸಿದ್ಧಿಗಾಗಿ ಮಾಡತಕ್ಕ ಬೀಜಾದಿ ಸಂಸ್ಕಾರಗಳನ್ನು ತಿಥ್ಯಾದಿಗಳಲ್ಲಿ ಮಾಡಬಾರದೆಂತಲೂ, ಅಂತಹ ಸಂಸ್ಕಾರಗಳಿಂದ ಕೂಡಿರತಕ್ಕ ದೃಕ್ಸಿದ್ಧ ತಿಥ್ಯಾದಿಗಳು ಗ್ರಹಣಾದಿ ಪ್ರತ್ಯಕ್ಷವಿಷಯಗಳಿಗೆ ಮಾತ್ರವಲ್ಲದೆ ಇತರ ಕರ್ಮಾನುಷ್ಠಾನಗಳಿಗೆ ಸರ್ವಥಾ ತ್ಯಾಜ್ಯವಾಗಿರುತ್ತವೆಂತಲೂ, ಮತ್ತು ಸಿದ್ಧಾಂತಶಾಸ್ತ್ರಸಿದ್ಧ ತಿಥ್ಯಾದಿಗಳೇ ಶ್ರೌತ–ಸ್ಮಾರ್ತಕರ್ಮಾಚರಣೆಗಳಿಗೆ ಗ್ರಾಹ್ಯವಾದವುಗಳೆಂತಲೂ ಸ್ಪಷ್ಟವಾಗಿ ಪ್ರತಿಪಾದಿಸಿರುವರು. ಅಂತಹ ಅನೇಕ ಶಾಸ್ತ್ರ, ಪುರಾಣ, ಸಿದ್ಧಾಂತ, ನಿಬಂಧಾದಿ ವಚನಗಳ ಪೈಕಿ ಹಿಂದಿನ ನೆಯ ಪ್ರಶ್ನೆಯ ಉತ್ತರದಲ್ಲಿ ಸೂಚಿತವಾಗಿರುವಂತೆ ಕೆಲವು ವಚನಗಳನ್ನು ವಾಚಕರ ಅವಗಾಹನೆಯ ಬಗ್ಗೆ ಈ ಕೆಳಗೆ ತೋರಿಸುವೆವು.

೧. ಸ್ಕಂದಪುರಾಣದ ಕಲಿಮಾಹಾತ್ಮ್ಯದಲ್ಲಿ ಪಾರ್ವತಿಗೆ ಪರಶಿವನು ಹೇಳಿದ್ದು— 'ದೃಕ್ಸಿದ್ಧಖೇಟಗ್ರಹಸಾಧಿತಾಸು ಕುರ್ವಂತಿ ಕೇಚಿತ್ತಿಥಿಷು ಪ್ರಮಾದಾತ್। ಶ್ರಾದ್ಧಾದಿಕಂ ತತ್ಪಿತೃಶಾಪತಸ್ತೇ ಪುಣ್ಯಕ್ಷಯಾದ್ದುರ್ಗತಿಮಾಪ್ನುವಂತಿ ॥' ಇದರ ಅರ್ಥವನ್ನು ಹಿಂದೆ ಪುಟ ೨೨ ರಲ್ಲಿ ಬರೆದಿದೆ.

೨. ಬೊಪ್ಪದೇವೀಯದಲ್ಲಿ— 'ದೃಕ್ಸಿದ್ಧಗ್ರಹಕಾಲೇನ(ಚಾರೇಣ) ಗ್ರಹಣಾದಿವಿನಿರ್ಣಯಃ । ಶಾಸ್ತ್ರಸಿದ್ಧಗ್ರಹಗತಿರದೃಷ್ಟಾರ್ಥೇಷು ಕರ್ಮಸು । ಆಗಮೋ ಬಾಧತೇ ಚಕ್ಷುರ್ನಿರ್ದುಷ್ಟೋ ದೋಷದೂಷಿತಂ॥' ತಾತ್ಪರ್ಯ– ದೃಕ್ಸಿದ್ಧಗ್ರಹರಿಂದ ಗ್ರಹಣಾದಿಗಳ ಕಾಲನಿರ್ಣಯವನ್ನು ಮಾಡಬೇಕು. ಅದೃಷ್ಟಾರ್ಥ (ತಿಥ್ಯಾದಿವಿಷಯಕ) ಕರ್ಮಗಳಲ್ಲಿ ಸಿದ್ಧಾಂತಶಾಸ್ತ್ರಸಿದ್ಧವಾದ ಗ್ರಹಗತಿಯನ್ನೇ ಸ್ವೀಕರಿಸಬೇಕು. ಯಾಕಂದರೆ— ಅದೃಷ್ಟವಾದ ಕರ್ಮಾರ್ಹಕಾಲವನ್ನು ಸಾಧಿಸುವ ವಿಷಯದಲ್ಲಿ ದೋಷಯುಕ್ತವಾದ ದೃಷ್ಟಿಯು ಅಸಮರ್ಥ

ವು. ನಿರ್ದೋಷವಾದ ಶಾಸ್ತ್ರವು ಅದನ್ನು ಬಾಧಿಸುತ್ತದೆ. ಅಂದರೆ ಚರ್ಮ ದೃಷ್ಟಿಗಿಂತ ಶಾಸ್ತ್ರದೃಷ್ಟಿಯು ಬಲವತ್ತರವಾಗಿದೆ.

೩. ತತ್ವವಿವೇಕದಲ್ಲಿ— 'ವೇಲಾಹೀನೇಽಂತರಂ ಯತ್ತದ್ಬೀಜಂ ಮತ್ತ್ವೈವ ಕಾಲಜಂ। ಕರ್ಮಾರ್ಹಃಖಚರಂ ಶುದ್ಧಂ ನಾಶಯಂತ್ಯಧಮಾ ಬಲಾತ್ ॥ ರವಿಣಾಲ್ಪಾಂತರಾತ್ಯಕ್ತಂ ತದ್ಬೀಜಂ ವಿಧುನಾ ಹೃತಂ। ಯಂತ್ರೈಶ್ಚ ಬಹುಭಿಸ್ತಜ್ಞಸ್ಫುಟಖೇಟೋದಿತೌ ಚ ಯೌ ॥ ದೃಷ್ಟ್ಯರ್ಥನಿರ್ಣಯಾದೇಶೌ ಅದೃಷ್ಟಾರ್ಥಂ ನ ತೌ ಹೃತಃ। ಅದೃಷ್ಟಫಲಸಿಧ್ಯರ್ಥಂಯಥಾಽರ್ಕಾದ್ಗಣಿತಂ ಕುರು। ಗಣಿತಂ ಯದಿ ದೃಷ್ಟಾರ್ಥಂ ತದ್ದೃಷ್ಟ್ಯುದ್ಭವತಃ ಸದಾ ॥"

ತಾತ್ಪರ್ಯ:— ವೇಲಾಹೀನವೆಂಬ (ಕಾಲಕೃತವ್ಯತ್ಯಯದಿಂದಾಗುವ) ದೋಷದಿಂದ ಗತಿಯಲ್ಲಿ ತೋರುವ ಅಂತರವನ್ನು ಬೀಜವೆಂದು ತಿಳಿದು ಅದನ್ನು ಅಧಮರು ಶಾಸ್ತ್ರಶುದ್ಧಗ್ರಹರಲ್ಲಿ ಸೇರಿಸಿ ತನ್ಮೂಲಕ ಕರ್ಮಾರ್ಹ (ತಿಥ್ಯಾದಿ) ಕಾಲವನ್ನು ಧ್ವಂಸಗೊಳಿಸುವರು. ತತ್ವವನ್ನು ಹೇಳಬೇಕಾದರೆ ಯಂತ್ರವೇಧಾದಿ ದೃಕ್ಪರೀಕ್ಷೆಯಿಂದ ಸಿದ್ಧವಾಗುವ ಬೀಜಸಂಸ್ಕೃತ ಗ್ರಹಗಳಿಂದ ಗ್ರಹಣಾದಿ ದೃಷ್ಟವಿಷಯಗಳನ್ನು ಮಾತ್ರ ನಿರ್ಣಯಿಸಬೇಕು. ಇನ್ನು ಅದೃಷ್ಟ (ತಿಥ್ಯಾದಿ) ನಿಮಿತ್ತಕವಾದ ಶ್ರೌತ-ಸ್ಮಾರ್ತಾದಿ ಕರ್ಮಗಳಿಗೆಲ್ಲ (ಕಾಲವನ್ನು ಸಿದ್ಧಪಡಿಸಲಿಕ್ಕಾಗಿ) ಕೇವಲ 'ಆರ್ಕ' ಅಂದರೆ ಸೂರ್ಯೋಪದಿಷ್ಟವಾದ ಸೂರ್ಯಸಿದ್ಧಾಂತಾನುಸಾರವಾಗಿ ಗಣಿತವನ್ನು ಮಾಡತಕ್ಕದ್ದು.

೪. ಕಾಲಾರ್ಕದಲ್ಲಿ— 'ಮಾಂದ್ಯೈಕಕರ್ಮಸಂಸಿದ್ಧವ್ಯರ್ಕೇಂದೂತ್ಪಾದಿತಾ ತಿಥಿಃ। ಶ್ರಾದ್ಧಾದಿಷು ಪರಿಗ್ರಾಹ್ಯಾ ಗ್ರಹಣಾದೌ ತು ಬೀಜಯುಕ್ ॥' ಇದರ ಅರ್ಥವನ್ನು ಹಿಂದೆ ಪುಟ ೧೫೧ ರಲ್ಲಿ ಕೊಟ್ಟಿದೆ.

೫. ಜ್ಯೋತಿಃಸಿದ್ಧಾಂತದಲ್ಲಿ— 'ಚಂದ್ರಾರ್ಕಶಶಿತುಂಗಾನಾಂ ಬೀಜಂ ತಿಥ್ಯಾದಿಸಾಧನೇ । ನ ಕರ್ತವ್ಯಂ ಹಿ ಕರ್ತವ್ಯಂ ಚಂದ್ರಾರ್ಕಗ್ರಹಣಾದಿಷು ॥' ತಾತ್ಪರ್ಯ–ತಿಥ್ಯಾದಿಗಳನ್ನು ಸಾಧಿಸುವಾಗ ಸೂರ್ಯ, ಚಂದ್ರ, ಚಂದ್ರೋಚ್ಚಗಳಿಗೆ ಬೀಜಸಂಸ್ಕಾರಗಳನ್ನು ಮಾಡಬಾರದು. ಪರಂತು ಗ್ರಹಣಾದಿಗಳಲ್ಲಿ ಅವನ್ನು ಉಪಯೋಗಿಸಬೇಕು.

೬. ಯಂತ್ರದೀಪಿಕಾವ್ಯಾಖ್ಯಾನದಲ್ಲಿ ಲಲ್ಲಾಚಾರ್ಯರು:— 'ಶೃಂಗೋನ್ನತೌ ಗ್ರಹಯುತೌ ಗ್ರಹಣೇ ತಥಾಽಸ್ತೇ ಛಾಯಾನಿರೀಕ್ಷಣವಿಧಾವುದಯೇ ಪ್ರದೇಯಂ। ಬೀಜಂ ಫಲಂ ತಿಥಿಭಯೋಗವಿಧೌ ತ್ವದೇಯಂ ಚಂದ್ರೇ ಪ್ರದೇಯಮಖಿಲಂ ಕ್ಷಿತಿಜಾದಿಕೇಷು ॥' ತಾತ್ಪರ್ಯ— ಶೃಂಗೋನ್ನತಿ, ಗ್ರಹಯುತಿ, ಗ್ರಹಣ, ಅಸ್ತೋದಯ, ಛಾಯಾಸಾಧನ ಈ ಪ್ರಸಂಗಗಳಲ್ಲಿ ಬೀಜಸಂಸ್ಕಾರಗಳನ್ನೆಲ್ಲ ಉಪಯೋಗಿಸಬೇಕು. ತಿಥಿನಕ್ಷತ್ರಾದಿಗಳಿಗೆ ಅದನ್ನು ಉಪಯೋಗಿಸಲೇ ಬಾರದು. ಕುಜಾದಿ ಗ್ರಹರಿಗೆ ಅದನ್ನು ಉಪಯೋಗಿಸತಕ್ಕದ್ದು.

೭. ಶಾಕಲ್ಯಸಂಹಿತೆಯಲ್ಲಿ ನಾರದರಿಗೆ ಬ್ರಹ್ಮದೇವರು ಹೇಳಿದ್ದು:- '
ಗ್ರಹಣೇ ಗ್ರಹಯೋಗೇ ಚ ಕಾಲಭಾಲ್ಲಗ್ನಸಾಧನೇ । ಶೃಂಗೋನ್ನತ್ಯುದಯಾಸ್ತಾದೌ ಗ್ರಹೇ ಬೀಜಂ ವಿಧೀಯತೇ ॥ ತಿಥ್ಯಾದಿಸಾಧನೇ ಕ್ವಾಪಿ ನಾರ್ಕೇಂದ್ವೋರ್ಬೀಜಯೋಗಿತಾ । ಅನ್ಯಥಾ ಸಾಯನಾರ್ಕಸ್ಯ ರಾಶಿಸಂಕ್ರಮಸಂಭವೇ । ಶುದ್ಧಸಂಕ್ರಮಣಶ್ರಾದ್ಧಂ ಪ್ರಸಜ್ಯೇತ ನ ಯುಜ್ಯತೇ ॥'
ತಾ:— ಗ್ರಹಣ, ಗ್ರಹಯೋಗಾದಿಗಳಲ್ಲಿ ಪ್ರತ್ಯಕ್ಷಕ್ಕೆ ಸರಿಬರುವಂತೆ ಬೀಜಸಂಸ್ಕಾರಮಾಡಬೇಕು. ತಿಥ್ಯಾದಿಸಾಧನದಲ್ಲಿ ಮಾತ್ರ ಸೂರ್ಯಚಂದ್ರರಿಗೆ ಎಂದೆಂದೂ ಬೀಜಸಂಸ್ಕಾರಮಾಡಬಾರದು. ಈ ವ್ಯವಸ್ಥೆಯನ್ನು ಬಿಟ್ಟು ಎಲ್ಲದಕ್ಕೂ ಪ್ರತ್ಯಕ್ಷವೇ ಆಗಬೇಕೆಂದರೆ ಪ್ರತ್ಯಕ್ಷವೆನಿಸುವ ಸಾಯನಸೂರ್ಯನ ಮೇಷಾಯನಾದಿ (ಚಲಸಂಕ್ರಾಂತಿ) ಗಳಲ್ಲಿಯೇ ಶುದ್ಧಸಂಕ್ರಮಣದಲ್ಲಿ ಮಾಡತಕ್ಕ ಶ್ರಾದ್ಧವನ್ನು ಮಾಡುವಂಥ ಅನರ್ಥವೊದಗೀತು. ಆದರೆ ಇದು ಯೋಗ್ಯವಾದ ಮಾತಲ್ಲ. ಆದ್ದರಿಂದ ಪ್ರತ್ಯಕ್ಷದ ಆಗ್ರಹವನ್ನು ಹಿಡಿಯದೆ ಮಂದಸಂಸ್ಕಾರಸಿದ್ಧರಾದ ಸೂರ್ಯಚಂದ್ರರಿಂದಲೇ ತಿಥ್ಯಾದಿಗಳನ್ನು ಸಾಧಿಸಬೇಕು.

೮. ತಿಥಿಕೌಸ್ತುಭದಲ್ಲಿ— ' ಸ್ವದೇಶೋಚಿತನಿರ್ಬೀಜಗ್ರಹೈಃ ಪಂಚಾಂಗಸಾಧನಂ । ಸಬೀಜೈರ್ಗ್ರಹಣಾದೀನಾಂ ಪುಣ್ಯಕರ್ಮಣಿ ಶಸ್ಯತೇ ॥'' ಇದರ ಅರ್ಥವನ್ನು ಹಿಂದೆ ೧೫೧ ನೇ ಪುಟದಲ್ಲಿ ಕೊಟ್ಟಿದೆ.

೯. ವಿಷ್ಣುಧರ್ಮೋತ್ತರೋದಾಹೃತ ವಸಿಷ್ಠಸಿದ್ಧಾಂತದಲ್ಲಿ— 'ಯಂತ್ರವೇಧಾದಿನಾ ಜ್ಞಾತಂ ಯದ್ಬೀಜಂ ಗಣಕೈಸ್ತತಃ। ಗ್ರಹಣಾದಿ ಪರೀಕ್ಷೇತ ನ ತಿಥ್ಯಾದಿ ಕದಾಚನ ॥' ತಾತ್ಪರ್ಯ:— ಗಣಿತಶಾಸ್ತ್ರಜ್ಞರು ಯಂತ್ರವೇಧಾದಿಗಳಿಂದ ಸಿದ್ಧಮಾಡುವ ಬೀಜಸಂಸ್ಕಾರಗಳನ್ನು ಗ್ರಹಣಾದಿಗಳಲ್ಲಿ ಹೊರತು ತಿಥ್ಯಾದಿಗಣಿತದಲ್ಲಿ ಎಂದಿಗೂ ಮಾಡಬಾರದು.

೧೦. ಲೋಮಶಸಿದ್ಧಾಂತದಲ್ಲಿ— ಪ್ರತ್ಯಹಂ ತಿಥಿನಕ್ಷತ್ರಯೋಗಾದ್ಯಾನಯನೇ ವಿಧುಃ । ನ ಬೀಜಸಂಸ್ಕೃತೋ ಗ್ರಾಹ್ಯೋ ಗ್ರಹಣಾದೌ ಸಬೀಜಕಃ ॥' ತಾತ್ಪರ್ಯ— ಗ್ರಹಣಾದಿಗಳಲ್ಲಿ ಹೊರತು ನಿತ್ಯದ ತಿಥ್ಯಾದಿಗಣಿತದಲ್ಲಿ ಚಂದ್ರನಿಗೆ ಬೀಜಸಂಸ್ಕಾರಮಾಡಕೂಡದು.

೧೧. ಸಿದ್ಧಾಂತಸಂಗ್ರಹದಲ್ಲಿ— 'ಮಾಂದಂ ಕರ್ಮೈಕಮರ್ಕೇಂದ್ವೋಃ ಕಾರ್ಯಂ ತಿಥ್ಯಾದಿಸಾಧನೇ । ಚತಸ್ರ ಉದಯಾಸ್ತಾದೌ ಗ್ರಹಣೇ ಪಂಚ ಸಂಸ್ಕ್ರಿಯಾಃ ॥' ತಾ— ತಿಥ್ಯಾದಿಸಾಧನೆಗಳಲ್ಲಿ ಮಂದಕರ್ಮವೊಂದು, ಉದಯಾಸ್ತಗಳಲ್ಲಿ ನಾಲ್ಕು, ಮತ್ತು ಗ್ರಹಣಗಳಲ್ಲಿ ಐದು ಸಂಸ್ಕಾರಗಳನ್ನು ಮಾಡಬೇಕು.

೧೨. ಬ್ರಹ್ಮಸಿದ್ಧಾಂತದಲ್ಲಿ— ' ಮಂದೋಚ್ಚಾಭ್ಯಾಮರ್ಕಚಂದ್ರೌ ಯದಾ ಮಂದಫಲಂ ಮುನೇ । ಆಕೃಷ್ಯೇತೇ ಏವ ತಸ್ಮಾನ್ಮಂದಕರ್ಮೈಕಮೇತಯೋಃ ॥' ತಾತ್ಪರ್ಯ— ಸೂರ್ಯಚಂದ್ರರಿಗೆ ಮಂದೋಚ್ಚದ ಆಕ

ರ್ಪಣವಷ್ಟೇ ಸ್ವಾಭಾವಿಕವಾದದ್ದು. ಆದ್ದರಿಂದ ಆ ಸಂಸ್ಕಾರವನ್ನು ಮಾತ್ರ ಮಾಡಬೇಕು. ಅರ್ಥಾತ್ ಇತರ ಸಂಸ್ಕಾರಗಳನ್ನು ಮಾಡಕೂಡದು.

೧೩. ವೃದ್ಧವಸಿಷ್ಠಸಿದ್ಧಾಂತದಲ್ಲಿ— '**ಕರ್ಮಣೈಕೇನ ಮಾಂದೇನ ಸ್ಪಷ್ಟೋ ಭಾನುಸ್ತಥಾ ಶಶೀ। ಭೌಮಾದಯಃ ಸ್ಫುಟಾಃ ಖೇಟಾಶ್ಚತುರ್ಭಿಃ ಕರ್ಮಭಿಃ ಸ್ಮೃತಾಃ ॥**' ಮೇಲಿನ ಶ್ಲೋಕದಂತೆಯೇ ಇದರ ತಾತ್ಪರ್ಯವಿದೆ.

೧೪. ಸೂರ್ಯಸಿದ್ಧಾಂತದಲ್ಲಿ—'**ಮಾಂದಂ ಕರ್ಮೈಕಮರ್ಕೇಂದ್ವೋರ್ಭೌಮಾದೀನಾಮಥೋಚ್ಯತೇ।**' ಮೇಲಿನ ಶ್ಲೋಕದಂತೆಯೇ ಇದರ ತಾತ್ಪರ್ಯವಿದೆ.

೧೫. ಜ್ಯೋತಿಃಸಿದ್ಧಾಂತಸಂಗ್ರಹದಲ್ಲಿ—"ಶೀತಾಂಶುಶ್ಚರಬೀಜೇನ ಸಂಸ್ಕೃತೋ ದೃಕ್ಸಮೋ ಭವೇತ್ । ದೃಕ್ಸಿದ್ಧೇಂದುಸಮಾನೀತಂ ತಿಥ್ಯಾದ್ಯಂ ನೈವ ಯುಜ್ಯತೇ ॥ ವೈದಿಕೇಷ್ವವಿಗೀತೇಷು ಹವ್ಯಕವ್ಯಾದಿಕರ್ಮಸು। ಆಸ್ತಿಕೈಃ ಶಾಸ್ತ್ರಶರಣೈರನುಷ್ಠಾನೇಷು ಸಂತತಂ ॥" ತಾ:—ಚರಬೀಜದಿಂದ ಸಂಸ್ಕೃತನಾದ ಚಂದ್ರನು ದೃಕ್ಸಿದ್ಧನಾಗುವನು. ಆದರೆ ದೃಕ್ಸಿದ್ಧಗ್ರಹಗಳಿಂದ ಸಾಧಿಸಿದ ತಿಥ್ಯಾದಿಗಳು ಪರಮಪವಿತ್ರವಾದ ಹವ್ಯಕವ್ಯಾದಿ ವೈದಿಕಕರ್ಮಾನುಷ್ಠಾನಗಳಿಗೆ ಅಯೋಗ್ಯವಾಗಿರುವುದರಿಂದ ಅವನ್ನು ಶಾಸ್ತ್ರಶರಣರಾದ ಆಸ್ತಿಕರು ಸರ್ವಥಾ ಸ್ವೀಕರಿಸಬಾರದು.

೧೬. ಸಿದ್ಧಾಂತರತ್ನದಲ್ಲಿ— 'ಮಾಂದಂ ಕರ್ಮೈಕಮರ್ಕೇಂದ್ವೋಃ ಕಾರ್ಯಂ ತಿಥ್ಯಾದಿಸಾಧನೇ ।' ತಾ—ತಿಥ್ಯಾದಿಗಣಿತದಲ್ಲಿ ಸೂರ್ಯ-ಚಂದ್ರರಿಗೆ ಮಂದಸಂಸ್ಕಾರವನ್ನಷ್ಟೇ ಮಾಡಬೇಕು.

೧೭. ಶಂಕರಾಚಾರ್ಯಕೃತ ಖಚರದರ್ಪಣದಲ್ಲಿ— 'ಮಾಂದೈಕಕರ್ಮಸಂಸ್ಕೃತಚಂದ್ರಾರ್ಕೌ ತಿಥಿಭಯೋಗಕರಣಾನಾಂ । ಯೋಗ್ಯೌ ಸ್ಯಾತಾಂ ಗ್ರಹಣೇ ಚಂದ್ರೋऽನ್ಯೈಃ ಸಂಸ್ಕೃತೋ ಗ್ರಾಹ್ಯಃ ॥' ತಾ— ತಿಥಿ, ನಕ್ಷತ್ರ, ಯೋಗ, ಕರಣಗಳಲ್ಲಿ ಸೂರ್ಯಚಂದ್ರರಿಗೆ ಮಂದಸಂಸ್ಕಾರವನ್ನು ಮಾತ್ರ ಮಾಡಬೇಕು. ಮಿಕ್ಕುಳಿದ ಕೇಂದ್ರಚ್ಯುತಿ ಮೊದಲಾದ ಸಂಸ್ಕಾರಗಳನ್ನು ಗ್ರಹಣದಲ್ಲಿ ಚಂದ್ರನಿಗೆ ಮಾಡಬೇಕು.

೧೮. ಅನ್ಯತ್ರ ಸ್ಫುಟಾಧಿಕಾರೇ ಗ್ರಹಣನಿರ್ಣಯೇ— "ಗ್ರಹಣಗ್ರಹೋದಯಾಸ್ತಶೃಂಗೋನ್ನತಿಖಚರಯೋಗಕಾಲೇಷು । ದೃಕ್ಸಿದ್ಧೇಂದುಃ ಸಾಧ್ಯಃ ಸ್ಯಾದೇವಂ ನೇತರಕ್ರಿಯಾಸು ಬುಧೈಃ ॥" ತಾ:— ಗ್ರಹಣ, ಉದಯ, ಅಸ್ತ, ಶೃಂಗೋನ್ನತಿ, ಗ್ರಹಯೋಗಾದಿಗಳಲ್ಲಿ ದೃಕ್ಸಿದ್ಧಚಂದ್ರನನ್ನು ಸಾಧಿಸಬೇಕು. ಬೇರೆ ವಿಷಯಗಳಲ್ಲಿ ಕೂಡದು.

೧೯. ತಂತ್ರಸಂಗ್ರಹವ್ಯಾಖ್ಯಾನದಲ್ಲಿ— 'ವಿಧುರಯಮುಪರಾಗೇ ಖೇಚರಾಣಾಂ ಚ ಯೋಗೇ ನಿಜತನುಸಿತಮಾನಾದ್ಯಂಗುಲಾನಾಂ ಪ್ರಸಂಗೇ। ಕುತಲಗಜನವಯ್ಯೈರಗ್ರಗಣ್ಯೋऽಪ್ಯಗಣ್ಯಃ ಸಕಲತಿಥಿಭಯೋಗೋತ್ಪತ್ತಿಪ್ರ

ದ್ಧಿಕ್ಷಯೇಷು ॥' ತಾ:- ಈ ದೃಕ್ಸಿದ್ಧಚಂದ್ರನು ಗ್ರಹಣ, ಗ್ರಹಯೋಗ, ಶೃಂಗೋನ್ನತಿ ಮುಂತಾದವುಗಳಲ್ಲಿ ಪ್ರತ್ಯಕ್ಷಗ್ರಾಹ್ಯನಾದರೂ ತಿಥಿ-ನಕ್ಷತ್ರಾದಿಗಳ ಗಣಿತದಲ್ಲಿಯೂ, ವೃದ್ಧಿಕ್ಷಯಗಳಲ್ಲಿಯೂ ಈ ದೃಕ್ಸಿದ್ಧ ಚಂದ್ರನನ್ನು ಸ್ವೀಕರಿಸಬಾರದು.

೨೦. ಗಣಕಾನಂದದ ಮಧ್ಯಮಾಧ್ಯಾಯದಲ್ಲಿ- 'ಕರ್ತವ್ಯಾಃ ಪಂಚ ಸಂಸ್ಕಾರಾ ಮಧ್ಯಖೇಟೇಷು ಸರ್ವದಾ | ಪೂರ್ವಂ ಧ್ರುವಃ ಪ್ರಥಮತಸ್ತ್ರಿಗುಣಾಬ್ದಸ್ತತಃ ಪರಂ ॥ ದೇಶಾಂತರಂ ಬೀಜಫಲಂ ಬಾಹ್ವೋಃ ಫಲಮಿತಿ ಕ್ರಮಾತ್ | ಸೂರ್ಯಜ್ಞಯೋರ್ಬೀಜಫಲಮನುಕ್ತಂ ಶಾಸ್ತ್ರಕರ್ತೃಭಿಃ ॥ ಚಂದ್ರೋಚ್ಚಸ್ಯ ತಥಾ ರಾಹೋಶ್ಚಂದ್ರಾರ್ಕಗ್ರಹಣಾದಿಷು | ಅವಶ್ಯಕತ್ವಾತ್ಕರ್ತವ್ಯಂ ನ ತಿಥ್ಯಾನಯನಾದಿಷು ॥' ತಾ-- ಮಧ್ಯಮಗ್ರಹಗಳಿಗೆ ಧ್ರುವ, ತ್ರಿಗುಣಾಬ್ದ, ದೇಶಾಂತರ, ಬೀಜಫಲ, ಬಾಹುಫಲ ಎಂಬ ೫ ಸಂಸ್ಕಾರಗಳನ್ನು ಮಾಡಬೇಕು. ಶಾಸ್ತ್ರಕರ್ತೃಗಳು ಸೂರ್ಯಬುಧರಿಗೆ ಬೀಜಫಲವನ್ನು ಹೇಳಿಲ್ಲ. ಚಂದ್ರಸೂರ್ಯರಿಗೂ, ಚಂದ್ರೋಚ್ಚ-ರಾಹು ಇವುಗಳಿಗೂ ಗ್ರಹಣಾದಿಗಳಲ್ಲಿ ಅವಶ್ಯವಿರುವುದರಿಂದ ಬೀಜಸಂಸ್ಕಾರ ಮಾಡಬೇಕು. ಆದರೆ ತಿಥ್ಯಾದಿ ಸಾಧನೆಯಲ್ಲಿ ಬೀಜಸಂಸ್ಕಾರವನ್ನು ಮಾಡಕೂಡದು.

೨೧. ಗರ್ಗಮಹರ್ಷಿಗಳು-"ಶೃಂಗೋನ್ನತಿಯುತಿಚ್ಛಾಯಾಗ್ರಹಾಸ್ತೋದಯಸಾಧನೇ | ಬೀಜೇನ ಸಂಸ್ಕೃತಾಃ ಖೇಟಾಸ್ತದ್ಧೀನಾಸ್ತ್ವನ್ಯಕರ್ಮಸು ॥' ತಾತ್ಪರ್ಯ— ಶೃಂಗೋನ್ನತಿ, ಯುತಿ, ಛಾಯಾಸಾಧನ, ಗ್ರಹಣ, ಉದಯಾಸ್ತ ಈ ವಿಷಯಗಳಲ್ಲಿ ಹೊರತು ಇತರ ವಿಷಯಗಳಲ್ಲಿ ಬೀಜಸಂಸ್ಕಾರ ಮಾಡಕೂಡದು.

೨೨. ಜ್ಯೋತಿರ್ವಿದಾಭರಣದಲ್ಲಿ- "ವೃದ್ಧಿಕ್ಷಯೌ ಸ್ತಃ ಪರಮೌ ತಿಥೌ ಸದಾ ವ್ಯರ್ಧಾ ರಸಾಃ ಸಾಂಘ್ರಿರಸಾಶ್ಚ ನಾಡಿಕಾಃ ॥" ಇದರ ಅರ್ಥವನ್ನು ಹಿಂದೆ ೧೫೦ ನೇ ಪುಟದಲ್ಲಿ ಕೊಟ್ಟಿದೆ.

೨೩. ಶ್ರೀನಿವಾಸೀಯ ತಿಥಿನಿರ್ಣಯಕಾರಿಕೆಯಲ್ಲಿ- 'ಅತಃ ಪೈತೃಕಕರ್ಮಾದೌ ತತ್ಕಾಲಚರಬೀಜಕೈಃ | ಬಾಣವೃದ್ಧಾ ರಸಕ್ಷೀಣಾ ಗ್ರಾಹ್ಯಾ ನಾನ್ಯಾ ತಿಥಿಃ ಕ್ವಚಿತ್ ॥' 'ಯದ್ಯೇವಂಭೂತಪಂಚಾಂಗಂ ಸಮೀಪೇ ನೈವ ಲಭ್ಯತೇ | ತದಾ ದೂರಾದ್ಭವಂ ವಾಪಿ ಗೃಹ್ಣೀಯಾಚ್ಛ್ರಾದ್ಧಕರ್ಮಣಿ ॥' ತಾ-- ಪೈತೃಕಾದಿ ಕರ್ಮಗಳಲ್ಲೆಲ್ಲ ಚರಬೀಜಗಳಿಂದ (ಆದರೂ) ಬಾಣವೃದ್ಧಿ ರಸಕ್ಷಯಬರುವ ತಿಥಿಯನ್ನೇ ಸ್ವೀಕರಿಸಬೇಕು. ಬೇರೆ ರೀತಿಯ ತಿಥಿಯು ಸರ್ವಥಾ ತ್ಯಾಜ್ಯವಾಗಿರುವದು. ಇಂಥ ಬಾಣವೃದ್ಧಿ-ರಸಕ್ಷಯದ ತಿಥಿಯುಳ್ಳ ಪಂಚಾಂಗವು ಹತ್ತರದಲ್ಲಿ ಸಿಗದಿದ್ದರೆ ಆಗ ದೂರದೇಶದಲ್ಲಿ ಆದ ಪಂಚಾಂಗವನ್ನಾದರೂ ನೋಡಿಕೊಂಡು ಅದರಂತೆ ಶ್ರಾದ್ಧಾದಿಕರ್ಮಗಳನ್ನು ಆಚರಿಸಬೇಕು.

೨೪. ಹೋರಾಪರ್ವಣದಲ್ಲಿ— 'ದೃಕ್ಸಿದ್ಧಗ್ರಹಚಾರೇಣ ಹೋರಾಫಲಮುದೀರಯೇತ್ | ಸಿದ್ಧಾಂತಗ್ರಹಚಾರೇಣ ಶ್ರಾದ್ಧಾದಿಸಮಯಂ ವದೇತ್ ||' ತಾ— ದೃಕ್ಸಿದ್ಧಗ್ರಹಗಳಿಂದ ಹೋರಾಫಲವನ್ನೂ, ಸಿದ್ಧಾಂತಗ್ರಹಗಳಿಂದ ಶ್ರಾದ್ಧಾದಿ ಕರ್ಮಕಾಲವನ್ನೂ ನಿರ್ಣಯಿಸಿ ಹೇಳಬೇಕು.

೨೫. ಭಗವಾನ್ ವ್ಯಾಸರು- 'ಸೌರೋಪನಿಷದೇವಾದ್ಯಾ ಕಲ್ಪೇತ್ವಸ್ಮಿನ್ ಸನಾತನೀ | ಯಾಮಮಾದಿತ್ಯಃ ಸ್ವಯಂ ಪ್ರಾಹ ಮಯಾಯ ಪರಿಪೃಚ್ಛತೇ || ಕಾಲಜ್ಞಾನಂ ತು ತತ್ಸಿದ್ಧಂ ವಿಶುದ್ಧಂ ನಾನ್ಯದಿಷ್ಯತೇ | ತದ್ವಿರುದ್ಧಂ ತು ಯತ್ಸರ್ವಮಪರಿಗ್ರಾಹ್ಯಮೇವ ತತ್ ||' ಇದರ ಅರ್ಥವನ್ನು ಹಿಂದೆ ೧೪ ನೇ ಪುಟದಲ್ಲಿ ಕೊಟ್ಟಿದೆ.

೨೬. ಭಾರ್ಗವಸಂಹಿತೆಯಲ್ಲಿ – 'ಸೂರ್ಯಾಂಶಪುರುಷಪ್ರೋಕ್ತಂ ತಂತ್ರಂ ತಿಥ್ಯಾದಿಸಮ್ಮತಂ | ಗ್ರಹಣಾದೌ ತು ವಕ್ಷ್ಯಾಮಿ ಸವಿಶೇಷಮಥೋ ಶೃಣು ||' ಇದರ ಅರ್ಥವು ಹಿಂದೆ ೧೪ ನೇ ಪುಟದಲ್ಲಿದೆ.

೨೭. ವರಾಹಮಿಹಿರರ ಪಂಚಸಿದ್ಧಾಂತಿಕೆಯಲ್ಲಿ— "ಸ್ಪಷ್ಟೋ ಬ್ರಹ್ಮಪ್ರೋಕ್ತಸ್ತಸ್ಯಾಸನ್ನಸ್ತು ರೋಮಶೋ ಜ್ಞೇಯಃ | ಸ್ಪಷ್ಟತರಃ ಸಾವಿತ್ರಃ ಪರಿಶಿಷ್ಟೌ ದೂರವಿಭ್ರಷ್ಟೌ ||' ತಾ— ಸೂರ್ಯಸಿದ್ಧಾಂತವು ಸ್ಪಷ್ಟತರವಾಗಿರುವದು. ಅದಕ್ಕೆ ಆಸನ್ನವಾಗಿ ಬ್ರಹ್ಮ, ರೋಮಶ ಸಿದ್ಧಾಂತಗಳಿರುವವು. ಇತರ ಸಿದ್ಧಾಂತಗಳೆರಡು ದೂರವಾಗಿರುವವು. ಇಲ್ಲಿ ಹೀಗೆ ೫ ಸಿದ್ಧಾಂತಗಳ ವಿಮರ್ಶೆ ಮಾಡಿರುವಲ್ಲಿ ಅವೆಲ್ಲವೂ ೫-೬ ವೃದ್ಧಿ-ಕ್ಷಯದ ತಿಥಿಗಳನ್ನೇ ಹೇಳುತ್ತವೆಂಬುದನ್ನು ಲಕ್ಷಿಸಬೇಕು. ಮತ್ತು ಆ ಪೈಕಿ ಸೂರ್ಯಸಿದ್ಧಾಂತವೇ ಸ್ಪಷ್ಟತರವೆಂದು ಹೇಳಿರುವುದನ್ನು ಮರೆಯಬಾರದು.

೨೮. ಸ್ಮೃತಿಸಾರಸಮುಚ್ಚಯದಲ್ಲಿ:—" ಸೂರ್ಯಸಿದ್ಧಾಂತಪಂಚಾಂಗಂ ವಿಲೋಕ್ಯೈವ ಪ್ರವರ್ತಯೇತ್ | ಪ್ರಮಾಣಂ ತದಿತಿ ಜ್ಞೇಯಮನ್ಯಥಾ ವ್ಯಾಕುಲಂ ಭವೇತ್ || " ಇದರ ಅರ್ಥವನ್ನು ಹಿಂದೆ ೧೪ ನೇ ಪುಟದಲ್ಲಿ ಕೊಟ್ಟಿದೆ.

ಇವರಂತೆ ಶಿವ-ಬ್ರಹ್ಮಾದಿದೇವತೆಗಳೂ, ವಸಿಷ್ಠ-ಗರ್ಗ-ವ್ಯಾಸ-ಭಾರ್ಗವ- ಶಾಕಲ್ಯಾದಿ ಮಹರ್ಷಿಗಳೂ, ಸ್ಕಾಂದ- ವಿಷ್ಣುಧರ್ಮೋತ್ತರಾದಿ ಪುರಾಣಗಳೂ, ಬ್ರಾಹ್ಮ-ಸೌರ-ರೋಮಶಾದಿ ಸಿದ್ಧಾಂತಗಳೂ, ಬೋಪ್ಪದೇವ-ವರಾಹಮಿಹಿರ-ಲಲ್ಲ-ಕಮಲಾಕರರಂಥ ವಿಪ್ರಸ್ತ್ರೀಕಾಂಡರೂ, ಮುಂದೈಕಸಂಸ್ಕಾರ ಸಂಸ್ಕೃತ ಸೂರ್ಯಸಿದ್ಧಾಂತಾನುಸಾರಿ ಬಾಣವೃದ್ಧಿ- ರಸಕ್ಷಯಲಕ್ಷಣದ ತಿಥ್ಯಾದಿಗಳೇ ಕರ್ಮಾನುಷ್ಠಾನಗಳಲ್ಲಿ ಗ್ರಾಹ್ಯವೆಂದೂ, ತದಿತರ ಬೀಜಾದಿ ಸಂಸ್ಕಾರಗಳನ್ನು ಮಾಡಿರುವ ನವೀನದೃಕ್ಪಂಚಾಂಗದ ೮-೧೦ ವೃದ್ಧಿ-ಕ್ಷಯಲಕ್ಷಣದ ತಿಥ್ಯಾದಿಗಳು ಸರ್ವಾತ್ಮನಾ ಅಗ್ರಾಹ್ಯಗಳೆಂದೂ ಸ್ಪಷ್ಟವಾಗಿ ಉದ್ಘೋಷಿಸುತ್ತಿರುವಾಗ ಅದೊಂದನ್ನೂ ಲಕ್ಷಿಸದೆ, ಮತ್ತು ದೃಕ್ಸಿದ್ಧ ತಿಥ್ಯಾದಿಗಳಿಂದ

ನಾವು ಮೇಲೆ ವಿವರಿಸಿದಂತೆ ಧರ್ಮಶಾಸ್ತ್ರೋಕ್ತ ಕಾಲನಿರ್ಣಯಗಳಿಗೆಲ್ಲ ಅಸು ಪಪತ್ತಿಯುಂಟಾಗುವುದೆಂದು ಧರ್ಮಶಾಸ್ತ್ರಪರಿಚಯವಿರುವ ಸಾಮಾನ್ಯಜನರಿ ಗಾದರೂ ತಿಳಿಯಬಹುದಾಗಿರುವುದನ್ನು ದೃಕ್ಪಕ್ಷದ ಪಂಡಿತರೂ ಸಹ ತಿಳಿಯ ಬಹುದಾಗಿದ್ದರೂ ಅವುಗಳಿಗೆಲ್ಲ ತಿಲಾಂಜಲಿಯನ್ನೇ ಕೊಟ್ಟು ಸ್ವಮತಾಗ್ರಹ ದಿಂದ ಶಾಸ್ತ್ರವಿರುದ್ಧವಿರುವ ತಮ್ಮ ದೃಕ್ಪಂಚಾಂಗವೇ ಶಾಸ್ತ್ರಸಿದ್ಧವೆಂದು ಸಮರ್ಥಿಸಲು ಪ್ರಯತ್ನಿಸಿದ್ದರಿಂದ "ಸ್ವಯಂ ನಷ್ಟಃ ಪರಾನ್ನಾಶಯತಿ।" ಎಂಬಂತೆ ಎಂತಹ ಭಯಂಕರವಾದ ಪ್ರಮಾದವಾಗಿದೆಯೆಂಬುದು ಸುವಿಚಾ ರಿಗಳಿಗೆ ತಿಳಿಯದಿರಲಿಕ್ಕಿಲ್ಲ.

ಈ ವರೆಗೂ ನಾವು ಶ್ರುತಿ, ಸ್ಮೃತಿ, ಪುರಾಣ, ನ್ಯಾಯ, ಯುಕ್ತಿ, ಅಭಿಯುಕ್ತೋಕ್ತಿಗಳಿಂದೆಲ್ಲ ಸಿದ್ಧಾಂತಾನುಸಾರಿಪಂಚಾಂಗವೇ ಶಾಸ್ತ್ರಸಮ್ಮತ ವಾದುದೆಂದೂ, ನವೀನದೃಕ್ಪಂಚಾಂಗವು ಸರ್ವಥಾ ಶಾಸ್ತ್ರವಿರುದ್ಧವಿರುವುದೆಂ ದೂ ಸಿದ್ಧಮಾಡಿರುತ್ತೇವೆ. ಆದರೆ ದೃಕ್ಪಕ್ಷದ ದುರಾಗ್ರಹವುಳ್ಳವರು ಅಂತಹ ಪ್ರಮಾಣವಾಕ್ಯಗಳಿಗೆಲ್ಲ ವಿರುದ್ಧಾರ್ಥವನ್ನು ಕಲ್ಪಿಸಿ, ವಾಕ್ಯಾರ್ಥಜ್ಞಾನವಿಲ್ಲದ ಸಾಮಾನ್ಯಜನರಿಗೆ ಏನಾದರೊಂದು ಹೇಳಿ ಅಡ್ಡಹಾದಿಗೆಳೆಯಲು ಪ್ರಯತ್ನಿಸ ಬಹುದು. ಆದ್ದರಿಂದ ಅಂಥ ಸಾಮಾನ್ಯಜನರ ಅಭಿಪ್ರಾಯದ ಬಗ್ಗೆ ನಾವು ಹೇಳತಕ್ಕದ್ದು ಇನ್ನೊಂದಿದೆ. ಅದೇನಂದರೆ— ನಮ್ಮ ವೈದಿಕಧರ್ಮಾನುಯಾ ಯಿಗಳಲ್ಲಿ ಶ್ರುತಿ, ಸ್ಮೃತಿ, ಪುರಾಣಾದಿ ಸಮಸ್ತಶಾಸ್ತ್ರಾರ್ಥಗಳನ್ನು ಮೈಗೂಡಿ ಸಿಕೊಂಡು, ವೈದಿಕಧರ್ಮದ ಅಭ್ಯುದಯಕ್ಕಾಗಿಯೇ ತಮ್ಮ ಇಡೀ ಜನ್ಮವನ್ನು ಮೀಸಲಾಗಿಟ್ಟು, ಅನೇಕ ಪ್ರಾಮಾಣಿಕಗ್ರಂಥಗಳನ್ನು ರಚಿಸಿ, ಶಿಷ್ಟಜನರಿಗೆಲ್ಲ ಪ್ರಾತಃಸ್ಮರಣೀಯರಾಗಿ, ಚತುರ್ವೇದಭಾಷ್ಯಾಚಾರ್ಯರೆಂದು ಸುಪ್ರಸಿದ್ಧರಾ ದ ಶ್ರೀಮಜ್ಜಗದ್ಗುರು ವಿದ್ಯಾರಣ್ಯಸ್ವಾಮಿಗಳವರು ಧರ್ಮಶಾಸ್ತ್ರ–ಜ್ಯೋತಿಃಶಾ ಸ್ತ್ರಗಳ ರಹಸ್ಯತತ್ವಗಳನ್ನೆಲ್ಲ ತಿಳಿದುಕೊಂಡವರಷ್ಟೇ ಅಲ್ಲದೆ, ಅಶೇಷವಿದ್ವಜ್ಜ ನರ ಆದರಕ್ಕೆ ಪಾತ್ರವಾಗಿರುವ ಕಾಲಮಾಧವ, ಪರಾಶರಮಾಧವೀಯಾದಿ ಧರ್ಮಶಾಸ್ತ್ರಗ್ರಂಥಗಳನ್ನೂ, ದೃಗ್ಗಣಿತಪ್ರಭಾ ಎಂಬ ದೃಗ್ಗಣಿತಗ್ರಂಥವ ನ್ನೂ ರಚಿಸಿರುವುದು ಪ್ರಸಿದ್ಧವಾಗಿದೆ. ಅಂಥಾ ಮಹಾಮಹಿಮರು ಸ್ಪಷ್ಟವಾಗಿ ಹೇಳಿರುವುದೇನಂದರೆ— "ಸೂರ್ಯಸಿದ್ಧಾಂತಶಾಸ್ತ್ರೇಣ ಸಮಾನೀತಾ ಗ್ರಹಾಸ್ಸದಾ। ನಿತ್ಯೇ ಕರ್ಮಣ್ಯುಪಾದೇಯಾ ನ ತು ದೃಗ್ಗಣಿತಾಗತಾಃ॥ ನೈಮಿತ್ತಿಕೇ* ಕರ್ಮಣಿ ತು ಗ್ರಾಹ್ಯಾ ದೃಗ್ಗಣಿತಾಗತಾಃ। ಕಾಮ್ಯೇ ತೂಭಯ ಥಾ ಗ್ರಾಹ್ಯಾಸ್ತದಪ್ಯತ್ರೋಪಪಾದ್ಯತೇ॥ ತಿಥ್ಯಾದಿಷು ತು ಕರ್ತವ್ಯೇ ಕಾಮ್ಯೇ ಕರ್ಮಣಿ ನಿತ್ಯವತ್। ಗ್ರಾಹ್ಯಾಸ್ತು ನೈಮಿತ್ತಿಕವತ್ಕರ್ತವ್ಯೇ ಗ್ರಹಣಾದಿಷು॥ ಕರ್ಮಣಿ... ಪರೇದ್ಯುರಪರಾ ಮುಯಾ ಕಾಲಸ್ಯ ಸರ್ವಸ್ಯ ನಿರ್ಣಯಂ ವದತೋದಿತಂ। ಪರೇದ್ಯುರಪರಾ

---

* ಉಪರಾಗನಿಮಿತ್ತಂ ತು ಸ್ನಾನಂ ಯದಿ ಸಮಿಷ್ಯತೇ। ತತ್ಕಾಲ ಏವ ಕರ್ತವ್ಯಂ ನೈಮಿತ್ತಿಕಮಿದಂ ಸ್ಮೃತಂ॥' ಇತಿ.

ಷ್ಣೇತಿ ಪಾರ್ವಣಶ್ರಾದ್ಧನಿರ್ಣಯೇ ॥ ಅಪರಾಹ್ಣವ್ಯಾಪ್ತ್ಯಭಾವೇ ಸಾಯಾಹ್ನ ವ್ಯಾಪ್ತಿರಿಷ್ಯತೇ। ಉಭಯೋರಪ್ಯಭಾವೇ ತು ಶ್ರಾದ್ಧಂ ತ್ಯಾಜ್ಯಂ ಕಿಮಾಸ್ತಿಕೈಃ ? ॥ ಏಕೋನವಿಂಶತಿಪಲಸಹಿತಾ ದಶನಾಡಿಕಾಃ। ಭವೇಯುರ್ದೃಗ್ಗಣಿತಾನೀ ತತಿಥೀನಾಂ ಪರಮಕ್ಷಯಃ ॥ ತಥಾ ಸತಿ ಹರಿದ್ವಾರೇ ತತ್ಪ್ರಾಂತೇ ಚ ತದುತ್ತರೇ। ಕುರುಕ್ಷೇತ್ರಾದಿಷು ತಥಾ ನಕ್ರಾಯನದಿನೇ ಕ್ವಚಿತ್ ॥ ಪೂರ್ವೇ ದಿನೇ ಪರದಿನೇ ಪರಮಕ್ಷಯಸಂಯುತೇ। ಕಾಲದ್ವಯವ್ಯಾಪ್ತ್ಯಭಾವಾಚ್ಛ್ರಾದ್ಧಂ ತ್ಯಾಜ್ಯಂ ಕಿಮಾಸ್ತಿಕೈಃ ? ॥ ಸಾರ್ಧಬಾಣಸಪಾದಾಂಗಘಟೀವೃದ್ಧಿಕ್ಷಯಾನ್ವಿತಾಃ। ಗೃಹೀತಾ ಧರ್ಮಶಾಸ್ತ್ರೇ ಹಿ ತಿಥಯೋ ನಿತ್ಯಕರ್ಮಸು ॥ ಸ್ಮೃತೀನಾಂ ಚ ಪುರಾಣಾನಾಮೊದೃಕ್ತಿಥಿವಶಾತ್ಸದಾ। ನಿರ್ಣಯೋ ಯುಜ್ಯತೇ ನೋ ಚೇತ್ ಸ್ಮೃತ್ಯಾದೀನಾಮಸಂಗತಿಃ ॥ ಪರಸ್ಪರಸಹಸ್ರಕಾರ್ಯೇಷು ಧರ್ಮಶಾಸ್ತ್ರೋದಿತೇಷು ಹಿ। ತಿಥ್ಯಾದ್ಯಂತಘಟೀಮಾನವಶಾನ್ನಿರ್ಣಯ ಇಷ್ಯತೇ ॥ ತನ್ನಿರ್ಣಯಸ್ಯೈವ ಸದಾ ಸ್ಯಾದಸಂಗತಿರನ್ಯಥಾ। ತಸ್ಮಾದ್ಯುಕ್ತಂ ಮಯಾ ಪ್ರೋಕ್ತಂ ಗೃಹೀತವ್ಯಂ ಸದಾಽಽಸ್ತಿಕೈಃ ॥ ''

ತಾತ್ಪರ್ಯ:— ನಿತ್ಯಕರ್ಮಗಳಲ್ಲಿ ಸೂರ್ಯಸಿದ್ಧಾಂತದ ತಿಥಿಗಳನ್ನೇ ಉಪಯೋಗಿಸಬೇಕು. ನೈಮಿತ್ತಿಕವಾದ (ಅಂದರೆ ಧರ್ಮಶಾಸ್ತ್ರದಂತೆ ಪ್ರತ್ಯೇಕವಾಗಿ ಕಾಲನಿರ್ಣಯ ಮಾಡಬೇಕಾಗಿಲ್ಲದ ಗ್ರಹಣಾದಿ ನಿಮಿತ್ತಕ ) ಕರ್ಮಗಳಿಗಾದರೆ ದೃಗ್ಗಣಿತವು ಗ್ರಾಹ್ಯವು. ಕಾಮ್ಯಕರ್ಮಗಳಲ್ಲಿ ತಿಥ್ಯಾದಿ ಕಾಲನಿಯಮವನ್ನು ಹೇಳಿದ್ದಕ್ಕೆ ನಿತ್ಯಕರ್ಮದಂತೆ ಸಿದ್ಧಾಂತತಿಥಿಗಳನ್ನೂ, ಹಾಗಿಲ್ಲದ ಗ್ರಹಣ ಶ್ರಾದ್ಧ ಮುಂತಾದವುಗಳಿಗೆ ದೃಗ್ಗಣಿತಕಾಲವನ್ನೂ ಉಪಯೋಗಿಸಬೇಕು. ಈ ವ್ಯವಸ್ಥೆಯನ್ನು ಬಿಟ್ಟು ದೃಕ್ತಿಥಿಯನ್ನೇ ಅವಲಂಬಿಸಿದರೆ ನಾವು ಕಾಲಮಾಧವದಲ್ಲಿ ಕಾಲನಿರ್ಣಯವನ್ನು ಹೇಳುವಾಗ ಪಾರ್ವಣಶ್ರಾದ್ಧನಿರ್ಣಯದಲ್ಲಿ ಮೃತತಿಥಿಯ ಅಪರಾಹ್ಣವ್ಯಾಪ್ತಿಯಿಲ್ಲದಿದ್ದರೆ ಸಾಯಾಹ್ನವ್ಯಾಪ್ತಿಯನ್ನು ಹಿಡಿದು ಶ್ರಾದ್ಧಮಾಡಬೇಕೆಂದು ನಿರ್ಣಯಿಸಿದ್ದೇವೆ. ೧೦ ಅಥವಾ ಅದಕ್ಕಿಂತ ಹೆಚ್ಚು ಕ್ಷಯಹೊಂದುವ (ನವೀನದೃಗ್ಗಣಿತದಂತೆ ಚಂದ್ರನಿಗೆ ಸೂಕ್ಷ್ಮಸಂಸ್ಕಾರಗಳನ್ನೆಲ್ಲ ಮಾಡಿದರೆ ೧೨ ಗಳಿಗೆಯಷ್ಟು ಕ್ಷಯಬರುತ್ತದೆಂಬುದು ಪ್ರಸಿದ್ಧವಾಗಿದೆ. ) ದೃಗ್ಗಣಿತದ ತಿಥಿಯು ಬಹಳಸಾರೆ ಸಾಯಾಹ್ನ, ಅಪರಾಹ್ಣಗಳೆರಡನ್ನೂ ಸ್ಪರ್ಶಮಾಡುವುದಿಲ್ಲ. ಇಂಥ ಪ್ರಸಂಗಗಳಲ್ಲಿ ಆಸ್ತಿಕರಾದವರು ಶ್ರಾದ್ಧಾದಿ ಧರ್ಮಕರ್ಮಗಳನ್ನೆಲ್ಲ ಬಿಟ್ಟುಬಿಡತಕ್ಕದ್ದೋ ? ಹರಿದ್ವಾರದಲ್ಲಿಯೂ, ಆ ಪ್ರಾಂತದಲ್ಲಿರುವ ಇತರ ಪುಣ್ಯಕ್ಷೇತ್ರಗಳಲ್ಲಿಯೂ, ಅದಕ್ಕೂ ಉತ್ತರದಲ್ಲಿರತಕ್ಕ ಹಲವು ದೇಶಗಳಲ್ಲಿಯೂ, ಕುರುಕ್ಷೇತ್ರಾದಿ ಕರ್ಮಭೂಮಿಗಳಲ್ಲಿಯೂ ಮಕರಾಯನಕಾಲದಲ್ಲಿ ದಿವಾಮಾನವು ತೀರ ಕಡಿಮೆಯಾದಾಗ ದೃಕ್ತಿಥಿಯು ಅಪರಾಹ್ಣ, ಸಾಯಾಹ್ನಗಳೆರಡನ್ನೂ ಸೋಂಕುವುದೇ ಇಲ್ಲ. ಆದ್ದರಿಂದಲೇ ಎಲ್ಲ ದೇಶಗಳ, ಎಲ್ಲ ಕಾಲಗಳ ವ್ಯವಸ್ಥೆಗಾಗಿ ಬಾಣವೃದ್ಧಿ-ರಸಕ್ಷಯದ ತಿಥಿಗಳನ್ನೇ

ಧರ್ಮಶಾಸ್ತ್ರಗಳು ಪರಿಗ್ರಹಿಸಿವೆ. ಆದ್ದರಿಂದ ಇಂಥ ಸಿದ್ಧಾಂತತಿಥಿಗಳಿಂದ ಮಾಡುವ ನಿರ್ಣಯವೇ ಸ್ಮೃತಿ, ಪುರಾಣಗಳಿಗೆಲ್ಲ ಹೊಂದುತ್ತದೆ. ಈ ತಿಥಿಗಳನ್ನು ಬಿಟ್ಟರೆ ಆ ಶ್ರುತಿ, ಸ್ಮೃತಿ, ಪುರಾಣವಚನಗಳಿಗೆ ವ್ಯವಸ್ಥೆಯೇ ಇಲ್ಲದಂತಾಗುವುದು. ಮತ್ತು ಶಾಸ್ತ್ರೋಕ್ತವಾದ ಸಾವಿರಾರು ಕರ್ಮಗಳಿಗೆ ಯಾವ ನಿರ್ಣಯವೂ ನೆಲೆಹತ್ತದಂತಾಗಿ ಕರ್ಮಕಾಂಡಕ್ಕೇನೇ ಆಘಾತವುಂಟಾಗುವುದು. ಆದ ಕಾರಣ ಆಸ್ತಿಕರಾದವರು ನಾವು ಹೇಳಿದಂತೆ ಶ್ರಾದ್ಧಾದಿ ಧರ್ಮಕರ್ಮಗಳಲ್ಲಿ ಬಾಣವೃದ್ಧಿ-ರಸಕ್ಷಯಲಕ್ಷಣದ **ಸೂರ್ಯಸಿದ್ಧಾಂತಾನುಸಾರಿಪಂಚಾಂಗವನ್ನೇ ಸ್ವೀಕರಿಸಬೇಕು** ಎಂದು ಸಕಲಜನರಿಗೂ ವಿಶದವಾಗಿ ತಿಳಿಯುವಂತೆ ಕಾರಣಪೂರ್ವಕವಾಗಿ ತಮ್ಮ ನಿಷ್ಪೃಷ್ಟವಾದ ನಿರ್ಣಯವನ್ನು ಸ್ಪಷ್ಟವಾಗಿ ಹೇಳಿರುವರು. ಇದೂ ಅಲ್ಲದೆ ಅಯನಾರಂಭವಿಷಯದಲ್ಲಿಯೂ ಸಹ ಇವರು ತಮ್ಮ ಸುಪ್ರಸಿದ್ಧ ಕಾಲಮಾಧವ ಎಂಬ ಗ್ರಂಥದಲ್ಲಿ— ' **ಶ್ರೌತಸ್ಮಾರ್ತಕರ್ಮಾನುಷ್ಠಾನೇ ತು ಮಕರ–ಕರ್ಕಟಸಂಕ್ರಾಂತ್ಯಾದಿಕ ಏವಾಽಯನದ್ವಯಕಾಲ ಇತಿ ಯಥೋಕ್ತಶ್ರುತಿಸ್ಮೃತಿಭ್ಯಾಮವಗಂತವ್ಯಂ ।**' ಅಂದರೆ— ಎಲ್ಲ ಶ್ರುತಿ-ಸ್ಮೃತಿಗಳ ತಾತ್ಪರ್ಯದಂತೆ ಶ್ರೌತ ಸ್ಮಾರ್ತಕರ್ಮಾನುಷ್ಠಾನಗಳಲ್ಲಿ 'ಮಕರ-ಕರ್ಕಟಸಂಕ್ರಾಂತಿಗಳಿಂದಲೇ ಉತ್ತರಾಯಣ, ದಕ್ಷಿಣಾಯನಗಳ ಆರಂಭವನ್ನು ಪರಿಗ್ರಹಿಸಬೇಕು' ಎಂದು ನಿರ್ಧಾರವಾಗಿ ಹೇಳಿರುವರು.

ಇದರಿಂದ ಶಾಸ್ತ್ರೈಕಶರಣರಾದ ಆಸ್ತಿಕಮಹಾಜನರಿಗೆ ಈ ವಿಷಯದಲ್ಲಿ ಇನ್ನು ಏನೊಂದೂ ಸಂಶಯವುಳಿಯಲಿಕ್ಕಿಲ್ಲ. ಧರ್ಮಕರ್ಮಾನುಷ್ಠಾನಗಳಲ್ಲಿ ಶ್ರೀವಿದ್ಯಾರಣ್ಯಸ್ವಾಮಿಗಳಂತಹ ಪರಮಪೂಜ್ಯವ್ಯಕ್ತಿಗಳ ಇಂತಹ ಸಕಾರಣವಾದ ಸುಸ್ಪಷ್ಟ ನಿರ್ಣಯವಚನಗಳಿಂದಲೂ ಸಹ ಶ್ರುತಿ-ಸ್ಮೃತ್ಯಾದಿಗಳ ನಿಜವಾದ ತಾತ್ಪರ್ಯವೇನು ? ಶಿಷ್ಟಸಂಪ್ರದಾಯವು ಹೇಗಿದೆ ? ಶಾಸ್ತ್ರಸಮ್ಮತವಾದ ಪಂಚಾಂಗವು ಯಾವುದು ? ಆಸ್ತಿಕಜನರು ಧರ್ಮಕರ್ಮಗಳನ್ನು ಸಿದ್ಧಾಂತಪಂಚಾಂಗಾನುಸಾರವಾಗಿಯೇ ಯಾಕೆ ಮಾಡಬೇಕು ? ದೃಕ್ಪಂಚಾಂಗವು ಯಾಕೆ ತ್ಯಾಜ್ಯವಾಗಿದೆ ? ಎಂಬೀ ವಿಚಾರಗಳು ನಿರ್ಣಯವಾಗದೆ ಮತ್ತೂ ಸಂಶಯವಿರುವುದೆನ್ನುವುದಾದರೆ '**ಸಂಶಯಾತ್ಮಾ ವಿನಶ್ಯತಿ**' ಎಂಬುದಾಗಿ ಭಗವಂತನು ಗೀತೆಯಲ್ಲಿ ಹೇಳಿರುವಂತೆ ಅಂಥ ಸಂಶಯಾತ್ಮರನ್ನಾಗಲಿ, '**ಜ್ಞಾನಲವದುರ್ವಿದಗ್ಧಂ ಬ್ರಹ್ಮಾಪಿ ತಂ ನರಂ ನ ರಂಜಯತಿ ।**" ಎಂಬ ಮಹಾಕವಿ ಭರ್ತೃಹರಿಯ ವಚನದಂತೆ ಗರ್ವಿಷ್ಠರಾದ ಅಲ್ಪಜ್ಞರನ್ನಾಗಲಿ (ಸಂದೇಹನಿವೃತ್ತಿಮಾಡಿ) ಮೆಚ್ಚಿಸಲಿಕ್ಕೆ ಸಾಕ್ಷಾತ್ ಪರಬ್ರಹ್ಮನಿಗೂ ಅಸಾಧ್ಯವೇ ಸರಿ.

ಆಸ್ತಿಕಜನರ ಕರ್ಮಾಚರಣೆಗಳಿಗೆಲ್ಲ ವಿಹಿತವಾಗಿರುವ ಶಾಸ್ತ್ರಸಿದ್ಧವಾದ ಶುದ್ಧಪಂಚಾಂಗವು ಯಾವುದೆಂಬುದರ ಕುರಿತು ಈ ವರೆಗೆ ನಾವು ಶಾಸ್ತ್ರ, ಶಿಷ್ಟಾಚಾರ, ನ್ಯಾಯ, ಯುಕ್ತಿಗಳಿಂದೆಲ್ಲ ನಿರೂಪಣ, ಮತ್ತು ಖಂಡ

ನಾತ್ಮಕವಾಗಿ ವಿವರಿಸಿರುವುದನ್ನು ಸಿಂಹಾವಲೋಕನನ್ಯಾಯದಂತೆ ವಿಚಾರಿಸುವಲ್ಲಿ— ಆಸ್ತಿಕಜನರ ಆಚರಣೆಯಲ್ಲಿ ಆರ್ಷವಚನಗಳೇ ಪ್ರಮಾಣಗಳು: ಆರ್ಷವಾಕ್ಯಗಳಿಗೆ ವಿರೋಧವಿರುವ ಲೌಕಿಕೋಕ್ತಿಗಳು ಪ್ರಮಾಣವಲ್ಲ; ಕರ್ಮಾಚರಣೆಯ ವಿಷಯದಲ್ಲಿ ಧರ್ಮಶಾಸ್ತ್ರವೇ ಪ್ರಬಲವಾದದ್ದು: ಧರ್ಮಶಾಸ್ತ್ರಕ್ಕೂ, ಜ್ಯೋತಿಃಶಾಸ್ತ್ರಕ್ಕೂ ಅಭೇದ್ಯ ಸಂಬಂಧವಿದೆ. ಆದ್ದರಿಂದ ಧರ್ಮಶಾಸ್ತ್ರಕ್ಕೆ ಅನುಕೂಲವಾಗಿಯೇ ಜ್ಯೋತಿಃಶಾಸ್ತ್ರದ ವ್ಯವಸ್ಥೆಯಿರತಕ್ಕದ್ದು; ಕೇವಲ ದೃಕ್ಸಿದ್ಧ ತಿಥ್ಯಾದಿಗಳು ಕರ್ಮಾಚರಣೆಗೆ ಯೋಗ್ಯವಲ್ಲ. ಇದನ್ನು ದೃಗ್ವಾದಿಗಳಾದರೂ ಒಪ್ಪದೆ ನಿವೃತ್ತಿಯಿಲ್ಲ; ಅದರಂತೆಯೇ ಶಾಸ್ತ್ರಗಳಲ್ಲಿ ತಿಥ್ಯಾದಿಗಳಿಗೂ, ಗ್ರಹಣಾದಿಗಳಿಗೂ ಬೇರೆ-ಬೇರೆಯಾಗಿ ವ್ಯವಸ್ಥೆಯು ಹೇಳಲ್ಪಟ್ಟಿದೆ; ಆ ಪ್ರಕಾರ ಗ್ರಹಣಾದಿ-ದೃಶ್ಯವಿಷಯಗಳಲ್ಲಿ ಬೀಜಾದಿ ಸಂಸ್ಕಾರಗಳನ್ನೂ, ಕರ್ಮಾರ್ಹ ತಿಥ್ಯಾದಿಗಳಲ್ಲಿ ಸಿದ್ಧಾಂತಗಣಿತವನ್ನೂ ಸ್ವೀಕರಿಸಬೇಕು; ನಿರಯನ ಕರ್ಕಟ-ಮಕರ ಸಂಕ್ರಾಂತಿಗಳಿಂದ ಆರಂಭಿಸತಕ್ಕ ಅಯನಗಳೇ ಕರ್ಮಾಚರಣೆಗೆ ಯೋಗ್ಯವಾದವುಗಳು; ತಿಥ್ಯಾದಿಗಳಲ್ಲಿ ಬೀಜಸಂಸ್ಕಾರಮಾಡುವುದನ್ನು ಶಾಸ್ತ್ರಗಳಲ್ಲಿ ನಿಷೇಧಿಸಿದ್ದಾರೆ; ಬೀಜಸಂಸ್ಕಾರ ಮಾಡಿರುವ ದೃಕ್ಪಂಚಾಂಗದ ತಿಥ್ಯಾದಿಗಳು ಶಾಸ್ತ್ರನಿಷಿದ್ಧವಾದವುಗಳು; ಸಾಯನಾಯನಗಳ ಕಲ್ಪನೆಯಾದರೂ ಶಾಸ್ತ್ರ-ಶಿಷ್ಟಾಚಾರಗಳಿಗೆಲ್ಲ ವಿರುದ್ಧವಾಗಿದೆ: ನವೀನದೃಕ್ಪಂಚಾಂಗದ ತಿಥ್ಯಾದಿಗಳಿಂದ ಧರ್ಮಶಾಸ್ತ್ರೋಕ್ತವಾದ ಹಲವು ಕರ್ಮಗಳ ಕಾಲನಿರ್ಣಯವಾಗುವುದಿಲ್ಲ; ಆದ್ದರಿಂದ ಅದು ಶಾಸ್ತ್ರನಿಷಿದ್ಧ; ಶಿಷ್ಟಾಚಾರವಿರುದ್ಧ; ಕರ್ಮಾಚರಣೆಗಳಿಗೆಲ್ಲ ಅಸಂಬದ್ಧ ಎಂಬ ಈ ಎಲ್ಲ ವಿಚಾರಗಳೂ ಸುವಿಚಾರಿಗಳಾದ ವಾಚಕರಿಗೆ ನಿಃಸಂದೇಹವಾಗಿ ತಿಳಿಯದೆ ಇರಲಿಕ್ಕಿಲ್ಲ.

ಇದರಿಂದ ನಾವು ಈ ಗ್ರಂಥದ ಪ್ರತಿಜ್ಞೆಯಲ್ಲಿ ಹೇಳಿರುವಂತೆ **ನವೀನ ದೃಕ್ಪಂಚಾಂಗದ ತಿಥ್ಯಾದಿಗಳಾಗಲಿ, ( ಸಾಯನ ) ಅಯನಗಳಾಗಲಿ ಸಕಲ ಕರ್ಮಗಳಿಗೂ ತ್ಯಾಜ್ಯವೆಂಬುದೂ, ಶ್ರೌತ-ಸ್ಮಾರ್ತಕರ್ಮಾನುಷ್ಠಾನಗಳಲ್ಲಿ ಸೂರ್ಯಸಿದ್ಧಾಂತಾನುಸಾರಿ ಬಾಣವೃದ್ಧಿ-ರಸಕ್ಷಯಲಕ್ಷಣದ ತಿಥ್ಯಾದಿಗಳಿಂದಲೂ, ಕೇವಲ(ನಿರಯನ) ಸೂರ್ಯನ ಕರ್ಕಟ-ಮಕರಸಂಕ್ರಾಂತಿಗಳಿಂದ ಆರಂಭಿಸತಕ್ಕ ದಕ್ಷಿಣೋತ್ತರಾಯಣಗಳಿಂದಲೂ ಕೂಡಿರುವ ಸಿದ್ಧಾಂತಪಂಚಾಂಗವೇ ಸರ್ವಥೈವ ಗ್ರಾಹ್ಯವೆಂಬುದೂ ಸಕಲ ಶಾಸ್ತ್ರಗಳಿಗೂ ಸಮ್ಮತವಾಗಿರುವ, ಪ್ರಳಯಾವಧಿ ಅಭೇದ್ಯವಾದ, ಸುಬದ್ಧ-ಪ್ರಸಿದ್ಧ-ಸಿದ್ಧಾಂತವಾಗಿರುತ್ತದೆ.**

## —ಉಪಸಂಹಾರ—

ವೈದಿಕ ಧರ್ಮಾನುಯಾಯಿಗಳಾದ ಆಸ್ತಿಕಮಹಾಜನರೆಲ್ಲರೂ–**ನ ಜಾತು ಕಾಮಾನ್ನ ಭಯಾನ್ನ ಲೋಭಾದ್ಧರ್ಮಂ ತ್ಯಜೇಜ್ಜೀವಿತಸ್ಯಾಪಿ ಹೇತೋಃ। ಧರ್ಮೋ ನಿತ್ಯಃ ಸುಖದುಃಖೇ ತ್ವನಿತ್ಯೇ ಜೀವೋ ನಿತ್ಯೋ ಹೇತುರಸ್ಯ ತ್ವನಿತ್ಯಃ ॥'** ಎಂಬ ವ್ಯಾಸಮಹರ್ಷಿಗಳ ವಚನದಂತೆ ಕಾಮ, ಲೋಭ, ಭಯ, ದಾಕ್ಷಿಣ್ಯ, ಸ್ನೇಹ, ಬಾಂಧವ್ಯ, ಹಂಗು (ಭಿಡೆ) ಮೊದಲಾದ ಯಾವುದೊಂದು ಕಾರಣದಿಂದಲೂ ಸಹ ಶಾಸ್ತ್ರ(ಧರ್ಮ) ವಿರುದ್ಧವಾದ ದೃಕ್ಪಂಚಾಂಗದ ಯಾವ ವ್ಯಾಮೋಹಕ್ಕೂ ಒಳಗಾಗದೆ **'ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ। ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥"** ಎಂದು ಶ್ರೀಕೃಷ್ಣಪರಮಾತ್ಮನು ಗೀತೆಯಲ್ಲಿ ಉಪದೇಶಿಸಿರುವಂತೆ ಶಾಸ್ತ್ರಪ್ರಮಾಣಸಿದ್ಧವಾದ ಸಿದ್ಧಾಂತಪಂಚಾಂಗವನ್ನೇ ಪರಿಗ್ರಹಿಸಿ ಅದರಂತೆ ಶ್ರೌತಸ್ಮಾರ್ತಾದಿ ಸಕಲಧಾರ್ಮಿಕಕಾರ್ಯಗಳನ್ನೂ ಆಚರಿಸುತ್ತ ತನ್ಮೂಲಕ **'ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ।'** ಎಂದು ಭಗವಾನ್ ವ್ಯಾಸಮಹರ್ಷಿಗಳು ಸಕಲ ಜನರಿಗೂ ಘಂಟಾಘೋಷವಾಗಿ ಸಾರಿರುವಂತೆ ಅರ್ಥಕಾಮಾದಿ ಐಹಿಕ ಭೋಗಗಳಿಗೂ, ಪಾರತ್ರಿಕ ಸ್ವರ್ಗ–ಮೋಕ್ಷ ಸುಖಗಳಿಗೂ ಪಾತ್ರರಾಗಿ ಶ್ರೇಯಸ್ಸನ್ನು ಹೊಂದುವರೆಂದು ನಾವು ದೃಢವಾಗಿ ನಂಬಿರುವೆವು.

ಇನ್ನು ದೃಕ್ಪಕ್ಷದ ಯಾವ ಪಂಡಿತರೇ ಆದರೂ ಈ ಗ್ರಂಥದಲ್ಲಿ ನಾವು ಪ್ರತಿಪಾದಿಸಿದ್ದೆಲ್ಲವೂ ಶಾಸ್ತ್ರಸಮ್ಮತವಾದುದಲ್ಲವೆಂತಲೂ, ಸಿದ್ಧಾಂತಪಂಚಾಂಗವು ಶಾಸ್ತ್ರ, ಶಿಷ್ಟಾಚಾರಗಳಿಗೆಲ್ಲ ವಿರುದ್ಧವಾದುದೆಂತಲೂ ದೃಕ್ಪಂಚಾಂಗವೇ ಶುದ್ಧವಾದುದೆಂದು ಶಾಸ್ತ್ರ–ಶಿಷ್ಟಾಚಾರಗಳಿಂದೆಲ್ಲ ಸಿದ್ಧವಾಗುವುದೆಂತಲೂ, ಅದೇ ಸರ್ವತ್ರ ಕರ್ಮಾನುಷ್ಠಾನಗಳಿಗೆಲ್ಲ ವಿಹಿತವಾದುದೆಂತಲೂ ವಾದಿಸುವ (ಆಗ್ರಹವುಳ್ಳ) ವರಿದ್ದರೆ ಅವರ ಹೇಳಿಕೆಗಳನ್ನೆಲ್ಲ ಯುಕ್ತರೀತಿಯಿಂದ ಖಂಡಿಸಿ ದೃಕ್ಪಂಚಾಂಗವು ಸರ್ವಥಾ ಅಪ್ರಮಾಣವಾದುದೆಂತಲೂ, ಕರ್ಮಾನುಷ್ಠಾನಗಳಿಗೆ ಅಯೋಗ್ಯವಾದುದೆಂತಲೂ, ಸಿದ್ಧಾಂತಪಂಚಾಂಗವೇ ಸರ್ವಥಾ ಗ್ರಾಹ್ಯವಾದುದೆಂತಲೂ ( ಶಾಸ್ತ್ರಸಮ್ಮತವಿರುವುದೆಂಬುದನ್ನು ) ಸಿದ್ಧಾಂತಪಡಿಸಲಿಕ್ಕೆ ನಾವು ಯಾವಾಗಲೂ ಸಿದ್ಧರೇ ಆಗಿರುವೆವು.

ಆದರೆ ಹೀಗೆ ದೃಕ್ಪಕ್ಷದ ಪಂಡಿತರು ತಪ್ಪನ್ನೇ ಒಪ್ಪೆಂದು ವಾದಿಸುವ ಹವ್ಯಾಸಕ್ಕೀಡಾಗದೆ ಶಾಸ್ತ್ರವಚನಗಳಿಗೆಲ್ಲ ವಿಪರೀತಾರ್ಥವನ್ನು ಕಲ್ಪಿಸುವುದರಲ್ಲಿಯೇ ತಮ್ಮ ಪಾಂಡಿತ್ಯವನ್ನು ವಿನಿಯೋಗಿಸುವ ದುರವಸ್ಥೆಗೊಳಗಾಗದೆ ತಮ್ಮ ಅನುಚಿತವಾದ ಆಗ್ರಹ, ಅಭಿಮಾನಗಳನ್ನೆಲ್ಲ ಬಿಟ್ಟು **'ಗಚ್ಛತಃ ಸ್ಖಲನಂ ಸಿದ್ಧಂ '** ಎಂಬ ನ್ಯಾಯದಂತೆ ಮನುಷ್ಯಮಾತ್ರರಿಗೆ ತಪ್ಪುವಿಕೆಯು

ಸ್ವಾಭಾವಿಕವಾದುದೆಂಬ ಸಮಾಧಾನವನ್ನು ಹೊಂದಿಕೊಂಡು ಪರಮಕಾರುಣಿಕರೂ, ದಿವ್ಯಜ್ಞಾನಸಂಪನ್ನರೂ ಆಗಿರುವ ದೇವತಾಪುರುಷರು, ಮಹರ್ಷಿಗಳು ತಪೋನಿಷ್ಠರು, ಮಹಾಮಹಿಮರೇ ಮೊದಲಾದ ಪ್ರಾಮಾಣಿಕಪುರುಷರ ಪ್ರಮಾಣವಚನಗಳಲ್ಲಿಯೂ, ಪೂರ್ವಿಕರಾದ ಧರ್ಮೈಕನಿಷ್ಠ ವಿಶಿಷ್ಟಜನರ ಅನುಷ್ಠಾನಗಳಲ್ಲಿಯೂ ವಿಶ್ವಾಸವಿಟ್ಟು ತದೇಕನಿಷ್ಠರಾಗಿ, ಶ್ರದ್ಧಾದರಪೂರ್ವಕವಾಗಿ ತಮ್ಮ ಪೂರ್ವಪುರುಷರಿಂದ ಪರಿಗ್ರಹಿಸಲ್ಪಟ್ಟು ಆಚರಿಸಿ ಬಂದಿರುವ ಸನಾತನ ಧರ್ಮಪದ್ಧತಿಯಂತೆ ಸಿದ್ಧಾಂತಮಾರ್ಗವನ್ನೇ ಅನುಸರಿಸಬೇಕಾಗಿಯೂ, ಮುತ್ತು ಅದರಿಂದ **ಯೇನಾಽಸ್ಯ ಪಿತರೋ ಯಾತಾ ಯೇನ ಯಾತಾಃ ಪಿತಾಮಹಾಃ । ತೇನ ಯಾಯಾತ್ಸತಾಂ ಮಾರ್ಗಂ ತೇನ ಗಚ್ಛನ್ನ ರಿಷ್ಯತೇ॥** ಎಂಬ ಮನುವಚನದಂತೆ ನಿರ್ದೋಷಿಗಳೂ, ಶ್ರೇಯಃಸಾಧಕರೂ ಆಗಬೇಕಾಗಿಯೂ ಪ್ರಣತಿಪೂರ್ವಕ ಅವರನ್ನು ಪುನಃಪುನಃ ಕೇಳಿಕೊಳ್ಳುವೆವು.

ಇದರಿಂದ ಅವರು ಈಗ ಹಿಡಿದಿರುವ ಉನ್ಮಾರ್ಗವನ್ನು ಬಿಟ್ಟು ಸನ್ಮಾರ್ಗದಲ್ಲಿ ಪ್ರವರ್ತಿಸುವುದಾದರೆ— “ **ಸಮಾನೀ ವ ಆಕೂತಿಃ ಸಮಾನಾ ಹೃದಯಾನಿ ವಃ । ಸಮಾನಮಸ್ತು ವೋ ಮನೋ ಯಥಾ ವಃ ಸುಸಹಾಸತಿ ॥** ” ಎಂಬ ಶ್ರುತಿಯ ಪರಮೋತ್ಕೃಷ್ಟ ಉಪದೇಶದಂತೆ ನಮ್ಮಲ್ಲಿರುವ ಮತಭೇದಗಳೆಲ್ಲ ಮಾಯವಾಗಿ ನಮ್ಮೆಲ್ಲರಲ್ಲಿಯೂ ಐಕ್ಯತೆಯುಂಟಾಗುವುದಲ್ಲದೆ ಅದರಿಂದ ಅವರಿಗೂ ನಮಗೂ (ಉಭಯರಿಗೂ) ಸಮಾನವಾಗಿ ಪರಮಶ್ರೇಯಸ್ಸು ಪ್ರಾಪ್ತವಾಗುವುದರಲ್ಲಿ ಸಂದೇಹವಿರುವದಿಲ್ಲ. ಆದುದರಿಂದ ಈ ಪ್ರಕಾರ ನಡೆಯುವಂತೆ ಸತ್ಪ್ರೇರಣೆಯನ್ನು ಕೊಟ್ಟು ನಮ್ಮೆಲ್ಲರನ್ನೂ ಅನುಗ್ರಹಿಸಬೇಕಾಗಿ ಮಂತ್ರಗಳಲ್ಲೆಲ್ಲ ಮಹಾಮಂತ್ರವಾಗಿರುವ ಬ್ರಹ್ಮಬೀಜವಾದ ಗಾಯತ್ರೀ ಮಂತ್ರದ ಅಧಿದೇವತೆಯೂ, ಸರ್ವಜ್ಞಾನಮಯನೂ, ಸರ್ವಪ್ರೇರಕನೂ, ಸರ್ವಸಮರ್ಥನೂ ಆಗಿರುವ ಪರಮಾತ್ಮಸ್ವರೂಪಿಶ್ರೀಸವಿತೃನಾಮಕಸೂರ್ಯನಾರಾಯಣನನ್ನು ಅನನ್ಯಭಾವದಿಂದ ನಿತ್ಯದಲ್ಲಿಯೂ ಪ್ರಾರ್ಥಿಸುವೆವು.

**सविता पश्चातात्सविता पुरस्तात्सवितोत्तरात्तात्सविताधरात्तात ।**
**सविता नः सुवतु सर्वतातिं सविता नो रासतां दीर्घमायुः ॥**

**ಶಿಷ್ಟಾಶ್ಚ ಕ್ವ ಶ್ರುತಿಸ್ಮೃತ್ಯುದಿತಕೃತಿರತಾ ಜ್ಞಾತಸರ್ವಾಗಮಾರ್ಥಾಃ ।**
**ಕ್ವಾಽಹಂ ತನ್ಮಾರ್ಗನಿಷ್ಠಾಸ್ತಿಕಸದನುಚರಸ್ತನ್ಮತಂ ಸಂಪ್ರವಕ್ತುಂ ॥**

**ಯದ್ಯಪ್ಯೇವಂ ಮಯೋಕ್ತಂ ದೃಗತಿಗತಿಮತೋಚ್ಛೇದದಕ್ಷಂ ಯದಿಸ್ಯಾತ್**
**ಯುಕ್ತಂ ಬಾಲೋಕ್ತಿವತ್ತಚ್ಛ್ರುತಿಹಿತಮಥವಾಽಽಸ್ತಿಕಾನಾಂ**
**ಮುದೇ ಸ್ಯಾತ್ ॥**

ಮಾನಜ್ಞೈಃ ಸುವಿಚಾರ್ಯ ಚಾಽತ್ರ ಗದಿತಂ ದೃಕ್-ಶಾಸ್ತ್ರಮಾನೋಜ್ಝಿತಂ
ದೃಕ್ಪಂಚಾಂಗಮುಪಾಸ್ಯ ಶಾಸ್ತ್ರವಿಹಿತಂ ಪಂಚಾಂಗಮಾಸ್ಥೀಯತಾಂ ॥
ದೃಙ್ಮುಗ್ಧೈಃ ಸ್ವಮತಾಗ್ರಹೋತ್ಥಮಖಿಲಂ ಸ್ವೀಯೋಪಮಾನಾಯನಂ ।
ತ್ಯಕ್ತ್ವಾ ಪೂರ್ವಜಸತ್ಪಥಾಯನಕೃತೇರ್ಮಾನಂ ಪರಂ ಪ್ರಾಪ್ಯತಾಂ ॥

ಶ್ರೀಶಂಕರನಾರಾಯಣಪದಾಽರ್ಪಿತಾಽಖಿಲಕೃತೇಃ ಕೃತಿರ್ಮೇಽಸೌ ।
ತದನುಗ್ರಹಲವಭಾಗಪಿ ಚರಿತಾರ್ಥಾ ವಿಜಯತೇತರಾಂ ನಿತ್ಯಂ ॥

ಮಂಗಲಂ ಶ್ರೀಶಿವಃ ಶಾಂತಃ ಶ್ರೀಕೃಷ್ಣಶ್ಚಾಽಪಿ ಮಂಗಲಂ ।
ಮಂಗಲಂ ಭಾಸ್ಕರಃ ಕುರ್ಯಾತ್ ಸಾಕ್ಷಾಜ್ಜ್ಯೋತಿರ್ಗಣಾಧಿಪಃ ॥

शं नो मित्रः शं वरुणः शं नो भवत्वर्यमा ।
शं न इन्द्रो बृहस्पतिः शन्नो विष्णुरुरुक्रमः ॥

॥ ओं शांतिः शांतिः शांतिः ॥

---

ಶಾಸ್ತ್ರೀಯವಿಷಯಗಳ ನಿರ್ಣಯದಲ್ಲಿ ಸ್ವತಃಪ್ರಮಾಣವಾಗಿರುವ ಶ್ರುತಿ-ಸ್ಮೃತ್ಯಾದಿ ಶಾಸ್ತ್ರಗಳೇ ಪ್ರಮಾಣವಾಗಿರುವುವಲ್ಲದೆ ಕೇವಲ (ಇಂದ್ರಿಯಜನ್ಯ) ಪ್ರತ್ಯಕ್ಷದಿಂದ ವಸ್ತುತತ್ವದ ನಿರ್ಣಯವಾಗುವುದಿಲ್ಲವೆಂಬ ಬಗ್ಗೆ ಶ್ರುತ್ಯಾದಿ ಆಧಾರಗಳು:—

ತೈತ್ತಿರೀಯಶ್ರುತೌ— 'ಸ್ಮೃತಿಃ ಪ್ರತ್ಯಕ್ಷಮೈತಿಹ್ಯಂ । ಅನುಮಾನಶ್ಚತುಷ್ಟಯಂ ।
ಏತೈರಾದಿತ್ಯಮಂಡಲಂ । ಸರ್ವೈರೇವ ವಿಧಾಸ್ಯತೇ ॥' ಇತಿ.

ಸಾಯಣಭಾಷ್ಯಂ— ಸ್ಮೃತಿರನುಮೇಯಶ್ರುತಿಮೂಲಂ ಮನ್ವಾದಿಶಾಸ್ತ್ರಂ । ಪ್ರತ್ಯಕ್ಷಂ ಸರ್ವಪುರುಷಾಣಾಂ ಶ್ರೋತ್ರೇಣ ಗ್ರಾಹ್ಯಂ ವೇದವಾಕ್ಯಂ । ಐತಿಹ್ಯಮಿತಿಹಾಸಪುರಾಣಮಹಾಭಾರತಬ್ರಾಹ್ಮಣಾದಿಕಂ । ಅನುಮಾನಃ ಶಿಷ್ಟಾಚಾರಃ । ತೇನ ಹಿ ಮೂಲಭೂತಂ ಶ್ರುತಿ-ಸ್ಮೃತಿಲಕ್ಷಣಂ ಪ್ರಮಾಣಮನುಮೀಯತೇ । ತದೇತತ್ಸ್ಮೃತ್ಯಾದಿಚತುಷ್ಟಯಮವಗತಿಕಾರಣಭೂತಂ ಪ್ರಮಾಣಂ । ಏತೈಃ ಸ್ಮೃತ್ಯಾದಿಭಿಃ ಸರ್ವೈರೇವ ಪ್ರಮಾಣೈರಾದಿತ್ಯಮಂಡಲಂ ವಿಧಾಸ್ಯತೇ ಪ್ರಮೀಯತೇ । ಯಾದೃಶಮಿದಂ ಮಂಡಲಂ ಭವತಿ ಯಥಾ ಚ ಪ್ರವರ್ತತೇ ಯಥಾ ವಾ ಮನ್ವಂತರಾದಿಭೇದಭಿನ್ನಂ ಕಾಲಂ ಪ್ರವರ್ತಯತಿ ಯಥಾ ಚೋದಕಸೃಷ್ಟ್ಯಾದಿನಾ ವಿಶ್ವಮುತ್ಪಾದಯತಿ ತತ್ಸರ್ವಂ ಸ್ಮೃತ್ಯಾದಿಪ್ರಮಾಣಸಿದ್ಧಂ ॥'

‘ನಿತ್ಯಾದೃಶಂ ಯದಕ್ಷಿಗೋಲಕಮೇತದೇವ ವರುಣಸ್ಯ ಪಾರಮಾರ್ಥಿಕಕಾಲತತ್ವಾವರಕಸ್ಯ ಲಕ್ಷಣಂ ಸ್ವರೂಪಂ ವರುಣಲಕ್ಷಣಂ । ಮಾಂಸದೃಷ್ಟಿರೇವ ತತ್ವವಿಷಯಾಂ ಶಾಸ್ತ್ರದೃಷ್ಟಿಮಾವೃಣೋತೀತ್ಯರ್ಥಃ ॥’

‘ಪ್ರತ್ಯಕ್ಷೇಣ ಹಿ ಲೋಕಸಿದ್ಧೇನ ಸರ್ವೋ ಜಂತುಃ ಪ್ರಿಯತಮಮೇವ ರೂಪಂ ವಿಂದೇನ್ನ ವಸ್ತುತತ್ವಂ ।’ ಇತಿ ಸಾಯಣಭಾಷ್ಯೇ॥

ಬ್ರಹ್ಮಸೂತ್ರಶಾಂಕರಭಾಷ್ಯೇ— “ ಪ್ರತ್ಯಕ್ಷಂ—ಶ್ರುತಿಃ ಪ್ರಾಮಾಣ್ಯಂ ಪ್ರತ್ಯನಪೇಕ್ಷತ್ವಾತ್ । ಅನುಮಾನಂ—ಸ್ಮೃತಿಃ ಪ್ರಾಮಾಣ್ಯಂ ಪ್ರತಿ ಸಾಪೇಕ್ಷತ್ವಾತ್ ॥ ತೇ ಹಿ ಶಬ್ದಪೂರ್ವಾಂ ಸೃಷ್ಟಿಂ ದರ್ಶಯತಃ । ” ಇತಿ.

ಕಾಲಮಾಧವೇ:— “ ಪೂರ್ವೋತ್ತರರಾಶ್ಯೋರ್ಮಧ್ಯೇ ಸೂರ್ಯಃ ಪೂರ್ವರಾಶಿಂ ಪರಿತ್ಯಜ್ಯ ಯಾವತಾ ಕಾಲಲೇಶೇನೋತ್ತರರಾಶಿಂ ಪ್ರವಿಶತಿ ಸ ಲೇಶೋ ಯೋಗದೃಷ್ಟಿಂ ವಿನಾ ಮಾಂಸದೃಷ್ಟ್ಯಾ ದುರ್ಲಕ್ಷ್ಯಃ । ” ಇತಿ.

‘ಕಾಲೋಽಪ್ರತ್ಯಕ್ಷಃ’ ಇತಿ ನ್ಯಾಯಶಾಸ್ತ್ರಸಿದ್ಧಾಂತಃ ॥

ವೇದಾಃ ಪ್ರಮಾಣಂ ಸ್ಮೃತಯಃ ಪ್ರಮಾಣಂ
ಧರ್ಮಾರ್ಥಯುಕ್ತಂ ವಚನಂ ಪ್ರಮಾಣಂ ॥
ಯಸ್ಯ ಪ್ರಮಾಣಂ ನ ಭವೇತ್ಪ್ರಮಾಣಂ ।
ಕಸ್ತಸ್ಯ ಕುರ್ಯಾದ್ವಚನಂ ಪ್ರಮಾಣಂ ॥

ಇತಿ ಹಾರೀತಃ ॥

ಶ್ರುತಿಸ್ಮೃತ್ಯಾದಿಶಾಸ್ತ್ರಾಣಾಮೇಕವಾಕ್ಯತ್ವಕಲ್ಪನಾತ್ ।
ಸರ್ವಶಾಸ್ತ್ರಾರ್ಥಸಿದ್ಧಂ ತಂ ಸಿದ್ಧಾಂತಂ ಪ್ರಾಹುರಿತ್ಯಪಿ ॥
ಶ್ರುತಿಸ್ಮೃತ್ಯಾದಿಶಾಸ್ತ್ರಾಣಾಂ ನೈಕವಾಕ್ಯತ್ವ(ಅನವಸ್ಥಾವ)ಕಲ್ಪನಾತ್।
ಸರ್ವಶಾಸ್ತ್ರವಿಯುಕ್ತಂ ತಮಯುಕ್ತಂ ಪ್ರಾಹುರಿತ್ಯಪಿ ॥
ಶಾಸ್ತ್ರದೃಷ್ಟೇನ ಮಾರ್ಗೇಣ ಪೂರ್ವಾಚಾರಾನುಸಾರತಃ ।
ಸರ್ವಮಪ್ಯಾಚರೇದ್ಧರ್ಮಂ ತೇನ ಶ್ರೇಯಃ ಪರಂ ಭವೇತ್ ॥

ಇತಿ ಸಂಗ್ರಹೇ.



# ಮಹನೀಯರ ಅಭಿಪ್ರಾಯಗಳು.

॥ ಶ್ರೀಃ ॥

॥ ಶುಭಮಸ್ತು ॥

ಶ್ರೀಮತ್ಪರಮಹಂಸೇತ್ಯಾದಿ ಬಿರುದಾಂಕಿತರಾದ ಶ್ರೀಮದ್ಬಾಳೇಕುದ್ರು ಶ್ರೀಮಠದ ಶ್ರೀ ೧೧೦೮ ಶ್ರೀಮದಾನಂದಾಶ್ರಮಸ್ವಾಮಿಗಳವರ ಸದಾಶಯವು.

ಆಸ್ತಿಕಪಂಚಾಂಗನಿರೂಪಣಪೂರ್ವಕದೃಕ್ಪಂಚಾಂಗಖಂಡನವೆಂಬ ಗ್ರಂಥವನ್ನು ಆಮೂಲಾಗ್ರವಾಗಿ ಪರಿಶೀಲಿಸಿದೆವು. ಇದರಲ್ಲಿ ಪ್ರತಿಪಾದಿಸಲ್ಪಟ್ಟಿರುವ ವಿಷಯಗಳೆಲ್ಲವೂ ಗ್ರಂಥಪ್ರತಿಜ್ಞೆಯನ್ನು ಸಯುಕ್ತಿಕವಾಗಿಯೂ, ಶಾಸ್ತ್ರೀಯವಾಗಿಯೂ ದೃಢಪಡಿಸುತ್ತವೆ. ಇದರ ಪ್ರತಿಜ್ಞೆಯಲ್ಲಿ ಕಾಣಿಸಿರುವಂತೆ ಸೂರ್ಯಸಿದ್ಧಾಂತಾನುಸಾರಿ ಬಾಣವೃದ್ಧಿ, ರಸಕ್ಷಯಲಕ್ಷಣವುಳ್ಳ ತಿಥ್ಯಾದಿಗಳಿಂದಲೂ, ನಿರಯನ ಕರ್ಕ, ಮಕರಸಂಕ್ರಾಂತಿಗಳಿಂದ ಆರಂಭಿಸತಕ್ಕ ದಕ್ಷಿಣೋತ್ತರಾಯಣಗಳಿಂದಲೂ ಕೂಡಿರುವ ಸಿದ್ಧಾಂತಪಂಚಾಂಗವೇ ಶಾಸ್ತ್ರವಿಹಿತವಾದುದೆಂದು ಮೂಲವಚನಗಳಿಂದಲೂ, ಪರಂಪರೆಯಿಂದ ರೂಢವಾಗಿರುವ ಸಾರ್ವದೇಶಿಕಶಿಷ್ಟಾಚಾರದಿಂದಲೂ ಸಿದ್ಧವಾಗಿರುವ ಪ್ರಸಿದ್ಧ ವಿಷಯವೇ ಆಗಿರುತ್ತದೆ.

ಭಗವನ್ಮುಖದಿಂದ ಉಪದಿಷ್ಟವಾದ ಸೂರ್ಯಸಿದ್ಧಾಂತವು ಸಕಲ ವಿದ್ವಜ್ಜನರಿಂದಲೂ ಗೌರವಿಸಲ್ಪಟ್ಟಿರುವ ಅತ್ಯಂತ ಪ್ರಮಾಣಭೂತವಾದ ಗ್ರಂಥವಾಗಿದ್ದು ಈ ದೇಶದಲ್ಲಿಯೂ ಸಹ ಪುರಾತನಕಾಲದಿಂದಲೂ ತದನುಸಾರವಾದ ಪಂಚಾಂಗದಂತೆಯೇ ಆಚರಿಸಿಬಂದದ್ದಾಗಿದೆ. ಆಸ್ತಿಕಮಹಾಜನರಿಗೆಲ್ಲ ಸೂರ್ಯಸಿದ್ಧಾಂತವು ಶ್ರೇಷ್ಠವಾದ ಪ್ರಮಾಣವಾಗಿದ್ದು ತದನುಸಾರಿಯಾದ ಪಂಚಾಂಗವೇ ಶ್ರೌತಸ್ಮಾರ್ತಕರ್ಮಾನುಷ್ಠಾನಗಳಿಗೆಲ್ಲ ವಿಹಿತವಾಗಿರುತ್ತದೆಂದೂ, ತದ್ವಿರುದ್ಧವಾಗಿ ಆಚರಿಸುವುದು ಯುಕ್ತವಲ್ಲವೆಂದೂ ಶಾಸ್ತ್ರದ ತಾತ್ಪರ್ಯವಿರುತ್ತದೆ. ಆ ಪ್ರಕಾರ ಶಾಸ್ತ್ರವಿಹಿತವಾದ ಸಿದ್ಧಾಂತಪಂಚಾಂಗದಂತೆಯೇ ಧರ್ಮಕರ್ಮಗಳನ್ನು ಆಚರಿಸುವಂತೆ ಸಕಲರಿಗೂ ಸದ್ಬುದ್ಧಿಯನ್ನು ಅನುಗ್ರಹಿಸಲೆಂದು ಶ್ರೀಲಕ್ಷ್ಮೀನರಸಿಂಹಸ್ವಾಮಿಯನ್ನು ಪ್ರಾರ್ಥಿಸುತ್ತೇವೆ.

○ ಗುರುಮುದ್ರೆಯು. ಇತಿ ಸುಶಾಧೀಶೈರಾಜ್ಞಪ್ತಃ ॥

---

ಶ್ರೀಮತ್ಪರಮಹಂಸಪರಿವ್ರಾಜಕೇತ್ಯಾದಿ ಬಿರುದಾಂಕಿತರಾದ ಶ್ರೀ ೧೧೦೮ ದ್ವಾರಕಾಜಗದ್ಗುರುಸಂಸ್ಥಾನದ ಶ್ರೀಮದಭಿನವಸಚ್ಚಿದಾನಂದ ತೀರ್ಥಸ್ವಾಮಿಗಳು ದೂರ್ವಾಸಪುರ ಇವರ ಮಹಾನುಶಾಸನವು.

ನಾವು ಈ 'ಆಸ್ತಿಕಪಂಚಾಂಗನಿರೂಪಣಪೂರ್ವಕ ದೃಕ್ಪಂಚಾಂಗ ಖಂಡನವೆಂಬ ಗ್ರಂಥವನ್ನು ಚನ್ನಾಗಿ ಅವಲೋಕಿಸಿದೆವು. ಇದರಲ್ಲಿ ಪ್ರತಿಪಾ

ದಿಸಿರುವ ವಿಷಯಗಳು ಶಾಸ್ತ್ರ, ಮತ್ತು ಸದಾಚಾರಗಳಿಗೆ ಸಮ್ಮತವಾಗಿದ್ದು ಸನಾತನಿಗಳಾದ ಧಾರ್ಮಿಕಜನರಿಗೆ ಬಹಳ ಉಪಕಾರಕವಾಗಿರುವವು; ಎಂದು ತಿಳಿಸು ನಮಗೆ ಬಹಳ ಆನಂದವಾಗಿದೆ. ಸಕಲ ಜನಗೂ ಈ ಗ್ರಂಥದಲ್ಲಿ ಪ್ರತಿಪಾದಿಸಿದ ವಿಷಯಗಳನ್ನು ತಿಳಕೊಂಡು ಅದರಂತೆ ಆಚರಿಸಿ ಶ್ರೇಯಸ್ಸನ್ನು ಹೊಂದಲೆಂದು ನಾವು ಆಜ್ಞಾಪಿಸುತ್ತೇವೆ.

○ ಗುರುಮುದ್ರೆಯು. ಇತಿ ಶ್ರೀ ನಾರಾಯಣಸ್ಮೃತಯಃ ॥

ಸೂ:— ಕನ್ನಡಿಗರೆಲ್ಲರ ತಿಳುವಳಿಕೆಯ ಬಗ್ಗೆ ಸಂಸ್ಕೃತದಲ್ಲಿರುವುದರ ಸಾರವನ್ನೂ ಕನ್ನಡದಲ್ಲಿ ಬರೆದಿರುವೆವು.

ಶ್ರೀಜಗದ್ಗುರುಕರವೀರಮಠಾಧೀಶರಾದ ಅಭಿನವವಿದ್ಯಾನೃಸಿಂಹ ಭಾರತೀಸ್ವಾಮಿಗಳ ಮಹಾನುಶಾಸನವು.

ಪ್ರಾಚೀನ, ಮತ್ತು ನವೀನಪಂಚಾಂಗಗಳ ಗ್ರಾಹ್ಯಾಗ್ರಾಹ್ಯತೆಯ ವಿಷಯವಾಗಿ ನೀವು ಕಳಿಸಿದ ಪ್ರಶ್ನಪತ್ರಿಕೆಯನ್ನು ಅವಲೋಕಿಸಿ ನಾವು ಆಜ್ಞಾಪಿಸುವುದೇದಂದರೆ— ದೃಕ್ಸಿದ್ಧಗ್ರಹರಿಂದ ಸಾಧಿಸಿದ ದೃಕ್ಪಂಚಾಂಗದಂತೆ ಕರ್ಮಾಚರಣೆಮಾಡುವುದು ನರಕಕ್ಕೆ ಕಾರಣವಾಗುವುದೆಂದು ಶಾಸ್ತ್ರವಚನವಿರುವುದರಿಂದ ಧರ್ಮಶಾಸ್ತ್ರಗಳಿಗೆಲ್ಲ ಸಮ್ಮತವಾದ ಬಾಣವೃದ್ಧಿ, ರಸಕ್ಷಯಲಕ್ಷಣದ ತಿಥ್ಯಾದಿಗಳಿಂದ ಕೂಡಿದ ಸಿದ್ಧಾಂತಪಂಚಾಂಗವೇ ದೈವಪಿತ್ರ್ಯ ಕರ್ಮಗಳಿಗೆ ಯೋಗ್ಯವಾದದ್ದು. ಇದು ಧರ್ಮಶಾಸ್ತ್ರದ ಹಲವು ವಚನಗಳಿಂದ ಸಿದ್ಧಾಂತವಾದ ವಿಷಯವಾಗಿರುತ್ತದೆ.

○ ಗುರುಮುದ್ರೆಯು. ಇತಿ ಮಹಾನುಶಾಸನಂ ಪರೀವರ್ತಿ.

ಶ್ರೀ ೧೦೮ ಶ್ರೀಮದುತ್ತರಾದಿ ಮಠಾಧೀಶ ಶ್ರೀಸತ್ಯಧ್ಯಾನತೀರ್ಥ ಸ್ವಾಮಿಗಳ ಸದಭಿಪ್ರಾಯವು.

ಪಂಚಾಂಗವಿಷಯಕವಾದ ನಿರ್ಣಯವನ್ನು ತಿಳಿಯಲಪೇಕ್ಷಿಸುವವರಿಗೆ ನಾವು ತಿಳಿಸುವುದೇನಂದರೆ— ನಾವು ಈ ವಿಷಯವಾಗಿ ಸಭೆಮಾಡಿಸಿ ಮೈಸೂರು, ತಂಜಾವರ, ಅನಂತಶಯನ ಮೊದಲಾದ ಕಡೆಗಳಿಂದ ಮೂಲ ಗ್ರಂಥಗಳನ್ನು ತರಿಸಿ ಆಮೇಲೆ ಗಣಿತಜ್ಞರೂ, ಧರ್ಮಶಾಸ್ತ್ರಜ್ಞರೂ ಆದ ವಿದ್ವಾಂಸರೆದುರಿಗೆ ಆ ಮೂಲಗ್ರಂಥಗಳನ್ನು ಚನ್ನಾಗಿ ವಿಮರ್ಶಿಸಿ ಧರ್ಮಕಾರ್ಯಗಳನ್ನು ದೃಷ್ಟಾದೃಷ್ಟವೆಂದು ವಿಭಾಗಿಸಿ ದೃಷ್ಟಫಲಕಗಳಾದ (ಗ್ರಹಣಾದಿನಿಮಿತ್ತಕ) ಕರ್ಮಗಳನ್ನು ದೃಕ್ಪಂಚಾಂಗದಂತೆಯೂ, ಅದೃಷ್ಟಫಲಕಗಳಾದ (ಶ್ರಾದ್ಧಾದಿ) ಕರ್ಮಗಳನ್ನು ಸೂರ್ಯಸಿದ್ಧಾಂತಾನುಸಾರಿ ಪಂಚಾಂಗದಂತೆಯೂ ಆಚರಿಸಬೇಕೆಂದು ನಿರ್ಣಯಿಸಿ ಅದರಂತೆ ಗ್ರಂಥವನ್ನು ಸಹ ರಚಿಸಿ ಪ್ರಕಟಿಸಿರುವೆವು. ಈ ಗ್ರಂಥವನ್ನವಲೋಕಿಸಿದರೆ ಪಂಚಾಂಗಸ್ವೀಕಾರವಿಷಯದಲ್ಲುಂಟಾದ ಸಂದೇಹಗಳೆಲ್ಲವೂ ದೂರಾಗುವವು.

○ ಗುರುಮುದ್ರೆಯು ಶ್ರೀ ಉತ್ತರಾದಿಮಠಾಧೀಶೈರಾಜ್ಞಪ್ತಃ॥

ಶೀಗೇಹಳ್ಳಿಯ ಶ್ರೀಶಿವಾನಂದಸರಸ್ವತೀಸ್ವಾಮಿಗಳ ಸದಾಶಯವು.

ಈಗ ದೇಶದಲ್ಲಿ ನಡೆವ ಪಂಚಾಂಗವಾದದಲ್ಲಿ ದೃಕ್ಪಕ್ಷವೆಂದೂ, ಸಿದ್ಧಾಂತಪಕ್ಷವೆಂದೂ ಎರಡು ಪಕ್ಷವಿರುವದು ಕಂಡುಬರುತ್ತದೆ. ಈ ಎರಡು ಪಕ್ಷಗಳಲ್ಲಿ ಯಾವುದೇ ಒಂದನ್ನು ಸರ್ವಾತ್ಮನಾ ಸ್ವೀಕರಿಸಿದಲ್ಲಿ ಧರ್ಮಕರ್ಮ ಗಳಿಗೆ ಎಷ್ಟೋ ವಿಷಯಗಳಲ್ಲಿ ಶಾಸ್ತ್ರಾಚಾರತಃ ಬಾಧೆಯಾಗೇ ಆಗುತ್ತದೆ. ಆದ್ದರಿಂದ ಆ ಎರಡೂ ಪಕ್ಷದ ಆಗ್ರಹವನ್ನು ಹಿಡಿಯದೆ ಈ ಕಾಲಕ್ಕೆ ಉಚಿತ ವಾಗಿ ಗ್ರಹಣಾದಿ ದೃಷ್ಟಕರ್ಮಗಳಿಗೆ ದೃಕ್ಪಂಚಾಂಗವನ್ನೂ, ಶ್ರಾದ್ಧಾದಿ ಅದೃಷ್ಟ ಧರ್ಮಕರ್ಮಗಳಿಗೆ 'ತಿಥಿಕ್ಷಯೋ ತು ಸಾಯಾಂತಾ ತದ್ವೃದ್ಧಿರಪಿ ಗೋ ಗುಣೈಃ |' ಇತ್ಯಾದಿಲಕ್ಷಣದ ಸೂರ್ಯಸಿದ್ಧಾಂತಾನುಸಾರಿ ಪಂಚಾಂಗವನ್ನೂ ಸಕಲ ಆಸ್ತಿಕಜನರೂ ಸ್ವೀಕರಿಸುವದು ನಿರಾಗ್ರಹದ ಸೂಕ್ತವಾದ ಪದ್ಧತಿಯು ಇದರಿಂದ ಪಕ್ಷದೋಷಕ್ಕೂ ಆಸ್ಪದವಿಲ್ಲದೆ ಶಾಸ್ತ್ರಾಚಾರಸಮ್ಮತವಾದ ನಿರ್ಣಯವಾಗುತ್ತದೆಂದು ನಮ್ಮ ಅಭಿಪ್ರಾಯವಿರುತ್ತದೆ.

ಇತಿ ಶ್ರೀ ಶಿವಾನಂದಸ್ವಾಮಿನಾಂ ನಾರಾಯಣಸ್ಮರಣಂ.

ಉಡುಪಿಯ ಶ್ರೀಮತ್ಪೂರ್ವಕಮಠಾಧಿಪತಿಗಳಾದ ಶ್ರೀ ವಿಜಯೀಂದ್ರತೀರ್ಥಸ್ವಾಮಿಗಳ ಸದಾಶಯವು.

ವಿದ್ವದ್ವರ್ಯರಾದ ಕೆಕ್ಕಾರು ಶಿವಭಟ್ಟರಿಂದ ರಚಿತವಾದ 'ಆಸ್ತಿಕ ದಕ್ಷಿಣೋತ್ತರಾಯಣ'ವೆಂಬ ಗ್ರಂಥವನ್ನು ನೋಡಿದೆವು. ಗರ್ಗ, ಪರಾಶರಾದಿ ಮಹರ್ಷಿಗಳ ಮತವನ್ನು ನಿರಾಕರಿಸಿ ಸಾಯನಾಯನವಾದಿಗಳು ತಮ್ಮ ಮತ ವನ್ನು ಪ್ರಚಾರಮಾಡುತ್ತಿರುವುದನ್ನು ಸಹಿಸಲಾರದೆ ಬರೆದಿರುವ ಆಸ್ತಿಕಜನರಿ ಗುಚಿತವಾದ ಈ ಪ್ರತಿಪಾದನೆಯನ್ನು ನೋಡಿ ನಾವು ಬಹಳ ಸಂತೋಷಪಟ್ಟಿ ರುವೆವು. ಈ ಗ್ರಂಥವು ಜನರ ಅಜ್ಞಾನವನ್ನು ದೂರಮಾಡಲೆಂದು ಆಶೀರ್ವ ದಿಸುವೆವು.

ಂ ಗುರುಮುದ್ರೆಯು.   ಇತಿ ಶ್ರೀಪೂರ್ವಕಮಠಾಧಿಪತಯಃ||

ದಿಗಂತವಿಶ್ರಾಂತ ಕೀರ್ತಿಯುತರಾದ ಶ್ರೀಮದಭಿನವವಿದ್ಯಾಶಂಕರ ವಾಲುಕೇಶ್ವರ ಸ್ವಾಮಿಗಳು (ಶ್ರೀಮದ್ವಿದ್ವಾನ್‌ಶ್ರೀ, ಮಹಾಮಹೋಪಾಧ್ಯಾಯ ವಿರೂಪಾಕ್ಷಶಾಸ್ತ್ರಿಗಳವರು) ಮತ್ತು ಇವರ ಶಿಷ್ಯಶಿಖಾಮಣಿಗಳಾದ ವಿದ್ವನ್ಮಣಿ, ವಿದ್ಯಾಲಂಕಾರ ನಾಗೇಶಶಾಸ್ತ್ರಿಗಳವರು "ಪ್ರಾಚೀನ ಸಂಪ್ರದಾಯ ವನ್ನನುಸರಿಸಿರುವ ನಿಮಗೆ ಭಗವಂತನು ನಿಶ್ಚಯವಾಗಿಯೂ ಶ್ರೇಯಸ್ಸನ್ನು ದಯಪಾಲಿಸುವನೆಂದು" ಆಶೀರ್ವದಿಸಿರುವರು.

ಬ್ರಹ್ಮಶ್ರೀ ವೇದಮೂರ್ತಿಗಳಾದಂಥ ಆಸ್ಥಾನವಿದ್ವಾನ್ ಶ್ರೀ ವೆಂಕಟ ಸುಬ್ಬ ಶಾಸ್ತ್ರಿಗಳವರು ನಿರೂಪಿಸಿದ ಅಭಿಪ್ರಾಯ:—

— ಶ್ರೀಃ —

॥ ಶುಭಮಸ್ತು ॥

ಶ್ರೀಮದ್ಯಜನಾದಿಷಟ್ಕರ್ಮನಿರತರಾದಂಥ ವೇದಮೂರ್ತಿಬ್ರಹ್ಮಶ್ರೀ ಸಿದ್ಧಾಂತಿ ಭಾಸ್ಕರ ಅಡಿಗರವರು ವಿಮರ್ಶೆಯ ಬಗ್ಗೆ ನನಗೆ ಕಳುಹಿಸಿಕೊಟ್ಟ "ಆಸ್ತಿಕಪಂಚಾಂಗನಿರೂಪಣಪೂರ್ವಕ (ನವೀನ) ದೃಕ್ಪಂಚಾಂಗಖಂಡನಂ" ಎಂಬ ಗ್ರಂಥವನ್ನು ಆಮೂಲಾಗ್ರವಾಗಿ ಪರಿಶೀಲನೆಮಾಡಿರುತ್ತೇನೆ. ಸಾವಯವ ಪಂಚಘಟೀವೃದ್ಧಿಯೂ, ಸಾವಯವ ಷಡ್ಘಟೀಕ್ಷಯವೂ ಬರುವಂತಿರುವ ಗಣಿತಸಿದ್ಧ ತಿಥಿಯನ್ನೇ ಸ್ವೀಕರಿಸಿ ಕರ್ಮಾನುಷ್ಠಾನವನ್ನು ಮಾಡಬೇಕೆಂಬುದಾಗಿ ಅನೇಕಶಾಸ್ತ್ರಗಳಿಂದ ಸಿದ್ಧವಾಗಿದೆ. ಸೂರ್ಯಸಿದ್ಧಾಂತರೀತ್ಯಾ ಸಾಧಿತತಿಥಿಘಟಿಯು ಮೇಲ್ಕಂಡ ಬಾಣವೃದ್ಧಿ, ರಸಕ್ಷಯಪಕ್ಷಕ್ಕೆ ಸೇರಿದುದಾಗಿದೆ. ಶ್ರೀ ಭಾಸ್ಕರಾಚಾರ್ಯರು ರಚಿಸಿದ ಸಿದ್ಧಾಂತಶಿರೋಮಣಿ, (ಬೇರೆ) ಆರ್ಯಭಟೀಯ ಮೊದಲಾದ ಗ್ರಂಥಗಳಲ್ಲಿಯೂ ಈ ಪಕ್ಷವೇ ಇರುತ್ತದೆ.

ವಿಶೇಷಸಂಸ್ಕಾರಗಳನ್ನು ಮಾಡದೇ ಕೇವಲ ಸೂರ್ಯಸಿದ್ಧಾಂತ ರೀತಿಯಾಗಿಯೇ ಚಾಂದ್ರಮಾನಾನುಷ್ಠಾನಮಾಡುವವರು ಕರ್ಮಾನುಷ್ಠಾನ ಮಾಡುತ್ತಾರೆ. ಸೌರಮಾನಾನುಷ್ಠಾನಮಾಡುವ ದ್ರಾವಿಡದೇಶದವರು,— ದೃಕ್ಸಿದ್ಧಗ್ರಹಸಾಧಿತ ತಿಥಿಯು ಗ್ರಾಹ್ಯವೆಂದು ಹೇಳುವವರಾದರೂ— ಬಾಣವೃದ್ಧಿ, ರಸಕ್ಷಯಪಕ್ಷದ ವಾಕ್ಯಪಂಚಾಂಗ ರೀತಿಯಾಗಿಯೇ ಕರ್ಮಾನುಷ್ಠಾನಮಾಡುತ್ತಾರೆ. ಪ್ರಕೃತದಲ್ಲಿ 'ಅಷ್ಟವೃದ್ಧಿರ್ದಶಕ್ಷಯಃ' ಎಂಬ ರೀತಿಯಲ್ಲಿ ಆಂಗ್ಲೇಯರು ಸಾಧಿಸಿದ ಮಾರ್ಗವನ್ನು ಅನುಸರಿಸಿದ ತಿಥ್ಯಾದಿಗಳ ಪ್ರಕಾರ ಕರ್ಮಾನುಷ್ಠಾನಮಾಡುವುದಕ್ಕೆ ಯಾವ ಶಾಸ್ತ್ರವೂ ಅವಕಾಶಕೊಡುವುದಿಲ್ಲ. ಮತ್ತು ಈ 'ಅಷ್ಟವೃದ್ಧಿರ್ದಶಕ್ಷಯಃ' ಎಂಬ ಪಕ್ಷದಲ್ಲಿ ಸಿದ್ಧಾಂತತಿಥಿಯ ಪ್ರಾರಂಭಕಾಲಕ್ಕಿಂತಲೂ ೧೮ ಘಳಿಗೆಯಷ್ಟು ವ್ಯತ್ಯಾಸವು ತಿಥಿಪ್ರಾರಂಭಕಾಲಕ್ಕೆ ಬರುವುದರಿಂದ ಈ ನವೀನದೃಕ್ಪಕ್ಷವು ಕರ್ಮಾನುಷ್ಠಾನಕ್ಕೆ ಯೋಗ್ಯವಲ್ಲ. ಭಾಸ್ಕರಾಚಾರ್ಯರು ತಮ್ಮ ಗೋಳಾಧ್ಯಾಯದಲ್ಲಿ ಗತಿಫಲಾಭಾವಸ್ಥಾನವನ್ನು ಹೇಳುವ ಸಂದರ್ಭದಲ್ಲಿ— ಶ್ಲೋ—"ಕಕ್ಷಾಮಧ್ಯಗತಿರ್ಯಗ್ರೇಖಾಪ್ರತಿವೃತ್ತಸಂಪಾತೇ । ಮಧ್ಯೈವ ಗತಿಃ ಸ್ಪಷ್ಟಾ ಪರಂ ಫಲಂ ತತ್ರ ಖೇಟಸ್ಯ ॥" ಎಂಬ ಶ್ಲೋಕದ ವಾಸನಾಭಾಷ್ಯದಲ್ಲಿ ವಿವರಿಸಿರುವ ವಿಷಯಗಳನ್ನು ಪರಿಶೀಲಿಸಲಾಗಿ ಕಕ್ಷಾಮಧ್ಯಗತಿರ್ಯಗ್ರೇಖಾಪ್ರತಿವೃತ್ತಸಂಪಾತಸ್ಥಾನದಲ್ಲಿ ಗ್ರಹವಿದ್ದರೆ ಮಧ್ಯಗತಿಯೇ ಸ್ಫುಟಗತಿಯು; ಗತಿಫಲವು ಇಲ್ಲ; ಸಂಪೂರ್ಣಮಂದಫಲವು ಇರುತ್ತದೆ; ಎಂದು ಹೇಳಿರುತ್ತಾರೆ. ಇದಕ್ಕನುಸಾರವಾಗಿ ಪ್ರಾಚೀನ ಗಣಿತಗಳು ಇರುತ್ತವೆ. ನವೀನದೃಗ್ಗಣಿತರೀತ್ಯಾ ಕಕ್ಷಾಮಧ್ಯಗತಿರ್ಯಗ್ರೇ

ಖಾಪ್ರತಿವೃತ್ತಸಂಪಾತಸ್ಥಾನದಲ್ಲಿ ಗ್ರಹವು ಇದ್ದರೂ ತಿಥಿಫಲ, ಚ್ಯುತಿಫಲ ಮೊದಲಾದವುಗಳು ಬಂದು ಮಧ್ಯಗತಿಗಿಂತಲೂ ಭಿನ್ನವಾಗಿ ಸ್ಪುಟಗತಿಯು ಬರುವುದರಿಂದ ಈ (ನವೀನದೃಕ್) ಗಣಿತಕ್ರಮವು ಭಾಸ್ಕರಾಚಾರ್ಯರೇ ಮೊದಲಾದ ಸಕಲಸಿದ್ಧಾಂತಕರ್ತೃಗಳ ಮತಗಳಿಗೂ ವಿರುದ್ಧವಾಗಿದೆ.

ಆಂಗ್ಲೇಯರ ಮಾರ್ಗದಿಂದ ಮಧ್ಯರವಿಗತಿಯನ್ನು ನೋಡಿ ವಿಮರ್ಶೆಮಾಡುತ್ತಾ ಹೋದರೆ (ಪರಂಪರಾಗತವಾಗಿ) ಪ್ರತ್ಯಕ್ಷವಾದ ಕಲ್ಯಾದ್ಯಹರ್ಗಣದಲ್ಲಿ ೧೫ ದಿನ ವ್ಯತ್ಯಾಸವು ಕಂಡುಬರುತ್ತದೆ. ಅದರಂತೆ ಚಂದ್ರಗತಿಯಿಂದ ದ್ವಾದಶದಿನ ವ್ಯತ್ಯಾಸವು ಬರುವುದಿಲ್ಲ. ಸಿದ್ಧಾಂತಾಹರ್ಗಣವೇ ಪ್ರತ್ಯಕ್ಷಸಿದ್ಧವಾಗಿರುವುದರಿಂದ ನವೀನದೃಕ್ಪಕ್ಷದವರು ತಮ್ಮ ರವಿಮಧ್ಯಗತಿಸಾಧನೆ, ಅಥವಾ ಚಂದ್ರಮಧ್ಯಸಾಧನೆ, ಅಥವಾ ತಮ್ಮ ಅಯನಾಂಶಗತಿ, ಅಥವಾ ಕಲ್ಯಾದ್ಯಹರ್ಗಣ ಇವುಗಳಲ್ಲಿ ಯಾವುದೊಂದನ್ನಾದರೂ ಕಲ್ಯಾದಿಯಿಂದ ಈ ದಿನದವರೆಗೂ ಸಮನ್ವಯಮಾಡಿ ಏಕರೀತಿಯಾದ ಕ್ರಮದಿಂದ ತೋರಿಸಿದರೆ ಅದೇ ಕ್ರಮದಿಂದ ಮತ್ತೊಂದನ್ನು ಸರಿಯಾಗಿ ತೋರಿಸಿ ಗಣಿತಮಾಡಿ ಒಪ್ಪಿಸುವುದಕ್ಕೆ ಸಾಧ್ಯವಾಗುವುದಿಲ್ಲವೆಂದು (ಅವರಾದರೂ) ಸಮ್ಮತಿಸಲೇ ಬೇಕಾಗುತ್ತದೆ. ಬಾಣವೃದ್ಧಿ,ರಸಕ್ಷಯಪಕ್ಷದಿಂದಲೇ ಪರ್ವಾಂತವು ಸರಿಯಾಗಿ ದೃಕ್ಪ್ರತ್ಯಕ್ಷವಾದ ಗ್ರಹಣಕಾಲವನ್ನು ತೋರಿಸುವಂತೆ ಗಣಿತಕ್ರಮವನ್ನು ನಾನು ಸಿದ್ಧಮಾಡಿದ್ದೇನೆ. ಕಾರ್ಯಬಾಹುಳ್ಯದಿಂದ ಗ್ರಂಥರಚನೆಯನ್ನು ಮಾಡಿ ಮುದ್ರಣಮಾಡಿಸಲಾಗಲಿಲ್ಲ. ಪ್ರಕೃತೇ ಶಾಸ್ತ್ರಾನುಸಾರವಾಗಿ ಸಿದ್ಧಾಂತಪಂಚಾಂಗಪ್ರಕಾರವಾಗಲೀ, ಶಾಸ್ತ್ರೋಕ್ತಮಾರ್ಗವನ್ನು ಅನುಸರಿಸಿದ (ಸಾವಯವ)ಬಾಣವೃದ್ಧಿ,ರಸಕ್ಷಯವುಳ್ಳ ಗಣಿತರೀತಿಯಾಗಿಯಾಗಲಿ ಕರ್ಮಾನುಷ್ಠಾನಮಾಡುವುದೇ ಸರಿಯೇ ಹೊರತು ನವೀನ ದೃಗ್ಗಣಿತರೀತ್ಯಾ ಕರ್ಮಾನುಷ್ಠಾನಮಾಡುವುದು ಶಾಸ್ತ್ರಸಮ್ಮತವಲ್ಲ.

ಶ್ರುತಿಸ್ಮೃತ್ಯುದಿತತ್ವೇ ಸತಿ, ನ್ಯಾಯಾವಿರುದ್ಧತ್ವೇ ಸತಿ, ಶಿಷ್ಟಾನುಷ್ಠಿತತ್ವಂ ಆಚಾರಸ್ಯ ಲಕ್ಷಣಂ– ಎಂಬಂತೆ ಶಾಸ್ತ್ರೋಕ್ತವಾಗಿಯೂ, ಸದಾಚಾರವಾಗಿ ಪರಂಪರೆಯಿಂದಲೂ ಅನುಷ್ಠಾನಮಾಡಿಕೊಂಡು ಬಂದಿರುವ ಮಾರ್ಗವನ್ನು ಹಿಡಿದು ನಡೆಯುವವರೇ ಶ್ರೇಯಸ್ಸನ್ನು ಹೊಂದುವವರಾಗುತ್ತಾರೆಂದು ದೃಢವಾಗಿ ನಂಬಿರುತ್ತೇನೆ.

ವೇದಮೂರ್ತಿ ಬ್ರಹ್ಮಶ್ರೀ ಸಿದ್ಧಾಂತಿ ಭಾಸ್ಕರ ಅಡಿಗ್ಗರವರು (ಪರಿಷ್ಕರಿಸಿ) ಬರೆದಿರುವ ಈ (ಗ್ರಂಥಸ್ಥ) ವಿಷಯವು ಬಹಳ ಶ್ಲಾಘ್ಯವಾಗಿಯೂ, ಶಾಸ್ತ್ರಸಮ್ಮತವಾಗಿಯೂ ಇರುವುದೆಂದು ನನ್ನ ಅಭಿಪ್ರಾಯವನ್ನು ಆಸ್ತಿಕ ಮಹನೀಯರಲ್ಲಿ ವಿನಯಪೂರ್ವಕವಾಗಿ ವಿಜ್ಞಾಪಿಸುತ್ತೇನೆ.

ದೇವರು ಈ ಮಹನೀಯರಾದ ಭಾಸ್ಕರ ಅಡಿಗರವರಿಗೆ ಇತೋಽಪ್ಯಧಿಕವಾದ ವಿದ್ಯಾಜಯಯಶಃ ಶ್ರೀಕಾಮಾಯುಷ್ಯಾಭಿವೃದ್ಧಿಯನ್ನುಂಟುಮಾಡ

ಲೆಂದು ಪ್ರಾರ್ಥಿಸುತ್ತೇನೆ. ಮತ್ತು ಇವರಿಗೆ ನನ್ನ ಧನ್ಯವಾದಗಳನ್ನು ಸಮರ್ಪಿಸುತ್ತೇನೆ.

ಇತಿ ಸಜ್ಜನವಿಧೇಯ—

ವೆಂಕಟಸುಬ್ಬ ಶಾಸ್ತ್ರೀ.

ಆಸ್ಥಾನವಿದ್ವಾನ್, ಜ್ಯೋತಿಃಶಾಸ್ತ್ರವಿದ್ವಾನ್, ಉಭಯಭಾಷಾವಿದ್ವಾನ್

ಶ್ರೀ. ಶ್ರೀ. ಶೃಂಗಗಿರಿ ಶ್ರೀಜಗದ್ಗುರು ಶ್ರೀಮಠೀಯ ಪಂಚಾಂಗಕರ್ತಾ.

ತಾರೀಕು— 20-3-1945. ಕೊಳ್ಳೇಗಾಲ.

---

|| ಶುಭಮಸ್ತು ||

ಮೂಲಾಶುದ್ಧಿರ್ಮಹರ್ಷೀಣಾಂ ವಚನೇ ಯದಿ ತರ್ಕ್ಯತೇ | ತದಾಸ್ಮದಾದಿವತ್ತೇಷಾಂ ಸರ್ವಜ್ಞತ್ವಂ ನ ಯುಜ್ಯತೇ || ಅತಸ್ತದುಕ್ತಧರ್ಮೇಷು ಮಿಥ್ಯಾತ್ವಾದಿವಿಭಾವನಾತ್ | ವೇದೋಕ್ತಫಲಸಿಧ್ಯರ್ಥಂ ಪ್ರತಿಭಾ ಸಾವತಿಷ್ಠತೇ || ಇತ್ಥಂ ಪ್ರಸಜ್ಜತೇ ಸರ್ವವಿಶ್ವಾಸಾಭಾವಭಾವನಾ | ತಿಥ್ಯಾದಿತದನುಷ್ಠೇಯಕರ್ಮಣಾಂ ತು ಕಥೈವ ಕಾ || ಆಸ್ತಾಂ ತಾವದ್ಭೂರಿವಾದಾ ಲೌಕಾಯತಿಕಕಲ್ಪನಾ | ಯಾ ನಿರಸ್ತಾ ಸಮಸ್ತೈವ ಪ್ರಶಸ್ತಶ್ರುತಿಶಾಲಿಭಿಃ || ಪ್ರಕೃತೇ ತು ಮಹರ್ಷೀಣಾಂ ಸರ್ವಜ್ಞತ್ವಪ್ರಭಾಜುಷಾಂ| ಆಜ್ಞಯೈವ ಪ್ರವರ್ತಂತೇ ಧರ್ಮಕರ್ಮಾಣಿ ಯತ್ನತಃ || ತೈರೇವ ಪುನರಾದಿಷ್ಟಾ ದ್ವೇಧಾ ಗಣಿತಕಲ್ಪನಾ | ದೃಷ್ಟಾದೃಷ್ಟಫಲಪ್ರಾಪ್ತ್ಯೈ ತತೋ ಧರ್ಮವ್ಯವಸ್ಥಿತಿಃ ||

ಅಸ್ಮಾಕಮಾಗಮ ಏಕೋ ನಿಯಾಮಕಃ | ವಿಶೇಷತಃ ಸೂರ್ಯಸಿದ್ಧಾಂತಸಮಾದರಮವಧಾರ್ಯ ಶುದ್ಧಮಾರ್ಗಪ್ರವೃತ್ತ್ಯೈ ಸೌರಪಕ್ಷ ಏವಾಶ್ರಯಣೀಯ ಇತಿ || ವಸ್ತುತಃ ಸಮಾದರಣೀಯಃ ಸೌರತಂತ್ರಂ || ಯುರೋಪದೇಶೇ ಯತ್ರಾಟಿಕಾಪತ್ರಂ ವಿಶೇಷತೋ ನಾವಿಕಾರ್ಥಂ ಪ್ರತಿವತ್ಸರಂ ಪ್ರಕಾಶ್ಯತೇ ತತ್ಪತ್ರಾತ್ತದುಪಜೀವ್ಯ ನಿಬಂಧಾದ್ವಾ ಅವಗತಾಭ್ಯಾಂ ರವೀಂದುಭ್ಯಾಮಸ್ಮದ್ದೇಶೀಯರೀತ್ಯಾ ತಿಥಿನಕ್ಷತ್ರಾದಿ ಸಾಧಯಿತುಂ ಶಕ್ಯತೇ | ತತ್ತಿಥ್ಯಾದಿಕಮಸ್ಮದಾರ್ಷಗ್ರಂಥಾನುರೋಧೇನಾನೀತಾತ್ತಿಥ್ಯಾದಿಕಾದ್ಭಿನ್ನಮಾಯಾತಿ | ಪರಮೇತನ್ನೂತನಂ ತಿಥ್ಯಾದಿ ವ್ರತೋಪವಾಸಾದೇರನೈತ್ರೋಪಯುಕ್ತಮಿತಿ ಯುಕ್ತಂ ಪ್ರತೀಮಃ || ಸಾಂಪ್ರತಮೇವ ತಿಥ್ಯಾಥಾ ಭೇದ ಇತಿ ಚೇತ್ ಭ್ರಾಂತಿಮಾತ್ರಂ | ಯದಂತರಪತನಕಾರಣಮಿದಾನೀಂ ಸಮುಪಸ್ಥಿತಂ ತತ್ಪುರಾಪ್ಯುಪಪತ್ತ್ಯಾ ಸಿಧ್ಯತಿ | ಅಸ್ಮನ್ಮತೇ ಮಹರ್ಷಿಭಿರೇತದಂತರಂ ಬುಧ್ವಾಪಿ ನಾದೃತಂ | ಯತಸ್ತೇ ಸರ್ವಜ್ಞಾಃ | ಪರೇಷಾಂ ಮತೇ ತು ತೈರ್ನಬುದ್ಧಂ | ಪರಂ ಚೈತತ್ಕ ಆಸ್ತಿಕಃ ಶ್ರದ್ದಧೀತ | ತಿಥ್ಯಾದೀನಾಂ ತದನುಷ್ಠೇಯಕರ್ಮಣಾಂ ಚೋದೇಷ್ಟಾರೋ ಮಹರ್ಷಯ ಏವ | ತೇಷಾಂ ಚ ಹಾನೋಪಾದಾನೇ ಯುಗಪತ್ಸಂಭವತಃ | ಸ್ವೇಚ್ಛಯಾ ತ್ವರ್ಧಜರತೀಯಾಶ್ರಯಣಂ ಸ್ಪಷ್ಟಮಿತಿ ಸಿದ್ಧಾಂತಿತೋಽರ್ಥಃ ||

ತಾತ್ಪರ್ಯ:— ಮಹರ್ಷಿಗಳ ವಚನಗಳು ಮೂಲತಃ ಶುದ್ಧವಾದವುಗಳಲ್ಲವೆಂದು ತರ್ಕಿಸಿದರೆ ಅವರು ನಮ್ಮಂತೆಯೇ ಅಜ್ಞರಾದ ಸಾಮಾನ್ಯಮನುಷ್ಯರೆಂದೂ, ಸರ್ವಜ್ಞರಲ್ಲವೆಂದೂ ತಿಳಿಯತಕ್ಕ ಪ್ರಸಂಗವು ಬರುವದು. ಇದರಿಂದ ಅವರು ಉಪದೇಶಿಸಿರುವ ಧರ್ಮಕರ್ಮಗಳು ಪ್ರಾಮಾಣಿಕವಾದವುಗಳಲ್ಲವೆಂಬ ಭಾವನೆಗೆ ಅವಕಾಶವಾಗುವುದಲ್ಲದೆ ಪರಿಣಾಮವಾಗಿ ವೇದೋಕ್ತಫಲಸಿದ್ಧಿಗೋಸ್ಕರ ಮಾಡತಕ್ಕ ಕರ್ಮಗಳಲ್ಲಿಯೂ ಸಹ ವಿಶ್ವಾಸವು ಸ್ಥಿರವಾಗಿ ಉಳಿಯಲಾರದು. ಹೀಗೆ ಪ್ರಮಾಣಭೂತವಾದ ವೇದಾದಿಸಕಲವಿಷಯ

ಗಳಲ್ಲಿಯೂ ಅವಿಶ್ವಾಸಕ್ಕೆ ಕಾರಣವಾಗುತ್ತಿರುವಲ್ಲಿ ತಿಥ್ಯಾದಿಗಳು, ಹಾಗೂ ಅವುಗಳಲ್ಲಿ ಆಚರಿಸತಕ್ಕ ಕರ್ಮಗಳ (ವಿಷಯದಲ್ಲಿ ವಿಶ್ವಾಸವು ಏನೂ ಉಳಿಯಲಾರದಾದ್ದರಿಂದ ಅವುಗಳ) ಪಾಡೇನು ? ಕೇವಲ ನಾಸ್ತಿಕಕಲ್ಪನಾಮಾತ್ರವಾಗಿರುವ ಅತಿವಾದಗಳು ಹಾಗಿರಲಿ ! ವೇದಾರ್ಥಗಳನ್ನು ಸರಿಯಾಗಿ ತಿಳಿದಿರುವ ಮಹಾಪುರುಷರೇ ಇಂತಹ ನಾಸ್ತಿಕವಾದವನ್ನು ಸಮೂಲವಾಗಿ ಖಂಡಿಸಿದ್ದಾರೆ. ಪ್ರಕೃತವಾದ (ಪಂಚಾಂಗಗಣಿತ) ವಿಷಯದಲ್ಲಿ ಹೇಳುವುದಾದರೆ– ಸರ್ವಜ್ಞರೆಂದು ಪ್ರಸಿದ್ಧರಾಗಿರುವ ಮಹರ್ಷಿಗಳ ಆಜ್ಞಾರೂಪವಾದ ಶಾಸ್ತ್ರಗಳನ್ನು ಅನುಸರಿಸಿಯೇ ಆಸ್ತಿಕರಾದವರು ಯತ್ನದಿಂದ ಸಕಲಧರ್ಮಕರ್ಮಗಳನ್ನು ಆಚರಿಸತಕ್ಕದ್ದಾಗಿದೆ. ದೃಷ್ಟ, ಮತ್ತು ಅದೃಷ್ಟಮೂಲಕವಾದ ಕರ್ಮಫಲಪ್ರಾಪ್ತಿಯ ಬಗ್ಗೆ ಪ್ರಯೋಜಕವಾಗಿರುವ ಗಣಿತಕ್ರಮವನ್ನು ಸಹ ಅಂತಹ ಮಹರ್ಷಿಗಳೇ ದೃಷ್ಟಾದೃಷ್ಟವಿಷಯಗಳಿಗೆ ತಕ್ಕಂತೆ ಬೇರ್ಪಡಿಸಿಕೊಳ್ಳಬೇಕೆಂದು ಉಪದೇಶಿಸಿದ್ದಾರೆ. ಹಾಗೆ ಮಾಡುವುದರಿಂದಲೇ ಧರ್ಮಕರ್ಮಗಳಿಗೆ ಸರಿಯಾದ ವ್ಯವಸ್ಥೆಯು ಉಂಟಾಗುವುದು. ಆಸ್ತಿಕರಾದ ನಮಗೆ ಆರ್ಷಶಾಸ್ತ್ರವಷ್ಟೇ ಪ್ರಮಾಣವಾಗಿರತಕ್ಕದ್ದು. ವಿಶೇಷತಃ ಸೂರ್ಯಸಿದ್ಧಾಂತವೇ ಪ್ರಶಸ್ತವಾದುದೆಂದು ಶಾಸ್ತ್ರದ ತಾತ್ಪರ್ಯವಿರುವುದರಿಂದ ಶುದ್ಧವಾದ ಮಾರ್ಗದಲ್ಲಿ ಪ್ರವರ್ತಿಸುವವರು ಅದನ್ನೇ ಅವಲಂಬಿಸಬೇಕು. **ನಿಜವಾಗಿಯೂ ಸೂರ್ಯಸಿದ್ಧಾಂತವು ಆದರಣೀಯ (ಶ್ರೇಷ್ಠಪ್ರಮಾಣ)ವಾಗಿದೆ.** ಯುರೋಪದೇಶದಲ್ಲಿ ನಾವಿಕರ ಉಪಯೋಗದ ಬಗ್ಗೆ ಪ್ರತಿವರ್ಷವೂ ಪ್ರಕಟಿಸಲ್ಪಡುವ ನಾವಿಕಪಂಚಾಂಗದಿಂದಾಗಲಿ, ತದನುಸಾರವಾಗಿ ರಚಿಸಲ್ಪಟ್ಟಿರುವ (ಕೇತಕೀ ಮುಂತಾದ ನೂತನ) ಕರಣಗ್ರಂಥಗಳಿಂದಾಗಲೀ ಸೂರ್ಯಚಂದ್ರರನ್ನು ತಯಾರಿಸಿಕೊಂಡು ತನ್ಮೂಲಕ ನಮ್ಮ ದೇಶೀಯ ಪದ್ಧತಿಯ ತಿಥಿ, ನಕ್ಷತ್ರಾದಿಗಳನ್ನು ಸಾಧಿಸಿಕೊಳ್ಳಲಿಕ್ಕೆ ಶಕ್ಯವಿದೆ. ಆದರೆ ಈ ತಿಥ್ಯಾದಿಗಳು ಆರ್ಷಸಿದ್ಧಾಂತಶಾಸ್ತ್ರದಂತೆ ಸಿದ್ಧವಾಗುವ ತಿಥ್ಯಾದಿಗಳಿಗೆ ಸರಿಯಾಗದೆ ಬೇರೆಯಾಗುತ್ತವೆ. ಇಂತಹ ನವೀನರೀತಿಯ ತಿಥ್ಯಾದಿಗಳು ವ್ರತ, ಉಪವಾಸಾದಿ ಧಾರ್ಮಿಕಕಾರ್ಯಗಳಲ್ಲಿ ಉಪಯುಕ್ತವಾಗಿರದೆ ( ದೃಕ್ತುಲ್ಯವಾಗಿರತಕ್ಕ ) ಇತರ ವಿಷಯಗಳಿಗೆ ಮಾತ್ರ ಉಪಯೋಗಕರವೆಂಬುದು ಯುಕ್ತವೆಂದು ತಿಳಿಯುತ್ತೇವೆ. (ಇನ್ನು ಮುಂದಿನ ವಾಕ್ಯಗಳಲ್ಲಿ–.ನೂತನಸಂಸ್ಕಾರಗಳನ್ನು ಮಾಡಿರುವ ದೃಕ್ತಿಥ್ಯಾದಿಗಳಲ್ಲಿ ಪುರಾತನ ಆರ್ಷಶಾಸ್ತ್ರೋಕ್ತವಾದ ಧರ್ಮಕರ್ಮಗಳನ್ನು ಆಚರಿಸುವುದು '**ಅರ್ಧಜರತೀಯನ್ಯಾಯ**'ವಂತೆ ಅಯುಕ್ತವಾಗುವುದೆಂಬುದನ್ನು ಸಯುಕ್ತಿಕವಾಗಿ ಪ್ರತಿಪಾದಿಸಿರುತ್ತಾರೆ. )

ಇತಿ ಶ್ರೀಮಜ್ಜಯಪುರಮಹಾಸಂಸ್ಥಾನದ ಆಸ್ಥಾನವಿದ್ವಾಂಸರೂ, ರಾಜಕೀಯ ಸಂಸ್ಕೃತಮಹಾಪಾಠಶಾಲೆಯಲ್ಲಿ ಜ್ಯೋತಿಃಶಾಸ್ತ್ರದ ಪ್ರಧಾನ ಅಧ್ಯಾಪಕರೂ, **ಮಹಾಮಹೋಪಾಧ್ಯಾಯರೆಂಬ** ಪ್ರಶಸ್ತತರವಾದ ಬಿರುದನ್ನು ಹೊಂದಿದವರೂ, ಪಂಚಾಂಗತತ್ತ್ವ, ಅಧಿಮಾಸಪರೀಕ್ಷಾದಿ ಅನೇಕಗ್ರಂಥಗಳನ್ನು ರಚಿಸಿದವರೂ ಆಗಿರುವ **ಶ್ರೀ ದುರ್ಗಾಪ್ರಸಾದ ದ್ವಿವೇದಿಗಳವರು.**

ಇದರಂತೆಯೇ ಇವರ ಪ್ರಸಿದ್ಧ ಶಿಷ್ಯರೂ, ಸೂರ್ಯಸಿದ್ಧಾಂತ ಟೀಕೆ ಮೊದಲಾದ ಗ್ರಂಥಕರ್ತೃಗಳೂ ಆದ ಶ್ರೀ ಮಾಧವದಾಸಪುರೋಹಿತ, ಸಿದ್ಧಾಂತವಾಗೀಶ ಜಯಪುರ ನಿವಾಸಿ ಇವರ ಅಭಿಪ್ರಾಯವೂ ಇರುತ್ತದೆ.



ಶ್ರೀ ಗುರುಃ ಶರಣಂ ॥ 'ಆಸ್ತಿಕದಕ್ಷಿಣೋತ್ತರಾಯಣಂ' 'ಅಯನನಿರ್ಣಯಸಂಗ್ರಹಃ' 'ಶಾಸ್ತ್ರವಿಹಿತಪಂಚಾಂಗನಿರ್ಣಯಃ' ಎಂಬ ಈ ಮೂರೂ ಗ್ರಂಥಗಳು ಪ್ರಾಚೀನ ಋಷಿಗಳಿಗೆ ಸಮ್ಮತವಾದ ಧರ್ಮಕರ್ಮಗಳನ್ನು ಅನುಷ್ಠಾನಮಾಡುವವರಾದ ಆಸ್ತಿಕಜನರಿಗೆ ಅನಾದಿಕಾಲದಿಂದ ಪ್ರಾಪ್ತವಾದ (ಧರ್ಮಾನುಷ್ಠಾನಪರಂಪರೆಯಿಂದ ಬಂದ) ಧಾರ್ಮಿಕಕಾರ್ಯವನ್ನು ಮಾಡುವರೀತಿಯನ್ನು ತೋರಿಸಿಕೊಡುವವೆಂದು ನಾವು ಖಂಡಿತವಾಗಿ ಹೇಳುತ್ತೇವೆ.

ಪ್ರೊ. ಗೋಪಾಲಶಾಸ್ತ್ರೀ ನೇನೇ ಗವರ್ನಮೆಂಟ್ ಸಂಸ್ಕೃತಕಾಲೇಜ ಕಾಶೀ.
ಪಂಡಿತರಾಜ ರಾಜೇಶ್ವರ ಶಾಸ್ತ್ರೀ ದ್ರಾವಿಡಃ ನ್ಯಾಯಾಚಾರ್ಯ.
ಮಹಾಮಹೋಪಾಧ್ಯಾಯ ಲಕ್ಷ್ಮಣ ಶಾಸ್ತ್ರೀ ತೈಲಂಗ.
ಪಂ. ಸಭಾಪತಿ ಉಪಾಧ್ಯಾಯ ವ್ಯಾಕರಣಾಚಾರ್ಯ ಅಧ್ಯಾಪಕ ಬಿರಲಾವಿ
ಮಹಾಮಹೋಪಾಧ್ಯಾಯ ಪಂ. ಮುಕುಂದ ಝಾ. ಕಾಶೀ. [ದ್ಯಾಲಯ.



ಶ್ರೀಃ॥ ಸೃಷ್ಟ್ಯಾದಿಯಿಂದ ಯಾವ ಕಾಲಕ್ಕಾದರೂ ಸರಿಬರುವಂತೆ ಗಣಿತಕ್ರಮವನ್ನು ತಿಳುಹಿಸುವ ಸೂರ್ಯಸಿದ್ಧಾಂತವು ಪ್ರಸಿದ್ಧವಾಗಿ ಅಬಾಧಿತಪ್ರಮಾಣವಾಗಿದೆ. ಆದ್ದರಿಂದ ಸರ್ವಕಾಲಗಳಲ್ಲಿಯೂ ಬಹಳ ವ್ಯತ್ಯಾಸ ತೋರದೆ ಸಮಸೂತ್ರವಾಗಿರುವಂತೆ ಸೂರ್ಯದೇವರಿಂದಲೇ ಅನುಗ್ರಹಿಸಲ್ಪಟ್ಟಿರುವ ಸೌರೋಪನಿಷತ್ತೆಂಬ ಸೂರ್ಯಸಿದ್ಧಾಂತಪ್ರಕಾರವೇ ಗ್ರಹಗಣಿತ ಮಾಡಿಕೊಳ್ಳುವುದು ನಿರಾಕ್ಷೇಪವಾಗಿರುತ್ತದೆ. ಅದೃಷ್ಟಫಲಕವಾದ ಯಜ್ಞ, ದಾನ, ತಪೋಹೋಮಾದಿ ಕರ್ಮಗಳಿಗಂತೂ ಸೂರ್ಯಸಿದ್ಧಾಂತವೇ ಪ್ರಮಾಣವೆಂದು ಸಂಪ್ರತಿಪನ್ನವಾಗಿರುವುದರಿಂದ ಆ ವಿಷಯದಲ್ಲಿ ದೃಗ್ಗಣಿತವೂ, ಇತರ ಗ್ರಂಥಗಳೂ ಸರ್ವಾತ್ಮನಾ ಉಪಯೋಗಿಸಲ್ಪಡತಕ್ಕವುಗಳಲ್ಲ. ದೃಗ್ಗಣಿತವು ಕಾಲಭೇದದಿಂದ ಅನೇಕ ವಿಧವಾಗಿಯೂ, ಅವ್ಯವಸ್ಥಿತವಾಗಿಯೂ ಇರುತ್ತದೆಯಾದ್ದರಿಂದ ಎಲ್ಲರೂ ಸೂರ್ಯಸಿದ್ಧಾಂತವನ್ನೇ ಅನುಸರಿಸಬೇಕಾಗಿರುತ್ತದೆ. ಇದೆಲ್ಲವನ್ನೂ ಪರ್ಯಾಲೋಚಿಸಲಾಗಿ ಸೂರ್ಯಸಿದ್ಧಾಂತಾವಲಂಬನವೇ ಉತ್ತಮವಾಗಿರುವದು.

ಇತಿ ಶ್ರೀ॥ ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿಗಳು ಕಲ್ಯಾಣಪುರೀ.



ಶ್ರೀಃ॥ ಕೀರ್ತಿಶೇಷರಾದ ಶ್ರೀಕೆಕ್ಕಾರು ಶಿವಭಟ್ಟರಿಂದಲೂ, ಮತ್ತು ಗಣಪತಿ ಭಟ್ಟರಿಂದಲೂ ರಚಿತವಾದ ಆಸ್ತಿಕದಕ್ಷಿಣೋತ್ತರಾಯಣ, ಮತ್ತು 'ಅಯನನಿರ್ಣಯಸಂಗ್ರಹ'ವೆಂಬ ಎರಡು ಪತ್ರಿಕೆಗಳನ್ನೂ ನೋಡಿ ಅವರ

ನಿರ್ಣಯದ ರೀತಿಯನ್ನು ತಿಳಕೊಂಡೆವು. ಇದರಲ್ಲಿ ಪ್ರಾಚೀನ ಸಂಪ್ರದಾಯಗಳೂ, ಶಾಸ್ತ್ರವಚನಗಳೂ ಚನ್ನಾಗಿ ಸ್ವೀಕರಿಸಲ್ಪಟ್ಟಿವೆ. ಶ್ರೀಜಗದ್ಗುರು ಶ್ರೀ ಶೃಂಗೇರಿ ಶ್ರೀಗುರುವರ್ಯಾದಿ ಮಠಾಧಿಪತಿಗಳಿಂದಲೂ, ಸದಾಚಾರಪ್ರೋಷಕರಿಂದಲೂ ಇದೇ ರೀತಿಯೇ ಅನುಗ್ರಹಿಸಲ್ಪಟ್ಟಿದೆ. ಶಾಪಗ್ರಸ್ತ ಕಲಿಮಹಿಮೆಯಿಂದ ದುರಾಚಾರ ಧುರೀಣರಾದ ಜನರು ಸಾಯನಾಯನಗಳನ್ನು ಕರ್ಮಾನುಷ್ಠಾನಗಳಲ್ಲಿ ಸ್ವೀಕರಿಸಬೇಕೆಂದು ವಾದಿಸುವುದು ನಿರಾಧಾರವಾದದ್ದು; ಪರಗತಿಯನ್ನು ನಾಶಮಾಡುವಂಥಾದ್ದು; ಪಾಮರ ಜನರ ವಿಶ್ವಾಸಕ್ಕೆ ಯೋಗ್ಯವಾದದ್ದು; ಪಂಡಿತಂಮನ್ಯರಿಗೆ ಆಶ್ಚರ್ಯವನ್ನುಂಟುಮಾಡುವಂಥಾದ್ದು; ಎಂದು ಸದಾಚಾರನಿರತರಾದವರು ಚನ್ನಾಗಿ ತಿಳಕೊಂಡಿರಬೇಕು. ಇದಕ್ಕೂ ಹೆಚ್ಚಿಗೆ ಹೇಳತಕ್ಕದ್ದೇನಿದೆ ? ಧರ್ಮಾಚರಣೆಯು ಹೆಚ್ಚಲೆಂದು ಆಶೀರ್ವದಿಸುವೆವು.

**ಮಹಾಮಹೋಪಾಧ್ಯಾಯ ಶ್ರೀ ಸಿದ್ಧಾಂತಿ ಶಿವಶಂಕರ ಶಾಸ್ತ್ರೀ.**

ಶ್ರೀ ಶೃಂಗೇರಿ ಜಗದ್ಗುರು ಮಹಾಸಂಸ್ಥಾನಾಸ್ಥಾನಜ್ಯೌತಿಷಿಕಃ ಮಹಾವಿದ್ವಾನ್ ಜ್ಯೋತಿಷರತ್ನಾಕರಃ ಶ್ರೀಶಿವಸುಬ್ರಹ್ಮಣ್ಯ ರಾಜಯೋಗೀ.



ಶ್ರೀಃ॥ ಮಹಾಶಯರಿಗೆ ನಾವು ತಿಳಿಸುವುದೇನಂದರೆ:— ವೇದವ್ಯಾಸಾದಿ ಮಹರ್ಷಿಗಳ ಹೃದಯವನ್ನು ತಿಳಿದಿರುವ, ಗರ್ಗ, ವರಾಹಮಿಹಿರಾದಿ ದೈವಜ್ಞರಿಂದಲೂ ಹೊಗಳಲ್ಪಡತಕ್ಕ ಮಹಿಮಾವಿಶೇಷವುಳ್ಳ ಕೈ. ವಾ. ಕೆಕ್ಕಾರು ಶಿವಭಟ್ಟರಿಂದ ರಚಿತವಾದ 'ಆಸ್ತಿಕವಕ್ಷಿಣೋತ್ತರಾಯಣ'ವೆಂಬ ಪತ್ರಿಕೆಯನ್ನು ನಾವು ನೋಡಿದೆವು. ಇದರಲ್ಲಿ ವಿವರಿಸಿರುವ ವಿಷಯಗಳು ಶ್ರುತಿ, ಯುಕ್ತಿ, ಅನುಭವಗಳ ಸರಣಿಯನ್ನು ಅನುಸರಿಸಿರುತ್ತವೆ; ಎಂಬ ವಿಷಯದಲ್ಲಿ ಏನೂ ಸಂಶಯವಿಲ್ಲವು.

ಇತಿ ಶ್ರೀ ರಾಮೇಶ್ವರಕ್ಷೇತ್ರನಿವಾಸಿನೋ ಮಹಾಜನಾಃ॥

**ಮಹಾವಿದ್ವಾನ್ ವೆಂಕಟಾಚಲ ದೀಕ್ಷಿತಃ ರಾಮೇಶ್ವರಂ.**
**ಶ್ರೀ॥ ಶ್ರೀನಿವಾಸ ಶಾಸ್ತ್ರೀ (ಜ್ಯೋತಿರ್ಗಣಿತವಿದ್ವಾನ್)**
**ಶ್ರೀ॥ ಸುಬ್ರಹ್ಮಣ್ಯ ಶಾಸ್ತ್ರಿಣಃ (ಪಾಠಶಾಲಾಧ್ಯಾಪಕಾಃ)**
**ವಿದ್ವಾನ್ ಶ್ರೀ ರಾಮಸ್ವಾಮಿ ಶಾಸ್ತ್ರೀ.**
**ಕೇ. ಕೃಷ್ಣಘನಪಾಠೀ.**
**ಕಿ. ರಂಗನಾಥಾಚಾರ್ಯಃ.**
**ನ. ರಂಗರಾಮಾನುಜಾಚಾರ್ಯಃ ವಿದ್ವಾನ್, ಶಿರೋಮಣಿ (ಮದ್ರಾಸ್)**

---

"ಶಾಸ್ತ್ರವಿಹಿತಪಂಚಾಂಗನಿರ್ಣಯ"ವೆಂಬ ಗ್ರಂಥವನ್ನು ನೋಡಿ ಆನಂದವಾಯಿತು. ಬಾಣವೃದ್ಧಿ, ರಸಕ್ಷಯಲಕ್ಷಣದ ತಿಥಿಯೇ ಶ್ರೌತ-ಸ್ಮಾರ್ತ ಕರ್ಮಗಳಲ್ಲಿ ಗ್ರಾಹ್ಯವೆಂದೂ, ಅಷ್ಟವೃದ್ಧಿ, ದಶಕ್ಷಯಲಕ್ಷಣದ ತಿಥಿಯು ಕೇವಲ ಗ್ರಹಣಸ್ಪರ್ಶಕಾಲಾದಿಗಳನ್ನು ನೋಡಲಿಕ್ಕೆ ಉಪಯುಕ್ತವೇ ಹೊರತು

ಇತರ ಧಾರ್ಮಿಕಕಾರ್ಯಗಳಲ್ಲಿಂದೂ ಸ್ವೀಕರಿಸಲಿಕ್ಕೆ ಯೋಗ್ಯವಾದ್ದಲ್ಲವೆಂದೂ ನಮ್ಮ ಅಭಿಪ್ರಾಯವು. ಇದನ್ನು ಧರ್ಮತತ್ವನಿರ್ಣಯವೆಂಬ ಗ್ರಂಥದಲ್ಲಿ ನಾವು ಚನ್ನಾಗಿ ವಿವರಿಸಿರುವೆವು. ಇತಿ.

**ಶ್ರೀಮನ್‌ಮಹಾಮಹೋಪಾಧ್ಯಾಯ ವಾಸುದೇವ ಅಭ್ಯಂಕರ ಶಾಸ್ತ್ರೀ.**

ಬಡೋದಾಮಹಾರಾಜ ಆಸ್ಥಾನವಿದ್ವಾನ್.

**ಶ್ರೀಪೂನಾಪರಶುರಾಮಕಾಲೇಜ ಸಂಸ್ಕೃತಾಧ್ಯಾಪಕ ಕಿಂಜವಡೇಕರ ವಾಮನ ಶಾಸ್ತ್ರೀ ಸರಸ್ವತೀಭೂಷಣ. ಸಂಸ್ಕಾರಮೀಮಾಂಸಾದ್ಯನೇಕಗ್ರಂಥಕರ್ತಾ.**

---

ಶ್ರೀಗಣೇಶೋ ವಿಜಯತೇ ॥ ಶ್ರೀಶಂಕರಾನಂದ ಯತಿಶ್ರೇಷ್ಠರಿಂದ ಅನುಗೃಹೀತವಾದ 'ಶಾಸ್ತ್ರವಿಹಿತಪಂಚಾಂಗನಿರ್ಣಯ'ವೆಂಬ ಗ್ರಂಥವನ್ನು ಆಮೂಲಾಗ್ರವಾಗಿ ನೋಡಿ ಬಹಳ ಆನಂದಪಟ್ಟೆವು. ಈ ಗ್ರಂಥವು ಕರ್ಮಾನುಷ್ಠಾನಕ್ಕೆ ಸಾಧಕವಾದ ಕಾಲನಿರ್ಣಯವನ್ನು ಹೇಳುವಾಗ ಅಯನದ್ವಯವನ್ನೂ, ತಿಥಿಯನ್ನೂ ವಿಶೇಷವಾಗಿ ಲಕ್ಷಿಸಿರುತ್ತದೆ. ಯತಿಶ್ರೇಷ್ಠರ ವಿಮರ್ಶನರೀತಿಯು ಶ್ರುತಿ, ಸ್ಮೃತಿ, ಪುರಾಣಾದಿಗಳನ್ನೂ, ಶಿಷ್ಟಾಚಾರವನ್ನೂ ಅನುಸರಿಸಿದ್ದು ವಿವಾದಾಸ್ಪದವಾದ ಅಯನವಿಷಯಗಳಲ್ಲೂ, ತಿಥಿವಿಷಯದಲ್ಲೂ ಉಂಟಾಗತಕ್ಕ ಸಕಲ ಸಂಶಯಗಳನ್ನೂ ದೂರಮಾಡುವ ಈ ಗ್ರಂಥವೂ, ಮತ್ತು ಈ ಮೊದಲೇ ಪ್ರಕಟವಾದ 'ಆಸ್ತಿಕದಕ್ಷಿಣೋತ್ತರಾಯಣ' ಮತ್ತು 'ಅಯನನಿರ್ಣಯಸಂಗ್ರಹ' ಎಂಬ ಗ್ರಂಥಗಳೂ ಆಚಂದ್ರಾರ್ಕವಾಗಿ ಸರ್ವೋತ್ಕೃಷ್ಟತೆಯಿಂದ ಬೆಳಗಲೆಂದು ಹಾರೈಸುತ್ತೇವೆ. ಇತಿ.

**ನಿಗಮಾಗಮಪಾರಾವಾರಪಾರೀಣ ದೀಕ್ಷಿತವೆಂಕಟಕೃಷ್ಣ ಸೋಮಯಾಜೀ.**

---

"ಶ್ರೌತಸ್ಮಾರ್ತಕರ್ಮಾನುಷ್ಠಾನಗಳಲ್ಲಿ ಕಾಲನಿರ್ಣಯದ ಬಗ್ಗಾಗಿ ಸೂರ್ಯಸಿದ್ಧಾಂತ, ಆರ್ಯಭಟೀಯಾದಿ ಸಿದ್ಧಾಂತಗಳಲ್ಲಿ ಹೇಳಲ್ಪಟ್ಟ ಪ್ರಕ್ರಿಯೆಗಳನ್ನೇ ಸ್ವೀಕರಿಸಬೇಕೇ ಹೊರತು ದೃಗ್ಗಣಿತಪ್ರಕ್ರಿಯೆಗಳಿಂದೂ ಯೋಗ್ಯವಲ್ಲ" ಎಂದು ನಮ್ಮಲ್ಲಿಯ ವಿದ್ವಾಂಸರೆಲ್ಲರೂ ಕೂಡಿ ನಿರ್ಣಯಿಸಿ ಅದರಂತೆ ಆಚರಿಸುತ್ತಿರುವರು. ಆದ್ದರಿಂದ ಅದೃಷ್ಟಫಲಕಕರ್ಮಾನುಷ್ಠಾನಗಳಲ್ಲಿ ಸೂರ್ಯಸಿದ್ಧಾಂತೋಕ್ತರೀತಿಯಿಂದ ತಂದ ತಿಥ್ಯಾದಿಗಳೇ ಗ್ರಾಹ್ಯವಾಗುವವು.

**ಜ್ಯೋತಿಷಮಹೋಪಾಧ್ಯಾಯ ಕೇ. ರಾಮಕೃಷ್ಣ ಶಾಸ್ತ್ರೀ ಅನಂತಶಯನಂ**

---

ಶ್ರೀಮದ್ವೃಕ್ಷನಾರಾಯಣಃ ಪ್ರಸನ್ನಃ ॥ ನಾವು ಈ ಪಂಚಾಂಗವಾದದ ವಿಷಯದಲ್ಲಿ ಧರ್ಮಶಾಸ್ತ್ರಗಳನ್ನು ವಿಚಾರಿಸಿದೆವು. ಆಧುನಿಕ ದೃಕ್ಪಂಚಾಂಗವು ಧರ್ಮಶಾಸ್ತ್ರಗಳಿಗೆ ಹೊಂದಿಕೆಬೀಳುವುದಿಲ್ಲವಾದ್ದರಿಂದ ಶ್ರೌತ, ಸ್ಮಾರ್ತಕರ್ಮಗಳಿಗೆ ಸೂರ್ಯಸಿದ್ಧಾಂತಾನುಸಾರಿಯಾದ ಪಂಚಾಂಗವನ್ನೂ, ದೃಷ್ಟಕರ್ಮಗಳಿಗೆ(ಗ್ರಹಣಾದಿಗಳಿಗೆ) ದೃಕ್ಪಂಚಾಂಗವನ್ನೂ ಸ್ವೀಕರಿಸಿದಲ್ಲಿ ಧರ್ಮವ್ಯವಹಾರಗಳು ಬಹುಸಮಂಜಸವಾಗಿ ನಡೆಯುವವು; ಎಂದು ನಮ್ಮ ಅಭಿ

ಪ್ರಾಯವು. ಸಕಲರಿಗೂ ಇಂಥ ಸದ್ಬುದ್ಧಿಯನ್ನು ಶ್ರೀಯಜ್ಞನಾರಾಯಣನು ದಯಪಾಲಿಸಲೆಂದು ಆತನಲ್ಲಿ ಪ್ರಾರ್ಥಿಸುತ್ತೇನೆ. ಇತಿ.

ಓಣಿಕೈ ನರಸಿಂಹೋಪಾಧ್ಯಾಯಾತ್ಮಜ ತಿಮ್ಮಣ್ಣ ದೀಕ್ಷಿತಃ.

---

“ಶಾಸ್ತ್ರವಿಹಿತಪಂಚಾಂಗನಿರ್ಣಯ’’ವೆಂಬ ಗ್ರಂಥವನ್ನು ನಾವು ನೋಡಿದೆವು. ಇದರಲ್ಲಿ ಶಾಸ್ತ್ರ, ಮತ್ತು ವಿವೇಕಕ್ಕೆ ವಿರುದ್ಧವಾಗಿ ಏನೊಂದನ್ನೂ ಪ್ರತಿಪಾದಿಸಲಿಲ್ಲವೆಂದು ದೃಢವಾಗಿ ಹೇಳುವೆವು. ಇದರಲ್ಲಿ ಪ್ರತಿಪಾದಿಸಿದಂತೆ ಬಾಣವೃದ್ಧಿ, ರಸಕ್ಷಯಲಕ್ಷಣದ ತಿಥ್ಯಾದಿಗಳಿಂದಲೂ, ಕರ್ಕ, ಮಕರ ಸಂಕ್ರಾಂತಿಗಳಿಂದ ಆರಂಭಿಸತಕ್ಕ ದಕ್ಷಿಣೋತ್ತರಾಯಣಗಳಿಂದಲೂ ಕೂಡಿದ ಪಂಚಾಂಗದಂತೆಯೇ ನಾವು ಯಾವಾಗಲೂ ಧರ್ಮಕರ್ಮಗಳನ್ನಾಚರಿಸುವೆವು. ಧರ್ಮಕ್ಕೆ ಬಾಧೆಯನ್ನುಂಟುಮಾಡುವ ಈ ಕಲಿಕಾಲದಲ್ಲಿ ಇಂಥ ಗ್ರಂಥಗಳನ್ನು ನೋಡಿ ಜನರು ಸದ್ಧರ್ಮದಲ್ಲಿ ನಿರತರಾಗಲೆಂದು ಇಚ್ಛಿಸುವೆವು.

ಶ್ರೀ. ರಾಮನಾಥ ದೀಕ್ಷಿತ ಬನವಾಸಿ.

---

ಶಾಸ್ತ್ರವಿಹಿತಪಂಚಾಂಗನಿರ್ಣಯವೆಂಬ ಗ್ರಂಥವನ್ನು ನೋಡಿದೆವು. ಇದರಲ್ಲಿ ಪ್ರತಿಪಾದಿಸಿದ ವಿಷಯಗಳು ಶಾಸ್ತ್ರಯುಕ್ತಿಗಳಿಗೆ ಸಮ್ಮತವಾದದ್ದಾಗಿವೆ. ಈಗಿನ ನವೀನದೃಕ್ಪಂಚಾಂಗದಂತೆ ಸಾಂವತ್ಸರಿಕಶ್ರಾದ್ಧ, ದರ್ಶಶ್ರಾದ್ಧ, ನಕ್ತವ್ರತ; ನರಕಚತುರ್ದಶೀವ್ರತ ಮೊದಲಾದವುಗಳ ಕಾಲನಿರ್ಣಯವನ್ನು ಮಾಡುವದು ಹೇಗೂ ಶಕ್ಯವಿಲ್ಲದೆ ಅದರಿಂದ ಕಾಲಮಾಧವ, ನಿರ್ಣಯಸಿಂಧು ಪುರುಷಾರ್ಥಚಿಂತಾಮಣಿ ಮೊದಲಾದ ಅನೇಕ ಧರ್ಮನಿಬಂಧಗಳಿಗೆ ವಿರೋಧವುಂಟಾಗುವುದಾದ್ದರಿಂದ ಧರ್ಮಾಭಿಮಾನಿಗಳು ದೃಕ್ಪಂಚಾಂಗದಂತೆ ಧರ್ಮಕರ್ಮಗಳನ್ನಾಚರಿಸದೆ ಸೂರ್ಯಸಿದ್ಧಾಂತಾನುಸಾರಿ ಪಂಚಾಂಗದಂತೆಯೇ ಧರ್ಮಕರ್ಮಗಳನ್ನಾಚರಿಸತಕ್ಕದ್ದು.

ಕೇ. ವಿಶ್ವೇಶ್ವರ ಶರ್ಮಾ ಮತ್ತಿಗಾರ. ಮೀಮಾಂಸಾಶಿರೋಮಣಿ.

---

ನಾವು ಶಾಸ್ತ್ರವಿಹಿತಪಂಚಾಂಗನಿರ್ಣಯವೆಂಬ ಪುಸ್ತಕವನ್ನೂ, ಶಾಸ್ತ್ರಸಿದ್ಧದೃಕ್ಪಂಚಾಂಗಸಮರ್ಥನೆ ಎಂಬ ಪುಸ್ತಕವನ್ನೂ ಕೂಲಂಕಷವಾಗಿ ವಿಮರ್ಶಿಸಿದೆವು. ದೃಕ್ಪಂಚಾಂಗವನ್ನನುಸರಿಸಿ ಶ್ರಾದ್ಧಾದಿಗಳನ್ನಾಚರಿಸಿದರೆ ಮಹಾದೋಷಗಳುಂಟಾಗುವವೆಂಬ ಶಾಸ್ತ್ರಾಭಿಪ್ರಾಯವಿರುವುದರಿಂದ ಇವೆರಡರಲ್ಲಿ ಧರ್ಮೈಕಶರಣರಾದವರು ಶಾಸ್ತ್ರವಿಹಿತಪಂಚಾಂಗನಿರ್ಣಯವೆಂಬ ಗ್ರಂಥವನ್ನೇ ಆಧರಿಸಿ ಶ್ರೌತಸ್ಮಾರ್ತಾದ್ಯದೃಷ್ಟಫಲಕ ಕರ್ಮಾನುಷ್ಠಾನಗಳಲ್ಲಿ ಸೂರ್ಯಸಿದ್ಧಾಂತಪಂಚಾಂಗವನ್ನೇ ಸ್ವೀಕರಿಸತಕ್ಕದ್ದು ಎಂದು ನಮ್ಮ ಅಭಿಪ್ರಾಯವು.

ಶ್ರೀಕೇಶವಾನಂದಗುರುತೀರ್ಥಚರಣಕಮಲಚಂಚರೀಕ ವಿದ್ವದ್ವಿಧೇಯ

ಶ್ರೀಗಣಪತಿಭಟ್ಟಪುತ್ರ ಸುಬ್ರಾಯಶಾಸ್ತ್ರೀ ಯಲೂಗಾರ್

ಸಕಲಧರ್ಮಕರ್ಮಗಳಲ್ಲಿ ಸೂರ್ಯಸಿದ್ಧಾಂತಾನುಸಾರಿಯಾದ ಪಂಚಾಂಗವನ್ನೇ ಸ್ವೀಕರಿಸುವುದು ಯುಕ್ತವೆಂದು ನಮ್ಮ ದೃಢವಾದ ಅಭಿಪ್ರಾಯವು.

**ನರಸಿಂಹ ಮಂಜ ಭಟ್ಟ ತದ್ದಲಸೆ.**

**ದೇವಭಟ್ಟಾತ್ಮಜ ಶಂಕರ ಭಟ್ಟ ಕರಸುಳ್ಳಿ.**

ಶಾಸ್ತ್ರವಿಹಿತಪಂಚಾಂಗನಿರ್ಣಯವೆಂಬ ಗ್ರಂಥವನ್ನು ನಾವು ಆಮೂಲಾಗ್ರವಾಗಿ ನೋಡಿದೆವು. ಇದರಲ್ಲಿರುವ ಕಾಲ, ಋತು, ಅಯನ, ಸಂವತ್ಸರ ತಿಥಿ ಇವುಗಳ ನಿರ್ಣಯವೆಂಬ ೫ ಭಾಗಗಳು ೫ ರತ್ನಗಳಂತಿರುವವು. "ಮೂರ್ತಿಸಣ್ಣದಾದರೂ ಕೀರ್ತಿದೊಡ್ಡದು" ಎಂಬ ಗಾದೆಯಂತೆ ಈ ಪುಸ್ತಕವು ಸಣ್ಣದಾಗಿದ್ದರೂ ಇದರ ಮಹತ್ವವು ಹೆಚ್ಚಿನದಾಗಿದೆ. ಎಲ್ಲ ವಿಷಯಗಳಲ್ಲಿಯೂ ದೃಗ್ಗಣಿತವನ್ನೇ ಉಪಯೋಗಿಸಬೇಕೆಂದು ಮನಬಂದಂತೆ ಹೇಳುವ ದೃಗ್ವಾದಿಗಳ ಮತವನ್ನು ಖಂಡಿಸುವ ಈ ಗ್ರಂಥವು ದೃಷ್ಟಾದೃಷ್ಟಭೇದದಿಂದ ಗಣಿತಕ್ರಮಗಳನ್ನು ವಿಭಾಗಿಸಿ ನಿಜವಾದ ಅರ್ಥವನ್ನು ಸ್ಪಷ್ಟಗೊಳಿಸುವುದು. ಆದುದರಿಂದ ಗಣಕರು, ಜೋಯಿಸರು, ಧರ್ಮಶಾಸ್ತ್ರಜ್ಞರು ಈ ಗ್ರಂಥವನ್ನು ಪುನಃಪುನಃ ನೋಡಿದಲ್ಲಿ ಶ್ರೌತಸ್ಮಾರ್ತಕರ್ಮಗಳ ಮೇರೆಯನ್ನು ಎಳ್ಳಷ್ಟೂ ಮೀರಿ ಹೋಗಲಾರರೆಂದು ನಿಶ್ಚಯವಾಗುವುದು. ಕರ್ಮಸಾಕ್ಷಿಯಾದ ಸೂರ್ಯನು ಎಲ್ಲರಿಗೂ ಇಂಥ ಸದ್ಬುದ್ಧಿಯನ್ನು ದಯಪಾಲಿಸಲೆಂದು ಇಚ್ಛಿಸುವೆವು.

**ಇತಿ ಲಿಂಗದೈವಜ್ಞಃ (ಸಿ.ಲಿಂಗಾಜೋಯ್ಸ) ಜ್ಯೋತಿಃಶಾಸ್ತ್ರವಿಶಾರದ.**

**ಕಾರ್ಯದರ್ಶೀ ಅಖಿಲಕರ್ನಾಟಕಜ್ಯೌತಿಷಿಕ ಸಂಘ ಬಿಕ್ಕೇರೂರ.**

ನಾವು ಆಸ್ತಿಕಪಂಚಾಂಗನಿರೂಪಣಪೂರ್ವಕದೃಕ್ಪಂಚಾಂಗಖಂಡನವೆಂಬ ಗ್ರಂಥವನ್ನು ಪೂರ್ಣವಾಗಿ ನೋಡಿದೆವು. ಇದರಲ್ಲಿ ಪ್ರತಿಪಾದಿಸಿರುವಂತೆ ಬಾಣವೃದ್ಧಿ,ರಸಕ್ಷಯಲಕ್ಷಣದ ತಿಥ್ಯಾದಿಗಳಿಂದಲೂ, ನಿರಯನಕರ್ಕ, ಮಕರ ಸಂಕ್ರಾಂತಿಗಳಿಂದಾರಂಭಿಸತಕ್ಕ ದಕ್ಷಿಣೋತ್ತರಾಯಣಗಳಿಂದಲೂ ಕೂಡಿರುವ ಸಿದ್ಧಾಂತಾನುಸಾರಿ ಪಂಚಾಂಗವೇ ಧರ್ಮಕರ್ಮಗಳಲ್ಲಿ ಗ್ರಾಹ್ಯವು ಎಂದು ನಮ್ಮ ಸ್ಪಷ್ಟವಾದ ಅಭಿಪ್ರಾಯವಿರುವದು.

**ಶ್ರೀ ಪಾಂಡುರಂಗ ಗಣೇಶ ಉಪಾಧ್ಯಾಯ ಅಗೇರ ಪಂಚಾಂಗಕರ್ತಾ.**

ನಾವು ಆಸ್ತಿಕಪಂಚಾಂಗನಿರೂಪಣಪೂರ್ವಕದೃಕ್ಪಂಚಾಂಗಖಂಡನವೆಂಬ ಗ್ರಂಥವನ್ನು ನೋಡಿದೆವು. ಇದರಲ್ಲಿ ಪ್ರತಿಪಾದಿಸಿರುವಂತೆ ಬಾಣವೃದ್ಧಿ, ರಸಕ್ಷಯಲಕ್ಷಣದ ತಿಥ್ಯಾದಿಗಳಿಂದಲೂ, ನಿರಯನ ಕರ್ಕ,ಮಕರಸಂಕ್ರಾಂತಿಗಳಿಂದ ಆರಂಭಿಸತಕ್ಕ ದಕ್ಷಿಣೋತ್ತರಾಯಣಗಳಿಂದಲೂ ಕೂಡಿರುವ ಸಿದ್ಧಾಂತಪಂಚಾಂಗದಂತೆಯೇ ಧರ್ಮಕರ್ಮಗಳನ್ನಾಚರಿಸಬೇಕೆಂಬುದು ಶಾಸ್ತ್ರದ ನಿಜವಾದ ತಾತ್ಪರ್ಯವಾಗಿರುತ್ತದೆ.

**ಶ್ರೀ॥ ನಾರಾಯಣ ಪರಂ ಭಟ್ಟ ಮೂರೂರು ಜ್ಯೋತಿಃಶಾಸ್ತ್ರವಿಶಾರದ.**

ಇನ್ನೂ ಅನೇಕಮಹನೀಯರು ಇದರಂತೆಯೇ ತಮ್ಮ ಅಮೋಘವಾದ ಅಭಿಪ್ರಾಯಗಳನ್ನು ಕೊಟ್ಟಿರುತ್ತಾರೆ. ಪುಸ್ತಕ ಬೆಳೆಯುವದರಿಂದ ಅವುಗಳನ್ನೆಲ್ಲ ಪ್ರತ್ಯೇಕವಾಗಿ ಇಲ್ಲಿ ಕಾಣಿಸಲಿಲ್ಲ.

“ಅಥ ತಿಥಿನಕ್ಷತ್ರಯೋರ್ಗಣನಸಂಪ್ರದಾಯಃ ಶುದ್ಧಿಮರ್ಹತಿ ವಾ ನವೇತಿ ವಿಚಾರಣೀಯಮಸ್ತಿ। ತಿಥಿನಕ್ಷತ್ರಾಭ್ಯಾಂ ತಾವತ್ ಲೌಕಿಕವ್ಯವಹಾರೇಷು ನ ಕೋಽಪ್ಯುಪಯೋಗಃ। ಶ್ರೌತಸ್ಮಾರ್ತಕರ್ಮಾನುಷ್ಠಾನಕಾಲನಿರ್ಣಯಾಯೈವ ತೇ ಗಣ್ಯೇತೇ। ಅತಸ್ತಯೋಃ ಶೋಧನವಿಷಯೇಽಸ್ಮಾಕಮಧಿಕಾರ ಏವ ಸಂದಿಗ್ಧಃ। ತಿಥಿನಕ್ಷತ್ರಯೋರ್ನಿರ್ಣಯೇ ಜ್ಯೌತಿಷಿಕಪ್ರಕ್ರಿಯಾತಃ ಪೃಥಕ್ ಸ್ಮಾರ್ತಪ್ರಕ್ರಿಯಾ ಅಪಿ ಕಾಂಚಿದಸ್ತೀತ್ಯಾಹ ವೈದ್ಯನಾಥದೀಕ್ಷಿತಃ ಸ್ಮೃತಿಮುಕ್ತಾಫಲೇ। ಅತಃ ಸ್ಮಾರ್ತಸಂಕೇತಾನ್ ಸರ್ವಾನ್ ವಿಚಿಂತ್ಯ ತದವಿರೋಧೇನೈವಾತ್ರ ಪ್ರವರ್ತಿತವ್ಯಂ। ಅಪರಾಹ್ಣವೇಧಃ, ಸಾಯಾಹ್ನಪೂರ್ಣವ್ಯಾಪ್ತಿಃ, ಕುತಪಕಾಲಯೋಗ ಇತಿ ತ್ರಯ ಉಪಾಧಯಸ್ತಿಥಿನಿರ್ಣಯೇ ಸ್ಮೃತಿಭಿರ್ವಿಚಾರಣೀಯತಯಾ ಪ್ರೋಕ್ತಾಃ। ದೃಗ್ಗಣಿತರೀತ್ಯಾ ತಿಥೇಃ ಕಿಂಚಿದೂನದ್ವಾದಶಘಟೀಮಿತಸ್ಯ ಕ್ಷಯಸ್ಯ ಸಂಭವಾದುಕ್ತೋಪಾಧಿತ್ರಯಾತಿರಿಕ್ತಶ್ಚತುರ್ಥಃ ಕೋಽಪ್ಯುಪಾಧಿಸ್ತಿಥಿನಿರ್ಣಯೇ ಕಲ್ಪನೀಯ ಆಪತತಿ। ಅತೋ ದೃಕ್ಸಿದ್ಧಾಭ್ಯಾಂ ರವೀಂದುಭ್ಯಾಂ ತಿಥ್ಯಾನಯನಂ ಸ್ಮೃತಿವಿರುದ್ಧತ್ವಾದುಪೇಕ್ಷ್ಯಂ। ಅತಸ್ತಿಥಿನಕ್ಷತ್ರಾನಯನಾತ್ಮಕೇ ಸೂರ್ಯೇಂದುಗಣನೇ ಮಂದಫಲಸಂಸ್ಕಾರ ಏವ ಪರ್ಯಾಪ್ತಃ। ಮಂದಫಲಮಾತ್ರಸಂಸ್ಕೃತಾಭ್ಯಾಂ ರವೀಂದುಭ್ಯಾಮೇವ ಪಂಚಾಂಗಂ ಕಾರ್ಯಂ॥ ಏವಂ ಸಪ್ರಶ್ರಯಂ ಸ್ವಾಶಯಮಾವಿಷ್ಕರೋತಿ” ಎ.ಆರ್.ರಾಜರಾಜವರ್ಮಾ ಎಂ.ಎ.

ತಾತ್ಪರ್ಯ:— ತಿಥಿ, ನಕ್ಷತ್ರಗಳ ಗಣಿತಪದ್ಧತಿಯನ್ನು ಬದಲಾಯಿಸಬೇಕೋ ಬೇಡವೋ ಎಂಬುದನ್ನು ವಿಚಾರಿಸುವಲ್ಲಿ— ತಿಥಿನಕ್ಷತ್ರಗಳು ಶ್ರೌತ, ಸ್ಮಾರ್ತಕರ್ಮಾಚರಣೆಗಳಿಗೆ ಯೋಗ್ಯವಾದ ಕಾಲನಿರ್ಣಯಕ್ಕೋಸ್ಕರವೇ ಗಣಿಸಲ್ಪಡುತ್ತಿದ್ದು ಇತರ ಲೌಕಿಕವ್ಯವಹಾರಗಳಲ್ಲಿ ಅವುಗಳ ಉಪಯೋಗವು ಏನೂ ಇಲ್ಲವಾದುದರಿಂದ ಅವುಗಳನ್ನು ತಿದ್ದುವುದಕ್ಕೆ(ಅಂದರೆ ಬದಲಾಯಿಸುವುದಕ್ಕೆ) ನಮಗೆ ಅಧಿಕಾರವಿರಬಹುದೆಂಬುದೇ ನಿಶ್ಚಯವಾದ ಮಾತಲ್ಲ. ತಿಥಿ,ನಕ್ಷತ್ರಗಳ (ಘಟಿಕಾದಿಗಳ) ನ್ನು ನಿರ್ಣಯಿಸುವುದರಲ್ಲಿ ಜ್ಯೋತಿಷಿಗಳ ಪ್ರಕ್ರಿಯೆಗಿಂತ ಬೇರೆಯಾಗಿ ಕೆಲವು ಧರ್ಮಶಾಸ್ತ್ರೋಕ್ತಪ್ರಕ್ರಿಯೆಗಳು ಸಹ ಇರುತ್ತವೆಂದು ವೈದ್ಯನಾಥದೀಕ್ಷಿತರು ತಮ್ಮ ಸ್ಮೃತಿಮುಕ್ತಾಫಲವೆಂಬ (ವೈದ್ಯನಾಥೀಯವೆಂದು ಪ್ರಸಿದ್ಧವಿರುವ) ಗ್ರಂಥದಲ್ಲಿ ಹೇಳಿರುತ್ತಾರೆ. ( ಕಾಲಮಾಧವಾದಿಗಳಲ್ಲಿಯೂ ಈ ವಿಷಯವನ್ನು ಹೇಳಿದ್ದಾರೆ. ) ಆದುದರಿಂದ ಧರ್ಮಶಾಸ್ತ್ರಗಳಲ್ಲಿ (ತಿಥ್ಯಾದಿಗಳ ವ್ಯಾಪ್ತಿನಿರ್ಣಯದ ಬಗ್ಗೆ) ಹೇಳಿರುವ ಸಕಲ ವಿಷಯಗಳನ್ನೂ ಸರಿಯಾಗಿ ವಿಚಾರಿಸಿಕೊಂಡು ಅವುಗಳಿಗೆಲ್ಲ ವಿರೋಧವುಂಟಾಗದಂತೆಯೇ ತಿಥ್ಯಾದಿಗಳ ಗಣಿತಕ್ರಮದ ನಿರ್ಣಯಕ್ಕೆ ತೊಡಗಬೇಕಾಗಿದೆ. ಹಾಗೆ ವಿಚಾರಿಸುವಲ್ಲಿ ಅಪರಾಹ್ಣವೇಧ, ಸಾಯಾಹ್ನದಲ್ಲಿ ಪರಿಪೂರ್ಣವಾಗಿರುವ(ತ್ರಿಮುಹೂರ್ತ)ವ್ಯಾಪ್ತಿ, ಕುತಪಕಾಲಯೋಗ ಈ ಮೂರು ಮುಖ್ಯವಾದ ಉಪಾಧಿಗಳು ತಿಥಿನಿರ್ಣಯದ ವಿಷಯದಲ್ಲಿ ವಿಚಾರಿಸಲ್ಪಡತಕ್ಕವುಗಳಾಗಿರುತ್ತವೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿವೆ. ನವೀನದೃಗ್ಗಣಿತದ ಪ್ರಕಾರ ಸುಮಾರು ಹನ್ನೆರಡು ಘಟಿಗಳವರೆಗೆ ತಿಥಿಕ್ಷಯವು ಸಂಭವಿಸುವುದರಿಂದ ಮೇಲೆ ಕಾಣಿಸಿರುವಂತೆ ತಿಥಿನಿರ್ಣಯದ ವಿಷಯದಲ್ಲಿ ಸ್ಮೃತಿಗಳಲ್ಲಿ ಹೇಳಿರುವ ೩ ಉಪಾಧಿಗಳಿಗೂ ಹೊರತಾದ ಬೇರೊಂದು (ಹೊಸತರದ) ನಾಲ್ಕನೆಯ ಉಪಾಧಿಯನ್ನು ಕಲ್ಪಿಸಿಕೊಳ್ಳುವ ಪ್ರಸಂಗಬರುತ್ತದೆ.* ಆದುದರಿಂದ ನವೀನದೃಗ್ಗಣಿತದಂತೆ ಸಿದ್ಧ

* ಈ ವಿಷಯವನ್ನು ಹಿಂದೆ ಪುಟಗಳಲ್ಲಿ [illegible] ವಿವರಿಸಿರುತ್ತೇವೆ.

ವಾಗುವ ಸೂರ್ಯಚಂದ್ರರಿಂದ ತಿಥಿಯನ್ನು ಸಾಧಿಸುವುದು ಧರ್ಮಶಾಸ್ತ್ರಗಳಿಗೆಲ್ಲ ವಿರುದ್ಧವಾಗಿರುವ ಕಾರಣ ಉಪೇಕ್ಷಿಸತಕ್ಕದ್ದಾಗಿದೆ. ಈ ವಿಚಾರಗಳಿಂದೆಲ್ಲ ತಿಥಿ,ನಕ್ಷತ್ರಗಳ ಸಾಧನೆಗೆ ಉಪಯುಕ್ತವಾದ ಸೂರ್ಯಚಂದ್ರರ ಗಣಿತದಲ್ಲಿ ಮಂದಫಲಸಂಸ್ಕಾರವಷ್ಟೇ ಸಾಕಾದ್ದೆಂದು ತಿಳಿಯುವದು. ಅಂತಹ ಮಂದಫಲಮಾತ್ರ ಸಂಸ್ಕೃತರಾದ ಸೂರ್ಯಚಂದ್ರರಿಂದಲೇ (ಅಂದರೆ ಸಿದ್ಧಾಂತಗಣಿತಪದ್ಧತಿಯಂತೆಯೇ) ತಿಥ್ಯಾದಿಪಂಚಾಂಗವನ್ನು ಮಾಡಬೇಕೆಂದು ನಮ್ಮ ಅಭಿಮತವಿರುತ್ತದೆ. ವಿ. ಆರ್. ರಾಜರಾಜವರ್ಮಾ ಎಮ್.ಏ.

ಅನಂತಶಯನದಲ್ಲಿರುವ ಸರಕಾರಿ ಇಂಗ್ಲಿಷ್ ಕೋಲೇಜಿನ ಪ್ರೊಫೆಸರರು.

---

ಭಾರತೀಯಸಿದ್ಧಾಂತಶಾಸ್ತ್ರಗಳ ಮಹತ್ವವು ವೃದ್ಧಪಕ್ಷದ ಮುಖಂಡರಿಗಾದರೂ ತಿಳಿದಿದೆ ಎಂಬುದು ಅವರ ಹೇಳಿಕೆಯಿಂದಲೇ ಸ್ಪಷ್ಟವಾಗುತ್ತದೆ:—

೧. ರವಿಚಂದ್ರಯೋರ್ಮಂದಫಲಂ ಪೂರ್ಣಿಮಾಮಾವಾಸ್ಯಾಸಮಯೇಽರ್ವಾಚೀನಜ್ಯೋತಿರ್ವಿದುಪಜ್ಞಾತಫಲಪಂಚಕಸ್ಯ ಸಮಂ ಭವತೀತಿ ಪರಮಾಶ್ಚರ್ಯಕರಂ॥ ತಾ:— *ಪ್ರಾಚೀನಭಾರತೀಯ ಜ್ಯೋತಿಃಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವ ಸೂರ್ಯಚಂದ್ರರ ಮಂದಫಲಗಳು ಪೂರ್ಣಿಮೆ, ಅಮಾವಾಸ್ಯೆಗಳ ಸಮಯದಲ್ಲಿ ಆಧುನಿಕಪಾಶ್ಚಾತ್ಯ ಜ್ಯೋತಿಃಶಾಸ್ತ್ರಜ್ಞರು ನೂತನವಾಗಿ ಕಂಡುಹಿಡಿದಿರುವ ತಿಥಿ,ಚ್ಯುತ್ಯಾದಿ ೫ ನವೀನಸಂಸ್ಕಾರಗಳ ಮೊತ್ತಕ್ಕೆ ಸರಿಯೇ ಆಗುತ್ತವೆ ಎಂಬುದು ಪರಮಾಶ್ಚರ್ಯಕರವಾಗಿದೆ.

ಜ್ಯೋತಿರ್ಗಣಿತ ಶ್ರೀ ವೆಂಕಟೇಶ ಕೇತಕರರು (ಚೈತ್ರಪಕ್ಷೀಯರು)

---

೨. ಸೂರ್ಯಸಿದ್ಧಾಂತವನ್ನು ಈ ಹೊತ್ತಿನವರೆಗಾದರೂ ಪ್ರಮಾಣಗ್ರಂಥವೆಂದು ತಿಳಿಯುತ್ತಾರೆ. ಇದರಲ್ಲಿ ವರ್ಣಿಸಿದ ಪದ್ಧತಿಯಂತೆ ಗ್ರಹಗಳ ಗಣಿತವನ್ನು ಮಾಡಿದರೆ ಅದು ಸೂಕ್ಷ್ಮವಾದ ಈಗಿನ ವೇಧಗಳನ್ನು ಬಹುಮಟ್ಟಿಗೆ ಹೋಲುವುದೆಂಬುದು ನಮಗೆ ಅಭಿಮಾನದ ಸಂಗತಿಯಾಗಿರುವದು. ಸೂರ್ಯಸಿದ್ಧಾಂತವು ಅಪೌರುಷಗ್ರಂಥವೆಂದು ಭಾವನೆಯುಂಟು.

ಜ್ಯೋತಿಃಶಾಸ್ತ್ರ ನ. ವೆ. ಕೋಲ್ಹಟಕರರು. (ಚೈತ್ರಪಕ್ಷೀಯರು)

---

೩. ಅವಜಾನಂತಿ ಸಿದ್ಧಾಂತಾನ್ ಭಾರತೀಯಾನ್ ವಿದಂತು ತೇ। ತೇಷಾಂ ನಿರೀಕ್ಷಣಾದೇತತ್ಸೂಕ್ಷ್ಮಧ್ರುವಕಸಾಧನಂ ॥ ತಾ:— ಭಾರತೀಯ ಸಿದ್ಧಾಂತಶಾಸ್ತ್ರಗಳನ್ನು ಉಪೇಕ್ಷಿಸುವವರು ಯಾರಾದರೂ ಇದ್ದರೆ ಅಂಥವರು ಈ ಗ್ರಂಥದಲ್ಲಿ ನಾವು ಕೊಟ್ಟಿರುವ ಎಲ್ಲ ಗ್ರಹರ ಧ್ರುವಾಂಕಗಳನ್ನು ಅಂತಹ ಸಿದ್ಧಾಂತಗ್ರಂಥಗಳ ಮೂಲಕವೇ ಸೂಕ್ಷ್ಮವಾಗಿ ತಯಾರಿಸಲಿಕ್ಕೆ ನಮಗೆ ಸಾಧ್ಯವಾಯಿತೆಂಬುದನ್ನು ತಿಳಿದಿರಬೇಕು. ಕರಣಕಲ್ಪಲತಾ

ಕೇಶವ ಲಕ್ಷ್ಮಣ ದಫ್ತರಿ ಬಿ.ಏ,ಎಲ್.ಎಲ್.ಬಿ.(ರೈವತಪಕ್ಷೀಯರು)

---

* ಸೂರ್ಯಚಂದ್ರರ ಮಂದಫಲವು ಗ್ರಹಲಾಘವಾದಿ ಪ್ರಾಚೀನಗಣಿತಗ್ರಂಥಗಳಲ್ಲೆಲ್ಲ ಸಮಾನವಾಗಿರುವುದರಿಂದ ಈ ಹೇಳಿಕೆಯು ಭಾರತೀಯ ಸಿದ್ಧಾಂತಶಾಸ್ತ್ರಗಳಿಗೆಲ್ಲ ಅನ್ವಯಿಸುತ್ತದೆ

ಅಂಗಿರಾಃ:—

ಪ್ರಮಾಣಾನಿ ಪ್ರಮಾಣಜ್ಞೈಃ ಪರಿಪಾಲ್ಯಾನಿ ಯತ್ನತಃ ।
ಸೀದಂತಿ ಹಿ ಪ್ರಮಾಣಾನಿ ಪ್ರಮಾಣೈರವ್ಯವಸ್ಥಿತೈಃ ॥

ಪಾರಿಜಾತೇ:—

ತಾನ್ಯೇತಾನಿ ಪ್ರವೀಣೈಸ್ತು ನ ಹಂತವ್ಯಾನಿ ಹೇತುಭಿಃ ।
ಯಸ್ತಾನಿ ಹೇತುಭಿರ್ಹನ್ಯಾತ್ಸೋಽಂಧೇ ತಮಸಿ ಮಜ್ಜತಿ ॥

ಹಾರೀತಃ:—

ನ ಯಸ್ಯ ವೇದಾ ನ ಚ ಧರ್ಮಶಾಸ್ತ್ರಂ
ನ ವೃದ್ಧವಾಕ್ಯಂ ಚ ಭವೇತ್ಪ್ರಮಾಣಂ ।
ಸೋಽಧರ್ಮಕೃದ್ದಿಷ್ಟಹತೋ ದುರಾತ್ಮಾ
ನಾಽತ್ಮಾಽಪಿ ತಸ್ಯೇಹ ಭವೇತ್ಪ್ರಮಾಣಂ ॥

ಪದ್ಮಪುರಾಣೇ:—

ಶ್ರುತಿಸ್ಮೃತಿರ್ಮಮೈವಾಽಜ್ಞಾ ಯಸ್ತಾಮುಲ್ಲಂಘ್ಯ ವರ್ತತೇ ।
ಆಜ್ಞಾಚ್ಛೇದೀ ಮಮ ದ್ರೋಹೀ ಸ ವೈ ವಧ್ಯತಮೋ ಮತಃ ॥

ಸಂವರ್ತಃ:—

ಜ್ಯೋತಿಷಂ ವ್ಯವಹಾರಂ ಚ ಪ್ರಾಯಶ್ಚಿತ್ತಂ ಚಿಕಿತ್ಸಿತಂ ।
ವಿನಾ ಶಾಸ್ತ್ರೇಣ ಯೋ ಬ್ರೂಯಾತ್ತಮಾಹುರ್ಬ್ರಹ್ಮಘಾತಕಂ ॥

ವರಾಹಮಿಹಿರಃ:—

ಜ್ಯೋತಿಷಮಾಗಮಶಾಸ್ತ್ರಂ ವಿಪ್ರತಿಪತ್ತೌ ನ ಯೋಗ್ಯಮಸ್ಮಾಕಂ ।
ಸ್ವಯಮೇವ ವಿಕಲ್ಪಯಿತುಂ ಕಿಂತು ಬಹೂನಾಂ ಮತಂ ವಕ್ಷ್ಯೇ ॥



" ಶ್ರುತಿಸ್ತು ವೇದೋ ವಿಜ್ಞೇಯೋ ಧರ್ಮಶಾಸ್ತ್ರಂ ತು ವೈ ಸ್ಮೃತಿಃ ।
ತೇ ಸರ್ವಾರ್ಥೇಷ್ವಮೀಮಾಂಸ್ಯೇ ತಾಭ್ಯಾಂ ಧರ್ಮೋ ಹಿ ನಿರ್ಬಭೌ ॥
ಯೋಽವಮನ್ಯೇತ ತೇ ಮೂಲೇ ಹೇತುಶಾಸ್ತ್ರಾಶ್ರಯಾದ್ದ್ವಿಜಃ ।
ಸ ಸಾಧುಭಿರ್ಬಹಿಷ್ಕಾರ್ಯೋ ನಾಸ್ತಿಕೋ ವೇದನಿಂದಕಃ ॥ " ಇತಿಮನುಃ.

" ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ॥
ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥ " ಇತಿಗೀತಾಸು



ನಿವೇದನಂ

ಆಪರಿತೋಷಾದ್ವಿದುಷಾಂ ನ ಸಾಧು ಮನ್ಯೇ ಪ್ರಯೋಗವಿಜ್ಞಾನಂ ।
ಬಲವದಪಿ ಶಿಕ್ಷಿತಾನಾಂ ಆತ್ಮನ್ಯಪ್ರತ್ಯಯಂ ಚೇತಃ ॥

ಇತಿ ಕವಿವರಕಾಳಿದಾಸಪದ್ಯಂ ಹೃದ್ಯಮನೂದ್ಯ ನಿವೇದ್ಯತೇ ಮಯ್ಯೈಷಾ ।
ಕೃತಿರತ್ರ ಯದಿ ಪ್ರಮಾದಜಾತಂ ಕ್ಷಂತುಮಲಂ ತು ಗುಣಾನ್ನಿದಂತು ಸಂತಃ ॥
ಇತಿ.

# T. M. MAHESWARAIAH,

LAND-LORD, DAVANGERE-577 002.

REQUEST YOU TO BE PRESENT ON THE OCCASION OF THE MARRIAGE OF MY FOURTH SON,

## CHI. T. M. SADANANDA, B.Sc., D.Pharma.

WITH

## CHI. SOW. SUMA (Anitha)

(D/O SHRI B. M. KOTRABASAIAH, CHITRADURGA )

ON SUNDAY THE 19 th DECEMBER 1982 AT RAGI MURUGEPPANAVAR KALYANA MANTAPA HOLALKERE ROAD, CHITRADURGA.

MUHURTHAM :
12-34 TO 12-56 P. M.

RECEPTION :
6-30 P.M.

RECEPTION AT DAVANGERE

ON WEDNESDAY 22nd DEC. 1982 AT OUR RESIDENCE 'SHANTHINIVAS' P. B. ROAD, AT 6-30 PM.

WITH BEST COMPLIMENTS FROM : RELATIVES & FRIENDS.

